# ಆಶ್ರಮವಾಸಿ

ಬಸವರಾಜ ಕಟ್ಟೀಮನಿ



ಪ್ರತಿಭಾ ಗ್ರಂಥಮಾಲೆ, ಧಾರವಾಡ : ಹದಿಮೂರನೆ ವರುಷದ ಆರನೆ ಕಿರಣ.

# ಆಶ್ರಮವಾಸಿ





ಬಸವರಾಜ ಕಟ್ಟೀಮನಿ




೧ ಫೆಬ್ರುವರಿ ೧೯೫೭ ● ಬೆಲೆ: ರೂ. ೧—೪—೦

# ಮೊದಲ ಮಾತು

ಅನೇಕ ವರ್ಷಗಳ ಹಿಂದೆ ಅನತೋಲ್ ಫ್ರಾನ್ಸ್ ಅವರ 'ತಾಯಿಸ್' ಎಂಬ ವಿಖ್ಯಾತ ಕಾದಂಬರಿಯನ್ನೋದಿ ಬಹಳವಾಗಿ ಮೆಚ್ಚಿಕೊಂಡಿದ್ದೆ. ಅದಕ್ಕೆ ಭಾರತೀಯ ಸ್ವರೂಪವಿತ್ತು ಕನ್ನಡಕ್ಕಿಳಿಸಬೇಕೆಂಬ ವಿಚಾರ ಅಂದಿನಿಂದಲೂ ಇತ್ತು. ಇಷ್ಟು ವರ್ಷಗಳ ತರುವಾಯ ಆ ವಿಚಾರ ಕೃತಿಗಿಳಿದಿದೆ. ಇದು 'ತಾಯಿಸ್' ಕಾದಂಬರಿಯ ಶಬ್ದಶಃ ಭಾಷಾಂತರವಾಗಿರದೆ 'ರೂಪಾಂತರ' ವಾಗಿದೆಯೆಂದು ಹೇಳಬಹುದು.

ನನ್ನ ಕಾದಂಬರಿಗಳನ್ನು ಉತ್ಸಾಹದಿಂದ ಸ್ವಾಗತಿಸುತ್ತಿರುವ ಓದುಗರು ಪ್ರಸ್ತುತ ಕೃತಿಯನ್ನು ಪ್ರೀತಿಯಿಂದ ಬರಮಾಡಿಕೊಳ್ಳುವರೆಂದು ಆಶಿಸಿದ್ದೇನೆ.

ಮಲಾಮರಡಿ
೧—೨—೧೯೫೬

**ಬಸವರಾಜ ಕಟ್ಟೀಮನಿ**



ಮುದ್ರಕರು ಮತ್ತು ಪ್ರಕಾಶಕರು:
ಭಾಲಚಂದ್ರ ವೆಂಕಟೇಶ ಘಾಣೇಕರ,
ಪ್ರತಿಭಾ ಮುದ್ರಣ, ಭಗತಸಿಂಗ ಬೀದಿ, ಧಾರವಾಡ.



"ಓಂ ನಮಃ ಶಿವಾಯ....ಓಂ ನಮಃ ಶಿವಾಯ...."

ಸಿದ್ಧನಾಥನ ಕಂಠದಿಂದ ಹೊರಟ ಆ ಪ್ರಣವ ಮಂತ್ರ ಶ್ರೀಶೈಲ ಪರ್ವತದ ಆ ಭಾಗದಲ್ಲೆಲ್ಲ ಪ್ರತಿಧ್ವನಿಸುತ್ತಿತ್ತು.

ತನ್ನ ಕುಟೀರದೆದುರಿಗಿದ್ದ ಅಗ್ನಿಕುಂಡದ ಹತ್ತಿರ ಕುಳಿತುಕೊಂಡು ಮೂಡಲಲ್ಲಿ ಬೆಳಕಿನ ಶಿಶು ಉದಯಿಸುವುದನ್ನೆ ದಿಟ್ಟಿಸುತ್ತಲಿದ್ದ ಹಾಗೆ ಸಿದ್ಧನಾಥನಿಗೆ ಬಾಹ್ಯಪ್ರಜ್ಞೆ ತಪ್ಪಿಹೋಗಿತ್ತು. ಪರ್ವತದ ಮೇಲಿನ ತಮ್ಮ ಆಶ್ರಮ ತನ್ನ ಕುಟೀರ, ಇನ್ನಿತರ ಸಂನ್ಯಾಸಿಗಳ ಕುಟೀರಗಳು, ಎಡಗಡೆ ಬಲಗಡೆ ಮತ್ತು ಹಿಂಭಾಗದಲ್ಲಿ ಮೂಲೆಮೂಲೆಯಾಗಿ ಎದ್ದುನಿಂತ ಬೆಟ್ಟಗಳು ಎಲ್ಲವನ್ನು ಮರೆತು ಆತ ಪ್ರಣವ ಮಂತ್ರವೊಂದರಲ್ಲಿಯೆ ತನ್ನೆಲ್ಲ ಚಿತ್ತವನ್ನು ತೊಡಗಿಸಿ ಗಂಭೀರ ಸ್ವರದಿಂದ ಘೋಷಿಸುತ್ತಲಿದ್ದ.

ಹತ್ತು ಹದಿನೈದು ನಿಮಿಷಗಳ ವರೆಗೆ ಹಾಗೇ ಅಲುಗಾಡದೆ ಕುಳಿತುಕೊಂಡಿದ್ದ ಸಿದ್ಧನಾಥ. ಆ ವೇಳೆಗಾಗಲೆ ಸೂರ್ಯಬಿಂಬ ಇನ್ನಷ್ಟು ಉಜ್ವಲವಾಗಿ ಬೆಳಗುತ್ತ ಮೇಲೇರಿ ಬಂದಿತ್ತು. ಆಶ್ರಮದಲ್ಲಿ ನಿತ್ಯದ ಚಟುವಟಿಕೆಗಳು ರಭಸದಿಂದ ನಡೆಯತೊಡಗಿದ್ದುವು.

ಸಿದ್ಧನಾಥ ಮೆಲ್ಲನೆ ವೈತಿಳಿದು ಕಣ್ದೆರೆದು ನೋಡಿದ. ಉದಯಕಾಲದ ರಕ್ತಕಾಂತಿಯಿಂದ ಶ್ರೀಶೈಲ ಪರ್ವತ ಶೋಭಾಯಮಾನವಾಗಿತ್ತು.

"ಜೈ ಗೌರೀ ಶಂಕರ್ !" ಎಂದು ಘೋಷಿಸುತ್ತ ಆತ ಎದ್ದುನಿಂತ. ಆರು ಅಡಿಗಳಿಗಿಂತ ಎತ್ತರವಾಗಿದ್ದ ಸುದೃಢ ದೇಹ ಆತನದು. ಹಲವು ವರ್ಷಗಳ

ತಪಸ್ಸಿನಿಂದ ಸಂಪಾದಿಸಿದ ತೇಜಸ್ಸು ಮುಖದ ಮೇಲೆದ್ದು ಕಾಣುತ್ತಿತ್ತು. ಹುಲಿ ಸಿಂಹ ಆನೆ ಮೊದಲಾದ ವನ್ಯಪಶುಗಳೂ ಈ ಭೀಮ ತಪಸ್ವಿಯೆದುರಿಗೆ ಹಸುಗಳಂತೆ ಆಡುತ್ತಿದ್ದುವು. ಪ್ರಕೃತಿಯ ಪ್ರಚಂಡ ಆಘಾತಗಳಾವುವೂ ಅವನನ್ನು ಮಣಿಸಲು ಶಕ್ತವಾಗಿರಲಿಲ್ಲ. ಚಳಿ ಮಳೆ ಬಿಸಿಲು ಯಾವುದಕ್ಕೂ ಆತ ತಲೆಬಾಗಿಸುತ್ತಿರಲಿಲ್ಲ. ಕುಟೀರಕ್ಕಿಂತ ಹೆಚ್ಚಾಗಿ ಪರ್ವತವೇ ಅವನ ವಾಸಸ್ಥಾನವಾಗಿತ್ತು. ಕೌಪೀನವೊಂದನ್ನುಳಿದು ಇನ್ನಾವ ವಸ್ತ್ರವನ್ನೂ ಆತ ಧರಿಸುತ್ತಿರಲಿಲ್ಲ. ಬೆಟ್ಟದ ಶಿಖರವನ್ನೇರಿ ಅಲ್ಲಿ ಸಮಾಧಿಸ್ಥನಾಗಿ ಕುಳಿತು ಕೊಂಡರೆ ತಿಂಗಳುಗಳ ವರೆಗೂ ಕದಲದೆ ಕುಳಿತಿರುತ್ತಿದ್ದ. ಅವನ ಭೀಮಶಕ್ತಿ ಯನ್ನೂ ವಜ್ರನಿಷ್ಠೆಯನ್ನೂ ಕಂಡು ಆಶ್ರಮದ ಸಂನ್ಯಾಸಿಗಳೆಲ್ಲ ಅವನಿಗೆ ಗೌರವ ದಿಂದ ತಲೆವಾಗುತ್ತಿದ್ದರು. ಆಶ್ರಮದ ಮುಖ್ಯ ಗುರುವೂ ಆ ಶೈವಪಂಥೀಯ ಸಂನ್ಯಾಸಿಗಳ ಮುಖ್ಯಾಧಿಕಾರಿಯೂ ಆಗಿದ್ದ ಪೂಜ್ಯಪಾದನೂ ಕೂಡಾ ಸಿದ್ಧ ನಾಥನನ್ನು ಅತಿಶಯವಾದ ಆದರದಿಂದ ಕಾಣುತ್ತಿದ್ದ; ತನ್ನ ತರುವಾಯ ಸಿದ್ಧ ನಾಥನನ್ನೇ ಆಶ್ರಮದ ಮುಖ್ಯಾಧಿಕಾರಿಯನ್ನಾಗಿ ಮಾಡುವುದೆಂದು ಆತ ಎಂದೋ ನಿರ್ಧರಿಸಿಕೊಂಡಿದ್ದ.

ಆ ಪಂಥದ ಕೀರ್ತಿಗೆ ಲುಬ್ಧರಾಗಿ ದೂರದೂರದ ಪ್ರದೇಶಗಳಿಂದ ಸಾಧು ಗಳು ಆಗಮಿಸಿ ಪೂಜ್ಯಪಾದನ ನೇತೃತ್ವವನ್ನೊಪ್ಪಿ ಅಲ್ಲಿ ನೆಲೆಸಿ ಸಾಧನೆಗಳಲ್ಲಿ ನಿರತರಾಗಿದ್ದರು. ಅವರ ದೈನಂದಿನ ಜೀವನ ಅತ್ಯಂತ ಕಠಿನವಾದುದಾಗಿತ್ತು. ಅವರು ನೆಲದ ಮೇಲೆಯೆ ಮಲಗುತ್ತಿದ್ದರು. ರಾತ್ರೆಯಿಡೀ ಜಾಗರಣೆ ಮಾಡುತ್ತ ಶಿವಭಜನೆ ನಡಸುತ್ತಿದ್ದರು. ತಮ್ಮ ಪೂರ್ವಜೀವನದ ಪಾಪ ಗಳನ್ನು ತೊಡೆದುಹಾಕಲೆಂದು ಅವರು ಸಮಸ್ತ ಆನಂದಗಳನ್ನೂ ತೃಪ್ತಿ ಗಳನ್ನೂ ತ್ಯಜಿಸಿ ಪ್ರಾಯಶ್ಚಿತ್ತದ ಕಷ್ಟಕರ ಕಾರ್ಯಗಳಲ್ಲಿ ನಿರತರಾಗುತ್ತಿದ್ದರು; ಲೋಕದ ಆಕರ್ಷಣೆಗಳಿಂದ ವಿಮುಖರಾಗಿರಲು ಸತತವಾಗಿ ಶ್ರಮಿಸುತ್ತಿದ್ದರು.

"ಆತ್ಮದ ಶಕ್ತಿಯನ್ನು ಹೆಚ್ಚಿಸಲು ಶಾರೀರಿಕ ಯಾತನೆಗಳೇ ಬೇಕು. ನೀವು ಕಷ್ಟಪಟ್ಟಷ್ಟು ನಿಮ್ಮ ಮನಸ್ಸು ಗಟ್ಟಿಯಾಗುವದು" ಎಂದು ತನ್ನ ಎಲ್ಲ ಶಿಷ್ಯರಿಗೂ ಪದೇಪದೇ ಬೋಧಿಸುತ್ತಿದ್ದ ಪೂಜ್ಯಪಾದ.

ಈ ಪವಿತ್ರ ಆಶ್ರಮದ ಕೆಲವರು ಸಂನ್ಯಾಸಿಗಳು ಯೋಗಸಾಧನೆಯಲ್ಲಿ ನಿರತರಾಗಿದ್ದರೆ ಇನ್ನು ಕೆಲವರು ಗುಡ್ಡಗಳ ಓರೆಗುಂಟ ಪುಟ್ಟ ಪುಟ್ಟ ಹೊಲ

ಗಳನ್ನು ಸಿದ್ಧಗೊಳಿಸಿ ಆಶ್ರಮಕ್ಕೆ ಅಗತ್ಯವಿದ್ದ ಧಾನ್ಯಗಳನ್ನು ಬೆಳೆಯುವ ಕಾಯಕ ಕೈಗೊಂಡಿದ್ದರು. ಪೂಜ್ಯಪಾದ ಸಿದ್ಧನಾಥ ಮೊದಲಾದವರೂ ಆಗಾಗ ಆ ಹೊಲಗಳಿಗೆ ಹೋಗಿ ಕಿರಿಯ ಸಂನ್ಯಾಸಿಗಳಿಗೆ ನೆರವಾಗಿ ದುಡಿಯುವುದೂ ಇತ್ತು.

ಆಗಾಗ ಅವರ ಸಾಧುತ್ವ ವಿಕಟರೂಪ ತಳೆಯುವುದೂ ಇತ್ತು. ಈಶ್ವರ ವಿರೋಧಿ ಕೃತ್ಯಗಳಲ್ಲಿ ತೊಡಗಿರುವವರನ್ನು ಶಿಕ್ಷಿಸುವ ಸಾಮರ್ಥ್ಯವನ್ನು ಪರಮಾತ್ಮ ತಮಗೆ ನೀಡಿರುವನೆಂದೇ ಅವರು ನಂಬಿಕೊಂಡಿದ್ದರು. ದುಷ್ಟಜೀವನ ನಡಸುವ ಎಲ್ಲ ಜನರು, ವಿಶೇಷವಾಗಿ ಧೂರ್ತರೂ ವಿವಾಹಿತರಾದ ಮಠಾಧಿಕಾರಿಗಳೂ ವೇಶ್ಯೆಯರೂ ಈ ಸಂನ್ಯಾಸಿಗಳನ್ನು ಕಂಡರೆ ಥರಥರ ನಡುಗುತ್ತಿದ್ದರು.

ಪೂಜ್ಯಪಾದ ಗುರುಮಹಾರಾಜನಿಗಾಗ ನೂರಕ್ಕಿಂತ ಹೆಚ್ಚು ವಯಸ್ಸಾಗಿತ್ತು. ಇತ್ತೀಚೆಗೆ ಕೆಲ ದಿನಗಳಿಂದ ಆತ ಆಶ್ರಮದಿಂದ ತುಸು ದೂರದಲ್ಲಿದ್ದ ಗುಹೆಯೊಂದರಲ್ಲಿ ಒಬ್ಬ ಕಿರಿಯ ಶಿಷ್ಯನೊಡನೆ ವಾಸಿಸುತ್ತಿದ್ದ. ಎಂತಲೇ ಆಶ್ರಮದ ಮೇಲ್ವಿಚಾರಣೆಯ ಹೊಣೆಯೆಲ್ಲವೂ ಸಿದ್ಧನಾಥನ ಮೇಲೆ ಬಿದ್ದಿತ್ತು. ಆದಿನಾಥ ಮತ್ತು ಬಿಂದುನಾಥ ಎಂಬ ಇನ್ನಿಬ್ಬರು ಶಿಷ್ಯರೂ ಪ್ರಭಾವಶಾಲಿಗಳಾಗಿದ್ದರು. ಆದರೆ ಇವರೆಲ್ಲರಿಗಿಂತ ಸಿದ್ಧನಾಥನ ತಪಸ್ಸು ಹೆಚ್ಚಿನದಾಗಿತ್ತು. ಆತ ಇವರಿಗಿಂತ ಅತಿ ಕಠಿನ ತರದ ಉಪವಾಸ ಮಾಡುತ್ತಿದ್ದ. ಮೂರು ಮೂರು ದಿನಗಳವರೆಗೂ ನಿರಾಹಾರಿಯಾಗಿರುತ್ತಿದ್ದ. ಬೆಳಗಿನಲ್ಲೂ ಸಂಜೆಯಲ್ಲೂ ತನ್ನನ್ನು ತಾನೇ ಚಬಕದಿಂದ ಹೊಡೆದುಕೊಳ್ಳುತ್ತಿದ್ದ. ಗಂಟೆಗಂಟೆಗಳ ವರೆಗೂ ಎಡೆಬಿಡದೆ ಭಜನೆ ಮಾಡುತ್ತ ಕೂಡುತ್ತಿದ್ದ. ಅವನ ದೃಷ್ಟಿಗೆ ದೃಷ್ಟಿ ಸೇರಿಸಿ ಅವನೊಡನೆ ಮಾತಾಡುವದಕ್ಕೂ ಅನೇಕರಿಗೆ ಭಯವೆನಿಸುತ್ತಿತ್ತು. ಪರಮಾತ್ಮ ಅವನ ತಪಸ್ಸಿಗೆ ಮೆಚ್ಚಿ ತನ್ನ ಉರಿಗಣ್ಣನ್ನೇ ಅವನಿಗೆ ದಯಪಾಲಿಸಿರುವನೆಂದು ಸಂನ್ಯಾಸಿಗಳು ಆಡಿಕೊಳ್ಳುತ್ತಿದ್ದರು. ಅವನ ಈ ಕೀರ್ತಿ ದೂರ ದೂರದ ವರೆಗೂ ಹರಡಿ ದಕ್ಷಿಣ ಭಾರತದ ಎಲ್ಲ ರಾಜ್ಯಗಳಲ್ಲೂ ಅವನ ಹೆಸರು ಪ್ರಸಿದ್ಧಿ ಪಡೆದಿತ್ತು.

ಕಲ್ಯಾಣ ಪಟ್ಟಣದ ಧನಿಕ ಪರಿವಾರವೊಂದರಲ್ಲಿ ಸಿದ್ಧನಾಥ ಜನ್ಮ ತಳೆದಿದ್ದ. ಭೌತಿಕ ವಿಷಯಗಳ ಉಚ್ಚ ಶಿಕ್ಷಣವೂ ಅವನಿಗೆ ಲಭಿಸಿತ್ತು.

ಕವಿಗಳ ಮತ್ತು ದಾರ್ಶನಿಕರ ಕಾಲ್ಪನಿಕ ಶಬ್ದ ಜಾಲದಲ್ಲೂ ಆತ ಸಿಕ್ಕಿಕೊಂಡಿದ್ದ. ಯೌವನದ ದಿನಗಳಲ್ಲಿ ಅವನ ಮೆದುಳು ದೂಷಿತವಾಗಿತ್ತು. ವಿಚಾರಗಳು ಅಸ್ತವ್ಯಸ್ತವಾಗಿದ್ದುವು. ಸದ್ಗುಣ, ಶೀಲ, ಸಚ್ಚಾರಿತ್ರ್ಯ ಎಂಬ ಶಬ್ದಗಳು ಕಿವಿಗೆ ಬೀಳುತ್ತಲೂ ಆತ ಉಪಹಾಸದಿಂದ ನಗುತ್ತಿದ್ದ. ದೇವರ ಅಸ್ತಿತ್ವದಲ್ಲೂ ಅವನಿಗಾಗ ನಂಬುಗೆಯಿರಲಿಲ್ಲ. ಪಟ್ಟಣದ ಅನೇಕ ಧನಿಕ ಯುವಕರ ಹಾಗೆ ಅವನೂ ವಿಷಯಲಂಪಟನಾಗಿ ತನ್ನ ಜೀವನದ ಹಲವು ವರ್ಷಗಳನ್ನು ಕಳೆದಿದ್ದ. ಆದರೆ, ಇಪ್ಪತ್ತೆರಡರ ಪ್ರಾಯದಲ್ಲಿ ಅವನಿಗೆ ಇದ್ದಕ್ಕಿದ್ದ ಹಾಗೇ ವಿರಕ್ತಿಯುಂಟಾಗಿತ್ತು. ಶೈವಪಂಥೀಯ ಸಂನ್ಯಾಸಿಗಳಿಂದ ಆಕರ್ಷಿತನಾಗಿ ಆತ ಶ್ರೀಶೈಲಕ್ಕೆ ಬಂದು ಅಂದಿನಿಂದಲೂ ಇಲ್ಲಿಯೆ ನೆಲಸಿದ್ದ. ತನ್ನ ಗತಜೀವನದ ನೆನಪು ಬಂದಾಗಲೆಲ್ಲ ಅವನಿಗೆ ಅತ್ಯಂತ ಲಜ್ಜೆಯಾಗುತ್ತಿತ್ತು.

"ಆ ದಿನಗಳಲ್ಲಿ ಮಾಯೆ ನನ್ನನ್ನು ತನ್ನ ತೋರು ಬೆರಳಿನಿಂದ ಕುಣಿಸುತ್ತಿತ್ತು. ಮಿಥ್ಯಾ ಪ್ರಪಂಚದ ಜಳ್ಳು ಆನಂದವೇ ಸರ್ವಸ್ವವೆಂದು ಭ್ರಮಿಸಿ ನಾನು ಅದರಲ್ಲೇ ಲೀನನಾಗಿದ್ದೆ. ರುಚಿಕರವಾದ ಪಂಚಪಕ್ವಾನ್ನಗಳನ್ನುಣ್ಣುತ್ತಿದ್ದೆ. ಸಂಗೀತ ನೃತ್ಯಗಳ ಪ್ರದರ್ಶನಗಳಲ್ಲೂ ಭಾಗಿಯಾಗುತ್ತಿದ್ದೆ. ವೇಶ್ಯೆಯರ ಮನೆಗಳಿಗೂ ಹೋಗುತ್ತಿದ್ದೆ. ಯಾವ ಪಾಪವನ್ನೂ ನಾನು ಮಾಡದೆ ಬಿಡಲಿಲ್ಲ. ಇಪ್ಪತ್ತೆರಡರ ವರೆಗಿನ ನನ್ನ ಜೀವನಕ್ಕೆ ಜೀವನ ಅನ್ನುವುದಕ್ಕಿಂತ ಮೃತ್ಯು ಅನ್ನುವುದೇ ಸರಿ." ಎಂದು ಆತ ತನ್ನ ಜೊತೆಗಾರರಿಗೆ ಹೇಳುತ್ತಿದ್ದುದಿತ್ತು.

ಸಂನ್ಯಾಸ ಸ್ವೀಕರಿಸಿದ ತರುವಾಯ ಮಾತ್ರ ಅವನ ಜೀವನ ಪೂರ್ತಿಯಾಗಿ ಬದಲಾಗಿತ್ತು. 'ಸತ್ಯ'ದ ಪೂರ್ಣ ರೂಪವನ್ನು ಆತ ಗುರುತಿಸಲಾರಂಭಿಸಿದ್ದ. ಸತ್ಯದ ಬೆಳಕು ತನ್ನ ಮನಸ್ಸು ಪ್ರಾಣಗಳನ್ನೆಲ್ಲ ವ್ಯಾಪಿಸಿಕೊಂಡಿದೆಯೆಂದು ಆತನಿಗೆನ್ನಿಸಿತ್ತು. ಸಂನ್ಯಾಸಿಯಾದವನು ಪೂರ್ವ ಜೀವನದ ಸಂಬಂಧವಾವುದನ್ನೂ ಇಟ್ಟುಕೊಳ್ಳಬಾರದೆಂಬ ನಿಯಮದಂತೆ ಆತ ತನ್ನ ಸಮಸ್ತ ಆಸ್ತಿಯನ್ನೂ ಸಂಪತ್ತನ್ನೂ ಬಡವರಿಗೆ ಹಂಚಿಕೊಟ್ಟು ಪುನರ್ಜನ್ಮ ತಳೆದ ವ್ಯಕ್ತಿಯಂತೆ ಆಶ್ರಮವಾಸ ಸ್ವೀಕರಿಸಿದ್ದ.

ತನ್ನ ಏಕಾಂತ ಜೀವನದ ಹತ್ತು ವರ್ಷಗಳಲ್ಲಿ ಆತ ಯಾವಾಗಲೂ ವಾಸನೆಗಳಿಂದ ಪರಾಙ್ಮುಖನಾಗಿದ್ದು ತಪೋಮಯ ಜೀವನದಿಂದಲೂ ಕಷ್ಟ ಸಹಿಷ್ಣುತೆಯಿಂದಲೂ ತನ್ನ ಆತ್ಮದ ಸಂಸ್ಕಾರವನ್ನು ಶುದ್ಧಗೊಳಿಸುತ್ತಿದ್ದ.

ಆದರೆ, ಅಷ್ಟು ವರ್ಷಗಳುರುಳಿದ ಮೇಲೂ ಆತನಿಗೆ ಗತಜೀವನದ ಪಾಪಗಳಿಂದ ಪೂರ್ತಿಯಾಗಿ ಮುಕ್ತನಾಗಲು ಸಾಧ್ಯವಾಗಿರಲಿಲ್ಲ. ತನ್ನ ಯೌವ್ವನದ ಪಾಪಕೃತ್ಯಗಳನ್ನು ಮರೆಯಿಸಿ ಬಿಡಲು ಆತ ಎಷ್ಟು ಪ್ರಯತ್ನಿಸಿದರೂ ಆ ವಿಚಾರದಲ್ಲಿ ಆತನಿಗಿನ್ನೂ ಯಶಸ್ಸು ಲಭಿಸಿರಲಿಲ್ಲ. ವಿಶೇಷವಾಗಿ ಒಂದು ವ್ಯಕ್ತಿ ಅವನ ಸ್ಮೃತಿಪಟಲದ ಮೇಲೆ ಮತ್ತೆ ಮತ್ತೆ ಕಾಣಿಸಿಕೊಂಡು ಅವನ ಚಿತ್ತವನ್ನು ಅಸ್ವಸ್ಥಗೊಳಿಸುವುದಿತ್ತು. ಆ ವ್ಯಕ್ತಿಯನ್ನು ಮರೆತು ಬಿಡಲು ಆತ ಯತ್ನಿಸಿದಷ್ಟೂ ಅದರ ನೆನವು ಅವನಿಗೆ ಗಟ್ಟಿಯಾಗಿ ಅಂಟಿಕೊಳ್ಳುತ್ತಿತ್ತು.

ಆತನ ಪಾಲಿನ ದುರ್ವಿಧಿಯಂತೆ ಅವನನ್ನು ಮತ್ತೆ ಮತ್ತೆ ಕೆಣಕುತ್ತಿದ್ದ ಆ ವ್ಯಕ್ತಿ ಕಲ್ಯಾಣ ಪಟ್ಟಣದ ಪ್ರಖ್ಯಾತ ನರ್ತಕಿ, ಮುಕ್ತಾದೇವಿ.

ಕೇವಲ ಕಲ್ಯಾಣ ಪಟ್ಟಣದಲ್ಲಿಯಷ್ಟೇ ಅಲ್ಲ—ಚಾಲುಕ್ಯ ರಾಜ್ಯದಲ್ಲೆಲ್ಲಾ ಮುಕ್ತಾದೇವಿಯ ಹೆಸರು ಪ್ರಜಾ ಸಮೂಹಕ್ಕೆ ಚಿರಪರಿಚಿತವಾದುದಾಗಿತ್ತು. ಅವಳ ನಾಟ್ಯವನ್ನು ವೀಕ್ಷಿಸಲು ದೂರ ದೂರದ ನಗರಗಳಿಂದಲೂ ರಸಿಕರು ನೆರೆಯುತ್ತಿದ್ದರು. ಮಹಾರಾಜರೆದುರು ನಡೆಯುವ ನಾಟಕ ಪ್ರದರ್ಶನಗಳಲ್ಲೂ ಮುಕ್ತಾದೇವಿ ಆಗಾಗ ಭಾಗ ವಹಿಸುತ್ತಿದ್ದಳು. ಅವಳ ಶಕುಂತಲಾ ಪಾತ್ರವನ್ನು ನೋಡಲು ಲಕ್ಷಾಂತರ ಜನ ಕಿಕ್ಕಿರಿದು ಸೇರುತ್ತಿದ್ದರು. ಅವಳ ಸೌಂದರ್ಯ, ಅವಳ ಹಾವಭಾವಗಳಿಂದ ಮೋಹಿತರಾಗದಿದ್ದ ಜನರೇ ವಿರಳ. ತಾರುಣ್ಯದ ದಿನಗಳಲ್ಲಿ ಸಿದ್ಧನಾಥನೂ ಅವಳಿಗೆ ಮರುಳಾಗಿ ಅವಳ ಸಂಗಸುಖವನ್ನು ದೊರಕಿಸಲು ಹಾತೊರೆದುದಿತ್ತು ! ಅವಳ ನಾಟ್ಯದ ಅಂಗಭಂಗಿಗಳ ಸ್ಮರಣ ಮಾತ್ರದಿಂದಲೂ ಭೀಕರ ವಾಸನೆ ಉರಿದೇಳುತ್ತಿತ್ತು. ವಿಲಾಸ ಪ್ರಿಯರಾದ ಯುವಕರೂ ವೃದ್ಧರೂ ಅವಳ ಪ್ರೀತಿಗಾಗಿ ಹಾತೊರೆದು ಅವಳ ಭವನದೆದುರಿಗೆ ಬಂದು ನಿಂತು ಹೂಮಾಲೆಗಳನ್ನರ್ಪಿಸಿದಾಗ ಅವಳು ತನ್ನ ಮೋಹಕ ನಗುವನ್ನು ಮೆರೆಸುತ್ತ ಅವರನ್ನು ಸ್ವಾಗತಿಸುತ್ತಿದ್ದಳು. ಹಾಗೆ ಅವಳ ಮನೆ ಬಾಗಿಲಿನ ವರೆಗೂ ಹೋಗಿ ನಿಂತವರಲ್ಲಿ ಸಿದ್ಧನಾಥನೂ ಒಬ್ಬನಾಗಿದ್ದ; ಆದರೆ,

ಒಳಗೆ ಪ್ರವೇಶಿಸಲು ಧೈರ್ಯ ಸಾಲದೆ ತನ್ನ ದೈವವನ್ನು ಹಳಿದುಕೊಳ್ಳುತ್ತ ಬಂದ ಹಾಗೆಯೆ ಹಿಂದಿರುಗಿದ್ದ. ಹಾಗೆ ತಾನು ಹಿಂದಿರುಗಲು ದೈವೀಪ್ರೇರಣೆಯೇ ಕಾರಣವಾಗಿರಬೇಕೆಂದು ಈಗ ಅವನಿಗನ್ನಿಸುತ್ತಿತ್ತು.

"ಮುಕ್ತಾದೇವಿಯ ಮೋಹಜಾಲದಿಂದ ನನ್ನನ್ನು ಮುಕ್ತಗೊಳಿಸಿ ನಿನ್ನ ಪಾದಗಳ ಬಳಿಗೆ ನನ್ನನ್ನು ಬರಮಾಡಿಕೊಂಡ ಪರಶಿವಮೂರ್ತಿ, ನಿನಗೆ ನಮಸ್ಕಾರ, ನಮಸ್ಕಾರ, ಶತಸಹಸ್ರ ನಮಸ್ಕಾರ" ಎಂದು ಆಗಾಗ ಹೇಳಿಕೊಳ್ಳುತ್ತ ಪರಮಾತ್ಮನ ಉಪಕಾರ ಸ್ಮರಿಸುತ್ತಿದ್ದ ಸಿದ್ಧನಾಥ.

ಆದರೂ, ತನ್ನ ಮನಸ್ಸಿನಿಂದ ಮುಕ್ತಾದೇವಿಯ ಮೂರ್ತಿಯನ್ನು ಪೂರ್ತಿಯಾಗಿ ಅಳಿಸಿಬಿಡಲು ಆತ ಸಮರ್ಥನಾಗಿರಲಿಲ್ಲ. ಅವಳ ವಿಚಾರವಾಗಿ ತನ್ನಲ್ಲಿ ಉದಿಸಿದ್ದ ವಾಸನೆಯೇ ತನ್ನ ಜೀವನದ ಮಹಾ ಭಯಂಕರ ಪಾಪವಾಗಿದ್ದಿತೆಂದು ಅವನು ಭಾವಿಸಿದ್ದ. ಮೂರ್ಖತನದ ಮತ್ತು ಅಜ್ಞಾನದ ಆ ಪ್ರಾಯದಲ್ಲಿ ಎಂಥ ಪಾಶವಿಕ ಆನಂದಗಳನ್ನು ತನ್ನಲ್ಲಿ ಜಾಗೃತಗೊಳಿಸಿದ್ದಳಲ್ಲ ಆ ವೇಶ್ಯೆ.

ಸಿದ್ಧನಾಥ ಕುಟೀರದಿಂದ ನಡೆದು ಬಂದು ಹತ್ತಿರದಲ್ಲಿಯೆ ಇದ್ದ ಕೆರೆಯ ಬಳಿ ಕುಳಿತುಕೊಂಡು ಕಣ್ಣು ಮುಚ್ಚಿಕೊಂಡ. ಮತ್ತೆ ಅವನ ಮನಸ್ಸಿನಲ್ಲಿ ಮುಕ್ತಾದೇವಿಯ ಪ್ರವೇಶವಾಗಿತ್ತು. ಅವನ ಬಗೆಗಣ್ಣಿನೆದುರು ಮುಕ್ತಾದೇವಿಯ ಪ್ರತಿಮೂರ್ತಿ ಸ್ಪಷ್ಟವಾಗಿ ಕಾಣಿಸುತ್ತಲಿತ್ತು. ಈಗಲೂ ಆಕೆ ಅಂದಿನಂತೆಯೇ ಪರಮ ಸುಂದರಿಯಾಗಿದ್ದಳು. ಅವಳು ಊರ್ವಶಿಯ ವೇಷದಲ್ಲಿ ಬಂಗಾರದ ಮಂಚದ ಮೇಲೆ ಪವಡಿಸಿದ್ದುದು ಕಾಣಿಸಿತು. ಅವಳ ಕತ್ತು ವಿಲಾಸಭಾವದಲ್ಲಿ ಹಿಂದೆ ತಿರುಗಿಕೊಂಡಿತ್ತು, ಹಣೆ ಮುಂದೆ ಬಂದಿತ್ತು. ಅವಳ ಕಣ್ಣು ಪ್ರಕಾಶವಾಗಿದ್ದರೂ ಆರ್ದ್ರತೆಯಿಂದೊಡಗೂಡಿದ್ದುವು. ಸ್ಪಂದಿಸುತ್ತಿತ್ತು ನಾಸಿಕ. ಅರೆತೆರೆದಿತ್ತು ಬಾಯಿ. ಪೂರ್ಣವಾಗಿ ವಿಕಸಿತವಾಗಿದ್ದ ದುಂಡು ದುಂಡು ಸ್ತನಗಳು. ನದಿಯ ಅಲೆಗಳಂತಿದ್ದ ಸ್ನಿಗ್ಧ ಬಾಹುಗಳು. ಅಪ್ಸರಾಸ್ತ್ರೀಯರನ್ನೂ ನಾಚಿಸುವಂತಿದ್ದ ಆ ಲಾವಣ್ಯವತಿಯ ದರ್ಶನದಿಂದ ಎಂಥ ವೀರ ವಿರಾಗಿಯ ಹೃದಯವೂ ಸೋತುಹೋಗಬಹುದಾಗಿತ್ತು.

"ಹೇ ದೇವಾಧಿದೇವಾ, ನೀನೇ ಸಾಕ್ಷಿ. ನನ್ನ ಅಪರಾಧವೆಂಥಾದ್ದೆಂಬುದು ಈಗ ನನಗೆ ಚೆನ್ನಾಗಿ ಗೊತ್ತಾಗುತ್ತಿದೆ........" ಎಂದು ತನ್ನಲ್ಲಿ ತಾನೆ

ಹೇಳಿಕೊಂಡ ಸಿದ್ಧನಾಥ.

ಸುಂದರಿಯ ಪ್ರತಿಮೆ ಮೆಲ್ಲಮೆಲ್ಲನೆ ಅಲುಗಾಡತೊಡಗಿತು. ವಿಚಿತ್ರವೂ ವಿಲಕ್ಷಣವೂ ಆದ ಭಾವಗಳು ಅವಳ ಅಧರಗಳಿಂದ ವ್ಯಕ್ತವಾಗತೊಡಗಿದ್ದವು. ಈಗ ಅವಳ ಕಣ್ಣುಗಳಲ್ಲಿ ಕಂಬನಿ ತುಂಬಿಕೊಂಡಿದ್ದುವು. ಅವಳ ಹೃದಯದಿಂದ ಬಿರುಗಾಳಿಯಂಥ ಉಸಿರು ಹೊರಸೂಸತೊಡಗಿತ್ತು. ಈ ಸ್ಥಿತಿಯಲ್ಲಿ ಅವಳನ್ನು ಕಂಡೊಡನೆ ಸಿದ್ಧನಾಥನ ತಪಸ್ವೀ ಹೃದಯವೂ ದ್ರವಿತವಾಯಿತು. ಆಕಾಶದ ಕಡೆ ಮುಖವೆತ್ತಿ ಆತ ಪ್ರಾರ್ಥಿಸತೊಡಗಿದ:

"ಹೇ ದೇವಾಧಿದೇವಾ, ಏನಿದು ನಿನ್ನ ಲೀಲೆ! ಮಾಯೆಯನ್ನು ಕುಟ್ಟಿಪುಡಿಗೈದ ನನ್ನ ಹೃದಯದಲ್ಲೂ ನೀನು ದಯೆಯನ್ನು ತುಂಬಿರಿಸಿರುವಿ. ಹೇ ದಯಾನಿಧಿಯೆ, ನಿನಗೆ ನಮಸ್ಕಾರ. ನನ್ನನ್ನು ಮತ್ತೆ ವಾಸನಾಭೂತದೆಡೆಗೆ ಸೆಳೆಯುತ್ತಿರುವ ಈ ದೌರ್ಬಲ್ಯವನ್ನು ದೂರಗೊಳಿಸು. ನಿನ್ನ ಹೆಸರಿನಲ್ಲಿ ಈ ಮಾನವ ಪ್ರಾಣಿಗಳನ್ನು ಪ್ರೀತಿಯಿಂದ ಕಾಣುವ ಶಕ್ತಿಯನ್ನು ನನಗೆ ನೀಡು. ನಾವೆಲ್ಲರೂ ನಶ್ವರ ಪ್ರಾಣಿಗಳು. ನೀನು ಅಮರ. ಈ ವೇಶ್ಯೆಯನ್ನೂ ನೀನೇ ಸೃಷ್ಟಿಸಿರುವಿಯೆಂತಲೇ ಅವಳ ಬಗ್ಗೆ ನನಗೆ ದುಃಖವಾಗಿದೆ. ಭಗವಂತಾ, ಇದೂ ನಿನ್ನ ಕೃತಿಯೇ ಅಲ್ಲವೆ? ಈ ಪಾಪಿ ಸ್ತ್ರೀಯನ್ನು ಉದ್ಧರಿಸಬೇಕೆಂಬ ಅಪೇಕ್ಷೆ ನಿನಗಿಲ್ಲವೆ? ಕಲ್ಯಾಣಪಟ್ಟಣದ ನಾಗರಿಕರನ್ನು ಪಾಪಕುಂಡದಲ್ಲಿ ಮುಳುಗಿಸುತ್ತ ಅವರನ್ನೇ ನಿನ್ನಿಂದ ವಿಮುಖರನ್ನಾಗಿಸುತ್ತಿರುವ ಈ ವೇಶ್ಯೆಗೆ ಮುಕ್ತಿಯೆಂದು? ಅವಳ ಅಪರಾಧಗಳು ಅನಂತವಾಗಿವೆ, ಘೋರವಾಗಿವೆ, ತಿರಸ್ಕರಣೀಯವಾಗಿವೆ. ಅವುಗಳ ವಿಚಾರ ಬಂದರೂ ಸಾಕು, ನನ್ನ ಮೈಯೆಲ್ಲ ನಡುಗುತ್ತದೆ, ರೋಮುಗಳೆದ್ದು ನಿಲ್ಲುತ್ತವೆ. ಆದರೆ, ಅವಳ ಅಪರಾಧ ಎಷ್ಟಿದ್ದರೂ ಅವಳ ಬಗ್ಗೆ ನನಗೆ ಕರುಣೆಯೇ ಇದೆ. ಅನಂತಕಾಲದ ವರೆಗೂ ಮಾಯೆ ಅವಳನ್ನು ಅಂಧಳನ್ನಾಗಿಡುವ ವಿಚಾರವೇ ನನ್ನ ಹೃದಯವನ್ನಿರಿಯುತ್ತಿದೆ......."

ಸಿದ್ಧನಾಥ ಹಾಗೆ ಹೇಳಿಕೊಳ್ಳುತ್ತಿದ್ದಂತೆಯೆ ಅವನ ಪಾದಗಳ ಬಳಿ ಏನೋ ಸದ್ದಾದ ಹಾಗಾಗಲು ಆತ ಅತ್ತ ದೃಷ್ಟಿ ತಿರುಗಿಸಿದ. ಆವನಿಗರಿವಾಗದಂತೆಯೇ ನರಿಯೊಂದು ಬಂದು ಅವನ ಕಾಲುಗಳ ಹತ್ತಿರ ಕುಳಿತುಕೊಂಡಿತ್ತು. ಸಿದ್ಧನಾಥ ಚಕಿತನಾಗಿ ಆ ಪ್ರಾಣಿಯ ಮುಖವನ್ನೆ ಕೆಲಹೊತ್ತು ದಿಟ್ಟಿಸುತ್ತಿದ್ದ.

ಅವನ ಅಂತರಂಗದ ವಿಚಾರಗಳನ್ನು ಆ ಧೂರ್ತ ಪ್ರಾಣಿ ಪೂರ್ತಿಯಾಗಿ ಅರಿತುಕೊಂಡಂತೆ ತೋರುತ್ತಿತ್ತು. ನಾಯಿಯಂತೆ ಬಾಲವನ್ನಲುಗಾಡಿಸುತ್ತ ಆ ನರಿಯೂ ಅವನನ್ನೇ ನೋಡುತ್ತಿತ್ತು.

ಮತ್ತೊಮ್ಮೆ ಸಿದ್ಧನಾಥನ ಹೃದಯ ಕಂಪಿಸಿತು.

" ಓಂ ನಮಃ ಶಿವಾಯ " ಎಂದು ಆತ ಉಚ್ಚ ಕಂಠದಲ್ಲಿ ಮಂತ್ರ ಘೋಷಣೆ ಮಾಡಿದ. ಆ ಧ್ವನಿ ಕಿವಿಗೆ ಬೀಳುತ್ತಲೂ ನರಿ ಗಾಬರಿಗೊಂಡು ಥಟ್ಟನೆದ್ದು ಓಡಿಹೋಯಿತು.

"ಇದರರ್ಥವೇನು ? ಇದ್ದಕ್ಕಿದ್ದ ಹಾಗೇ ನರಿ ಯಾಕೆ ಬಂತು ನನ್ನ ಹತ್ತಿರ ? ಇದಾವ ಅಶುಭದ ಸೂಚನೆ ? ಹೇ ಶಿವಶಂಕರಾ, ಹೇ ಪತಿತ ಪಾವನಾ, ನರಿಯ ರೂಪದಲ್ಲಿ ನೀನೇ ಬಂದು ನನ್ನನ್ನು ಪರೀಕ್ಷಿಸುತ್ತಿದ್ದಿಯಾ ? ಅಥವಾ ಮತ್ತೆ ನನ್ನನ್ನು ತನ್ನ ಪಾಶಕ್ಕೆ ಬಿಗಿಯಲು ಮಾಯೆಯೇ ಪ್ರತ್ಯಕ್ಷ ವಾಗಿತ್ತೋ ?"

ಸಿದ್ಧನಾಥ ಪದ್ಮಾಸನ ಹಾಕಿ ಕುಳಿತುಕೊಂಡು ದೇವರ ಧ್ಯಾನ ಮಾಡಿದ. ಧ್ಯಾನ ಮುಗಿದೊಡನೆಯೇ ಮುಕ್ತಾದೇವಿಯ ಪ್ರತಿಮೆ ಪುನಃ ಕಾಣಿಸಿ ಕೊಂಡಿತು.

ಸಿದ್ಧನಾಥ ತಲೆ ಕೆರೆದುಕೊಂಡ. ಆದೇಕೆ ಹೀಗಾಗುತ್ತಿದೆ ಮತ್ತೆ ಮತ್ತೆ ? ಇದೂ ಕೂಡಾ ಆ ಭಗವಂತನ ಪ್ರೇರಣೆಯೆ ಇರಬಹುದೇ ? ಮುಕ್ತಾದೇವಿ ಯನ್ನು ಪಾಪದ ಮಾರ್ಗದಿಂದ ಬಿಡಿಸಿ ಸಂನ್ಯಾಸದ ದಾರಿಗೆ ತರಬೇಕೆಂದು ಆತ ತನಗೆ ಸೂಚಿಸುತ್ತಿರಬಹುದೇ ?

ಸಿದ್ಧನಾಥ ಎದ್ದು ನಿಂತ, ಒಂದು ಗಳಿಗೆ ಆಕಾಶದತ್ತ ದಿಟ್ಟಿಸುತ್ತಿದ್ದು ಅನಂತರ ಆಶ್ರಮದ ಕಡೆ ಹೆಜ್ಜೆಯಿಡುತ್ತ ತನ್ನಲ್ಲಿ ತಾನೆ ಹೇಳಿಕೊಂಡ:

"ಹೌದು. ಹಾಗೇ ಇರಬೇಕು. ಮುಕ್ತಾದೇವಿಯನ್ನು ಉದ್ಧರಿಸುವುದೇ ಈಗ ನನ್ನ ಮುಂದಿರುವ ಕರ್ತವ್ಯ. ಪರಮಾತ್ಮನ ಕೃಪೆಯಿದ್ದರೆ ಈ ಕಾರ್ಯ ವನ್ನು ನಾನು ಸಹಜವಾಗಿ ನೆರವೇರಿಸಬಲ್ಲೆ."

# ೨

ಮರುದಿನ ಬೆಳಿಗ್ಗೆ, ಪ್ರಾರ್ಥನೆಯ ತರುವಾಯ ಆತ ಆದಿನಾಥನನ್ನು ಕಾಣಲೆಂದು ತುಸು ದೂರದಲ್ಲಿದ್ದ ಅವನ ಕುಟೀರಕ್ಕೆ ಹೋದ.

ವಯುಸ್ಸಿನಿಂದ ಸಿದ್ಧನಾಥನಿಗಿಂತ ಹತ್ತು ಹನ್ನೆರಡು ವರ್ಷಗಳಿಗೆ ಹಿರಿಯನಾಗಿದ್ದರೂ ಆದಿನಾಥ ಹಸುಳೆಯ ಹಾಗೆ ಬಾಲಭಾವದವನಾಗಿದ್ದ. ತನ್ನ ಕುಟೀರದ ಹಿಂಭಾಗದಲ್ಲೊಂದು ಪುಟ್ಟ ತೋಟವನ್ನು ನಿರ್ಮಿಸಿ ಆತ ಬಹಳ ಹೊತ್ತು ಅದರ ಕೆಲಸದಲ್ಲಿಯೆ ಮಗ್ನನಾಗಿರುತ್ತಿದ್ದ. ತನ್ನ ತೋಟದಲ್ಲಿ ಬೆಳೆದ ಹಣ್ಣು ಕಾಯಿಗಳನ್ನು ಪೂಜ್ಯಪಾದನಿಗೂ ಸಿದ್ಧನಾಥನಿಗೂ ಇನ್ನಿತರ ಸಂನ್ಯಾಸಿ ಬಂಧುಗಳಿಗೂ ಅರ್ಪಿಸಿ ಅದರಿಂದಲೇ ಆತ ಪರಮಾನಂದ ಹೊಂದುತ್ತಿದ್ದ. ಅವನ ಸಾತ್ವಿಕತೆಗೆ ಮಾರುಹೋಗಿ ವನ್ಯಪಶುಗಳು ಬಂದು ಚಿಕ್ಕ ಮಕ್ಕಳಂತೆ ಅವನ ಹತ್ತಿರ ಸುಳಿದಾಡುತ್ತಿದ್ದುವು. ಸೃಷ್ಟಿಯಲ್ಲಿನ ಸಕಲ ವಸ್ತುಗಳನ್ನು ಪ್ರೀತಿಸುವುದೇ ಪರಮಾತ್ಮನನ್ನೊಲಿಸಲು ಸುಲಭೋಪಾಯವೆಂದು ನಂಬಿ ಆ ರೀತಿ ವರ್ತಿಸುತ್ತಿದ್ದ ಆದಿನಾಥ.

ಸಿದ್ಧನಾಥನ ವಿಶಾಲಕಾಯ ದೂರದಿಂದ ಕಾಣಿಸಿಕೊಳ್ಳುತ್ತಲೂ ಆದಿನಾಥ ತನ್ನ ಕೈಯಲ್ಲಿದ್ದ ಕುರುಪಿಯನ್ನು ನೆಲದ ಮೇಲಿಟ್ಟು ಕೈಜೋಡಿಸುತ್ತ ಹೇಳಿದ:

"ಜೈ ಶಿವಶಂಕರ್ !"

"ಜೈ ಶಿವಶಂಕರ್ ! ಪರಮಾತ್ಮನು ನಿನಗೆ ಶಾಂತಿಯನ್ನೀಯಲಿ ಆದಿನಾಥ," ಎಂದ ಸಿದ್ಧನಾಥ.

ಹಣೆಯ ಮೇಲಿನ ಬೆವರುಹನಿಗಳನ್ನು ನೀವಿಕೊಳ್ಳುತ್ತಾ ಆದಿನಾಥನೆಂದ:

"ನಿನಗೂ ಶಾಂತಿ ದೊರೆಯಲಿ ಬಂಧು ಸಿದ್ಧನಾಥ !"

ಸಿದ್ಧನಾಥ ಹತ್ತಿರ ಬಂದು ಹೇಳಿದ:

“ತನ್ನ ಭಕ್ತರ ಸಂಗಡ ಯಾವಾಗಲೂ ಇರುವಂಥ ಆ ದಯಾಘನನ ಗುಣಗಾನ ಮಾಡುವುದೇ ನಮ್ಮ ಮಾತುಕತೆಗಳ ಏಕಮಾತ್ರ ಉದ್ದೇಶವಾಗಿದೆ ಬಂಧು. ”

“ನಿಸ್ಸಂದೇಹವಾಗಿ.”

“ಬಹಳ ದಿನಗಳಿಂದಲೂ ನನ್ನ ಮನಸ್ಸಿನಲ್ಲೊಂದು ವಿಚಾರ ಕೊರೆಯುತ್ತಿದೆ. ಅದನ್ನು ಕೃತಿಯಲ್ಲಿಳಿಸುವವರೆಗೂ ನನಗೆ ಸಮಾಧಾನವಾಗುವಂತಿಲ್ಲ. ಅದರ ಬಗೆಗೇ ನಿನ್ನ ಸಂಗಡ ಚರ್ಚೆ ಮಾಡೋಣ ಅಂತ ಬಂದೆ.”

“ನಿನ್ನಂಥ ಮಹಾಜ್ಞಾನಿಯನ್ನು ಅಸಮಾಧಾನಗೊಳಿಸುತ್ತಿರುವುದು ಅದೆಂಥಾ ವಿಚಾರವೋ ಅಂತ ನನಗೆ ಆಶ್ಚರ್ಯ.”

“ಪರಮಾತ್ಮನ ಯಶೋಭಿವೃದ್ಧಿಯನ್ನೇ ಕುರಿತು ನಾನು ಯಾವಾಗಲೂ ಚಿಂತಿಸುತ್ತಿರುತ್ತೇನೆ, ಆದಿನಾಥ. ಅದನ್ನು ಬಿಟ್ಟು ನನಗೆ ಬೇರೆ ಚಿಂತೆಯಿಲ್ಲ.”

“ಸರಿಯಾಗಿ ಹೇಳಿದೆ ಬಂಧು. ನಮ್ಮ ಪಂಥದ ಪ್ರಾಣಸ್ವರೂಪಿಯಾಗಿರುವ ನಿನ್ನ ಎದೆಯಲ್ಲಿ ಅನ್ಯ ವಿಚಾರ ಸುಳಿಯುವುದಾದರೂ ಹೇಗೆ ?”

“ಅದೇ........ಅದೇ ಒಂದು ವಿಚಾರ ನನ್ನನ್ನು ಬಹಳ ದಿನಗಳಿಂದ ಅಸ್ವಸ್ಥಗೊಳಿಸಿದೆ. ಅದನ್ನು ಕೃತಿಗಿಳಿಸುವುದು ಹೇಗೆ ? ಅದಕ್ಕೇನು ಉಪಾಯ ಅಂತ ಚಿಂತಿಸುತ್ತಿದ್ದೇನೆ.”

“ನನ್ನ ಉಪವನದ ಮೇಲೆ ಭಗವಂತ ಕೃಪೆ ಮಾಡಿರುವ ಹಾಗೆ ನಿನ್ನ ವಿಚಾರದ ಮೇಲೂ ಕೃಪೆ ಮಾಡಲಿ. ಪ್ರತಿದಿನವೂ ಪ್ರಾತಃಕಾಲ ಶಿವಶಂಕರ ನನ್ನ ಉಪವನದ ಮೇಲೆ ಮಂಜುಹನಿಯ ಮೂಲಕ ವರದಾನ ಮಾಡುತ್ತಾನೆ. ನಮಗೆ ಸದಾ ಶಾಂತಿ ದೊರೆಯಲೆಂದು ನಾವು ಅವನನ್ನು ಬೇಡಿಕೊಳ್ಳಬೇಕು. ಹೃದಯವನ್ನು ವಿಚಲಿತಗೊಳಿಸುವ ಭಾವನೆಗಳೆಂದರೆ ನನಗೆ ಅಂಜಿಕೆ. ಈ ಭಾವನೆಗಳು ನಮ್ಮನ್ನು ಸೆರೆಗುಡುಕರಂಥ ಸ್ಥಿತಿಗಿಳಿಸುತ್ತವೆ. ಅವುಗಳ ವಶಕ್ಕೊಳಗಾಗಿ ನಾವು ಅತ್ತಿತ್ತ ತೂಗಾಡುತ್ತಾ ಪತನದಾಳದಲ್ಲಿ ಬಿದ್ದುಬಿಡುವ ಸಂಭವವಿರುತ್ತದೆ. ಯಾವಾಗಲಾದರೊಮ್ಮೆ ಈ ಭಾವೋನ್ಮಾದ ನಮ್ಮನ್ನು ಉಗ್ರ ಆನಂದದಲ್ಲಿ ಮುಳುಗಿಸುತ್ತದೆ. ಈ ಮಾಯಾ ಸುಖಗಳಲ್ಲಿ ಮುಳುಗಿದ ವ್ಯಕ್ತಿ ರಾಕ್ಷಸರ ವಿಕಟಾಟ್ಟಹಾಸಕ್ಕೆ ಬಲಿಯಾಗುತ್ತದೆ.”

“ನೀನು ಹೇಳುವುದೆಲ್ಲಾ ಸರಿಯಾದದ್ದು ಆದಿನಾಥ.”

“ಸಿದ್ಧನಾಥ ಬಂಧು, ನಾನು ನಿನ್ನಷ್ಟು ಜ್ಞಾನಿಯಲ್ಲ. ಶಕ್ತಿವಂತನೂ ಅಲ್ಲ. ನಿನ್ನ ತಪಸ್ಸಿನೆದುರಿಗೆ ನನ್ನದು ತುಚ್ಛ, ಬಹು ತುಚ್ಛ. ಆದರೂ, ಶಿವ ಶಂಕರನ ಕೃಪೆಯಿಂದ ಈ ಅಲ್ಪಬುದ್ಧಿಗೆ ಹೊಳೆದಷ್ಟು ಮಾತಾಡುವ ಸಾಹಸ ಮಾಡುತ್ತಿದ್ದೇನೆ. ಬಂಧು ಸಿದ್ಧನಾಥ, ನಾನೊಬ್ಬ ಮಹಾಪಾಪಿ. ನನ್ನ ಪಾಪಗಳನ್ನು ತೊಳೆದುಕೊಳ್ಳಲು ಇಲ್ಲಿಗೆ ಬಂದಂದಿನಿಂದ ಯತ್ನಿಸುತ್ತಿದ್ದೇನೆ. ಸಂನ್ಯಾಸಿಗಳಿಗೆ ಉದಾಸೀನತೆಯೇ ಪರಮ ವೈರಿಯೆಂದು ನನ್ನ ಅನುಭವ ಹೇಳುತ್ತದೆ. ಈ ವಿಷಾದದ ಛಾಯೆ ಮನಸ್ಸು ಮತ್ತು ಪ್ರಾಣಗಳ ಮೇಲೆ ಪೂರ್ತಿಯಾಗಿ ಕವಿದುಕೊಂಡು ಭಗವಂತನ ಪ್ರಕಾಶವನ್ನು ಲುಪ್ತಗೊಳಿಸುತ್ತದೆ. ವಿಷಾದಕ್ಕಿಂತ ಅಧಿಕವಾದ ಶತ್ರು ಇನ್ನೊಂದಿರಲಾರದು. ಸಂನ್ಯಾಸಿಗಳ ಹೃದಯದಲ್ಲಿ ಈ ದುಷ್ಟ ಪ್ರವೃತ್ತಿಯ ಬೀಜ ಬಿತ್ತುವುದರಲ್ಲಿಯೇ ಮಾಯೆಯ ವಿಜಯವುಂಟು. ಅದಿರಲಿ. ನೀನಾವ ಉಪಾಯ ಸೂಚಿಸುತ್ತಿರುವಿ ಸಿದ್ಧ ನಾಥ? ಅದಕ್ಕೆ ನಾನೇನು ಸಹಾಯ ಮಾಡಬಲ್ಲೆ? ನನ್ನಿಂದ ನಿನ್ನ ಉಪಾಯಕ್ಕೆ ಸ್ವಲ್ಪವಾದರೂ ಸಹಾಯವಾದರೆ ಸಾಕು, ಅದು ನನ್ನ ಮಹಾ ಭಾಗ್ಯವೆಂದೇ ಭಾವಿಸುತ್ತೇನೆ.”

“ಬಂಧು ಆದಿನಾಥ! ನಾನು ಪರಮಾತ್ಮನ ಜಯಗಾನ ಮಾಡಬಯ ಸುತ್ತೇನೆ. ನನಗೆ ನಿನ್ನ ಸಲಹೆ ಬೇಕಾಗಿದೆ. ನಿನ್ನಲ್ಲಿ ಸತ್ಯದ ಜ್ಯೋತಿ ಯುಂಟು. ಬುದ್ಧಿಯ ಪ್ರಖರತೆಯುಂಟು.”

“ಬಂಧು ಸಿದ್ಧನಾಥ, ನಾನು ನಿನ್ನ ಚರಣಧೂಳಿಗೂ ಸಮಾನನಲ್ಲ. ಈ ಶ್ರೀಶೈಲ ಪರ್ವತದಲ್ಲಿ ಗಿಡಮರಗಳಿರುವಷ್ಟು ನನ್ನಲ್ಲಿ ಅವಗುಣಗಳಿವೆ. ಆದರೆ ವಯಸ್ಸಿನಲ್ಲಿ ಹಿರಿಯನಾದುದರಿಂದ ಸ್ವಲ್ಪ ಅನುಭವವೂ ಇದೆ. ಆ ಅನುಭವ ದಿಂದ ನಿನಗೇನಾದರೂ ಉಪಯೋಗವಾಗುವಂತಿದ್ದರೆ ಅದನ್ನು ಒದಗಿಸಲು ಸಂತೋಷದಿಂದ ಸಿದ್ಧನಾಗಿದ್ದೇನೆ.”

“ನೀನು ನನಗಿಂತಲೂ ಅನುಭವಿಕನಾದ್ದರಿಂದಲೇ ನಾನು ನಿನ್ನ ಸಲಹೆ ಕೇಳಲು ಬಂದೆ, ಬಂಧು ಆದಿನಾಥ. ವಿಷಯವೇನೆಂದರೆ— ಕಲ್ಯಾಣ ಪಟ್ಟಣ ದಲ್ಲಿ ಮುಕ್ತಾದೇವಿಯೆಂಬ ನರ್ತಕಿಯಿದ್ದಾಳೆ, ಪಾಪಮಯ ಜೀವನ ಸಾಗಿ ಸುತ್ತ ಜನತೆಗೆ ಕಲಂಕಪ್ರಾಯಳಾಗಿದ್ದಾಳೆ.”

"ಬಂಧು ಸಿದ್ಧನಾಥ! ಇದು ನಿಜವಾಗಿ ನಾವೆಲ್ಲರೂ ದುಃಖಪಟ್ಟು ಕೊಳ್ಳುವಂಥ ಮಾತೇ ಸರಿ. ಕೇವಲ ನರ್ತಕಿಯರಷ್ಟೇ ಅಲ್ಲ, ನನಗೆ ತಿಳಿದ ಮಟ್ಟಿಗೆ ಕುಲೀನ ಮನೆತನಗಳ ಅನೇಕ ಸ್ತ್ರೀಯರೂ ಇಂಥಾ ಪಾಪಮಯ ಜೀವನದಲ್ಲಿ ಮುಳುಗಿದ್ದಾರೆ. ಇದೊಂದು ಗಂಭೀರವಾದ ವ್ಯಾಧಿಯೇ ಸರಿ. ಇದಕ್ಕೇನಾದರೂ ಉಪಾಯ ಯೋಚಿಸಿದ್ದೀಯಾ?"

"ಹೌದು ಬಂಧು, ಯೋಚಿಸುತ್ತಿದ್ದೇನೆ. ಅನೇಕ ತಿಂಗಳುಗಳಿಂದ ಯೋಚಿಸಿ ಯೋಚಿಸಿ ನಿನ್ನೆ ರಾತ್ರಿ ಒಂದು ನಿರ್ಧಾರಕ್ಕೆ ಬಂದಿದ್ದೇನೆ. ಕಲ್ಯಾಣ ಪಟ್ಟಣಕ್ಕೇ ಹೋಗಿ ಈ ನರ್ತಕಿಯನ್ನು ಕಂಡು ಪರಮಾತ್ಮನ ಸಹಾಯದಿಂದ ಅವಳನ್ನು ಶುದ್ಧಗೊಳಿಸಬೇಕು."

ಆದಿನಾಥ ದಿಗಿಲುಗೊಂಡು ಪ್ರಶ್ನಿಸಿದ:

"ಈ ಕೆಲಸ ಮಾಡುವವರಾರು ಸಿದ್ಧನಾಥ?"

"ಯಾರೆಂದರೆ? ನಾನೇ. ಭಗವಂತ ಈ ಕರ್ತವ್ಯವನ್ನು ನನಗೇ ಒಪ್ಪಿಸಿದ್ದಾನೆ. ನಾನೇ ಮಾಡಬೇಕು. ನಿನ್ನ ಅಭಿಪ್ರಾಯವೇನು ಆದಿನಾಥ?"

"ಬಂಧು ಸಿದ್ಧನಾಥ, ನಾನೊಬ್ಬ ಸಾಧಾರಣ ಅಧಮ ವ್ಯಕ್ತಿ. ನನಗೆ ತಿಳಿದಷ್ಟು ಹೇಳಬಲ್ಲೆ. ಪೂಜ್ಯಪಾದ ಗುರುಮಹಾರಾಜರೊಮ್ಮೆ ಹೇಳುತ್ತಿದ್ದದ್ದು ನನಗಿನ್ನೂ ನೆನಪಿದೆ. ಸಂನ್ಯಾಸಿಗಳು ಇದ್ದ ಸ್ಥಳವನ್ನು ಬಿಟ್ಟು ಬೇರೆ ಸ್ಥಳಕ್ಕೆ ಹೋಗಲು ಅವಸರ ಮಾಡಬಾರದು . ಅಂತ ಅವರು ಉಪದೇಶಿಸುತ್ತಿದ್ದರು."

"ನಾನೀಗ ನಡಸಿರುವುದರಲ್ಲಿ ಅವಸರವೇನಾದರೂ ಕಾಣುತ್ತದೆಯೇ?"

"ಬಂಧು ಸಿದ್ಧನಾಥ, ನಿನ್ನ ನಿಶ್ಚಯದ ಬಗ್ಗೆ ನನಗೇನೂ ಸಂದೇಹವಿಲ್ಲ. ಆದರೆ, ಪೂಜ್ಯಪಾದ ಗುರುಮಹಾರಾಜರು ಹೇಳಿದ್ದು ನನಗೆ ನೆನಪಿದೆ. ನೀರಿನಿಂದ ಹೊರದೆಗೆದ ಮೀನುಗಳು ಸತ್ತುಹೋಗುವ ಹಾಗೆ ತಮ್ಮ ಕುಟೀರಗಳನ್ನು ಬಿಟ್ಟು ಸಂಸಾರಿಕರೊಂದಿಗೆ ಬೆರೆಯುವ ಸಂನ್ಯಾಸಿಗಳು ತಮ್ಮ ಪವಿತ್ರ ಕರ್ತವ್ಯಗಳಿಂದ ವಿಮುಖರಾಗುತ್ತಾರೆ ಅಂತ ಅವರು ಹೇಳುತ್ತಿದ್ದರು."

ಅಷ್ಟು ಹೇಳಿ ಆದಿನಾಥ ತನ್ನ ಕುರುಪಿಯನ್ನೆತ್ತಿಕೊಂಡು, ಫಲಭರಿತ ಅಂಜೀರ ವೃಕ್ಷವೊಂದರ ಸಾಲ್ನೂ ಕಡೆಗೆ ಮಣ್ಣು ಏರಿಸತೊಡಗಿದ. ಅಷ್ಟರಲ್ಲಿ ಹರಿಣವೊಂದು ತೋಟದ ಬೇಲಿಯ ಮೇಲೆ ಹಾರಿ ಒಳಗೆ ಬಂದು ಚಕಿತ ಹಾಗೂ

ಭಯಭೀತ ಮುದ್ರೆಯಿಂದ ನಿಂತುಕೊಂಡಿತು. ಮತ್ತೆ ಎರಡು ಬಾರಿ ಜಿಗಿದು ಅದು ಆದಿನಾಥನ ಬಳಿ ಬಂದು ಅವನ ಎದೆಯಲ್ಲಿ ಮುಖ ಮುಚ್ಚಿಕೊಂಡಿತು.

"ಈ ಮುದ್ದು ಹರಿಣಶಿಶುವನ್ನು ಸೃಷ್ಟಿಸಿದ ಆ ಪರಮಾತ್ಮನಿಗೆ ಜಯವಾಗಲಿ!" ಎಂದ ಆದಿನಾಥ. ಕೆಲವು ಹಣ್ಣುಗಳನ್ನು ಬಿಡಿಸಿ ಆತ ಆ ಹರಿಣಿಗೆ ತಿನ್ನಿಸತೊಡಗಿದ.

ನೆಲದ ಕಡೆ ದೃಷ್ಟಿ ತಿರುಗಿಸಿ ಕೆಲಹೊತ್ತು ಯೋಚಿಸುತ್ತ ನಿಂತಿದ್ದ ಸಿದ್ಧನಾಥ; ಅನಂತರ ನಿದಾನವಾಗಿ ಹೆಜ್ಜೆಯಿಡುತ್ತ, ಆದಿನಾಥನಾಡಿದ ಮಾತುಗಳನ್ನು ಕುರಿತು ವಿಚಾರ ಮಾಡುತ್ತ ತನ್ನ ಕುಟೀರದತ್ತ ಸಾಗಿದ.

ಆತ ಮನಸ್ಸಿನಲ್ಲಿಯೆ ಹೇಳಿಕೊಂಡ: "ಆದಿನಾಥ ಬಹಳ ಅನುಭವಿಕ, ಬುದ್ಧಿಶಾಲಿ. ನನ್ನ ಉಪಾಯದ ಬಗ್ಗೆ ಅವನಿಗೆ ಸಂಶಯವಿದೆ. ಆದರೂ ಪರವಿಲ್ಲ. ನನ್ನ ನಿಶ್ಚಯವನ್ನು ನಾನು ಬದಲಿಸಲಾರೆ. ಮುಕ್ತಾದೇವಿಯನ್ನು ಪಾಪಮಾರ್ಗದಿಂದ ತಿರುಗಿಸುವುದು ಕಠಿನವಾಗಬಹುದು. ನಿಜ. ಆದರೂ ಪರಮಾತ್ಮ ನನಗೆ ಸಹಾಯ ಮಾಡಬಹುದು. ಆತನ ನೆರವಿನಿಂದ ನಾನು ಈ ಕಠಿನ ಕರ್ತವ್ಯವನ್ನು ಯಶಸ್ವಿಗೊಳಿಸಬಹುದು."

ಹಾದಿಯಲ್ಲಿ, ಬೇಟೆಗಾರನ ಬಲೆಗೆ ಸಿಕ್ಕಿ ಒದ್ದಾಡಿಕೊಳ್ಳುತ್ತಿದ್ದ ಹಕ್ಕಿಯೊಂದು ಅವನ ದೃಷ್ಟಿಗೆ ಬಿತ್ತು. ಅದೊಂದು ಹೆಣ್ಣು ಹಕ್ಕಿಯಾಗಿರಬೇಕು. ಅದರ ಜೊತೆಗಾರ ಹಕ್ಕಿ ಬಲೆಯ ಬಳಿ ಬಂದು ತನ್ನ ಚಂಚುವಿನಿಂದ ಜಾಳಿಗೆಯನ್ನು ಕಡಿದೆಸೆಯುವುದರಲ್ಲಿ ತೊಡಗಿತ್ತು. ಸಿದ್ಧನಾಥ ತಡೆದು ನಿಂತು ಆ ದೃಶ್ಯವನ್ನು ನೋಡುತ್ತಿದ್ದ ಹಾಗೆಯೇ ಅದಕ್ಕೂ ಒಂದು ಆಧ್ಯಾತ್ಮಿಕ ಅರ್ಥವಿದೆಯೆಂದು ಅವನಿಗೆನ್ನಿಸಿತು. ಬಲೆಯಲ್ಲಿ ಸಿಕ್ಕಿಬಿದ್ದಿರುವ ಹಕ್ಕಿಯೇ ಮುಕ್ತಾದೇವಿ; ಆ ಗಂಡುಹಕ್ಕಿ ತನ್ನ ಚಂಚುವಿನಿಂದ ಜಾಳಿಗೆಯನ್ನು ಛಿನ್ನವಿಚ್ಛಿನ್ನಗೊಳಿಸಿದಂತೆ ತಾನು ತನ್ನ ಶಕ್ತಿಪೂರ್ಣ ವಾಣಿಯಿಂದ ಮುಕ್ತಾದೇವಿಯನ್ನು ಬಂಧಿಸಿದ ಪಾಪಜಾಲವನ್ನು ತುಂಡರಿಸಬೇಕು. ಪರಮಾತ್ಮನನ್ನು ಮನಸ್ಸಿನಲ್ಲಿಯೇ ವಂದಿಸಿ, ತನ್ನ ಮೊದಲಿನ ನಿಶ್ಚಯವನ್ನು ಆತ ದೃಢಗೊಳಿಸಿದ.

ಅಷ್ಟರಲ್ಲಿಯೇ ಅವನನ್ನು ಆಶ್ಚರ್ಯಚಕಿತನನ್ನಾಗಿಸುವ ಇನ್ನೊಂದು ಘಟನೆ ಜರುಗಿತು. ಜಾಳಿಗೆಯನ್ನು ತುಂಡರಿಸಿ ಜೊತೆಗಾರ್ತಿಯನ್ನು ಮುಕ್ತ

ಗೊಳಿಸಲೆತ್ನಿಸುತ್ತಿದ್ದ ಆ ಗಂಡುಹಕ್ಕಿ ಕೊನೆಗೆ ತಾನೂ ಆ ಜಾಳಿಗೆಯಲ್ಲೇ ಸಿಕ್ಕಿಕೊಂಡು ಆರ್ತಸ್ವರದಿಂದ ಪ್ರಲಾಪಿಸತೊಡಗಿದೆ.

ಮತ್ತೆ ಸಿದ್ಧನಾಥನ ಮನಸ್ಸು ವಿಚಲಿತವಾಯಿತು. ತಗ್ಗಿಸಿದ ತಲೆಯನ್ನು ಮೇಲಕ್ಕೆತ್ತದೆ ಆತ ಕುಟೀರದತ್ತ ಸಾಗಿದ.

ಆ ರಾತ್ರಿಯಿಡೀ ಅವನಿಗೆ ನಿದ್ದೆ ಹತ್ತಲಿಲ್ಲ. ಬೆಳಗಿನ ಜಾವ ಅವನಿಗೊಂದು ಕನಸು ಕಾಣಿಸಿತು. ಆ ಕನಸಿನಲ್ಲಿ ಮುಕ್ತಾ ಮತ್ತೆ ಪ್ರತ್ಯಕ್ಷಳಾದಳು. ಅವಳ ಮೊಗದ ಮೇಲೆ ಕಲುಷಿತ ಆನಂದದ ಛಾಯೆಯಿರಲಿಲ್ಲ. ಎಂದಿನಂತೆ ಅವಳು ಬಹುಮೂಲ್ಯ ವಸ್ತ್ರಗಳನ್ನು ಧರಿಸಿರಲಿಲ್ಲ. ಬಿಳಿಯ ವಸ್ತ್ರವೊಂದರಲ್ಲಿ ಅವಳ ದೇಹವೆಲ್ಲ ಮುಚ್ಚಿಹೋಗಿ ಮುಖದ ಸ್ವಲ್ಪ ಭಾಗವಷ್ಟೆ ಹೊರಗೆ ಕಾಣುತ್ತಿತ್ತು. ದೊಡ್ಡ ದೊಡ್ಡ ಕಂಬನಿಗಳಿಂದ ತುಂಬಿದ್ದ ಅವಳ ಕಣ್ಣುಗಳು ಮಾತ್ರ ಗೋಚರವಾಗುತ್ತಿದ್ದುವು.

ಅವಳನ್ನು ಆ ದಯನೀಯ ಸ್ಥಿತಿಯಲ್ಲಿ ಕಂಡ ಮಾತ್ರಕ್ಕೇ ಅವನಿಗೂ ಅಳು ಒತ್ತರಿಸಿ ಬಂತು. ಅಳುತ್ತಿದ್ದ ಹಾಗೆಯೆ ಕನಸೊಡೆದು ಆತ ಎಚ್ಚೆತ್ತುಕೊಂಡ. ಭಗವಂತನ ಪ್ರೇರಣೆಯಿಂದಲೇ ತನಗೆ ಆ ಕನಸು ಕಾಣಿಸಿಕೊಂಡಿರಬೇಕೆಂದು ಆತ ನಂಬಿದ.

ಆತ ಎದ್ದು ಪ್ರಾತರ್ವಿಧಿಗಳನ್ನು ತೀರಿಸಿಕೊಂಡು ಬಂದ. ತನ್ನ ಕುಟೀರದ ಬಾಗಿಲು ಮುಚ್ಚಿದ. ಆಶ್ರಮದ ವ್ಯವಸ್ಥೆಯ ಭಾರವನ್ನು ಬಿಂದುನಾಥನಿಗೊಪ್ಪಿಸಿದ. ಮೈಮೇಲೆ ಒಂದು ಅಂಗವಸ್ತ್ರ ಹೊದ್ದುಕೊಂಡು ಕೈಯಲ್ಲೊಂದು ಕೋಲು ಹಿಡಿದು ಕಲ್ಯಾಣ ನಗರಕ್ಕೆ ಹೊರಟುನಿಂತ.

ಅವನನ್ನು ಬೀಳ್ಕೊಳ್ಳಲು ಆಶ್ರಮವಾಸಿಗಳೆಲ್ಲ ಅವನ ಕುಟೀರದೆದುರು ನೆರೆದರು.

"ಎಂದು ಹೊರಳಿ ಬರುತ್ತೀರಿ, ಬಂಧು ಸಿದ್ಧನಾಥ?"

"ಹ್ಯಾಗೆ ಹೇಳಲಿ ಬಂಧುಗಳೇ? ಅದೆಲ್ಲಾ ಪರಮಾತ್ಮನಿಗೇ ಸೇರಿದ್ದು. ಜೈ ಶಿವಶಂಕರ್!"

"ಜೈ ಶಿವಶಂಕರ್! ಜೈ ಗೌರೀಶಂಕರ್!" ಎಂದು ಆಶ್ರಮವಾಸಿಗಳೆಲ್ಲ ಏಕಕಂಠದಿಂದ ಘೋಷಿಸಿದರು.

ಎಲ್ಲರಿಗೂ ನಮಸ್ಕರಿಸಿ ಬೆಟ್ಟ ಇಳಿಯತೊಡಗಿದ ಸಿದ್ಧನಾಥ. ಸಂನ್ಯಾಸಿ

ಗಳು ಬೆಟ್ಟದ ಅಡಿಯುವರೆಗೂ ಬಂದು ಆತನನ್ನು ಪ್ರೇಮದಿಂದ ಬೀಳ್ಕೊಂಡು ಹಿಂದಿರುಗಿದರು.

ಪರ್ವತ ಪ್ರದೇಶವನ್ನು ದಾಟಿ ಸಿದ್ಧನಾಥ ಜನವಸತಿಯಿದ್ದ ಭಾಗಗಳಲ್ಲಿ ಹಾಯ್ದು ಕಲ್ಯಾಣ ನಗರದತ್ತ ನಡೆದ. ಹಾದಿಯಲ್ಲಿ ಅಡ್ಡಬಂದ ಚಿಕ್ಕ ನದಿಯೊಂದನ್ನು ದಾಟಿ, ಪುರಾತನ ನಗರವೊಂದರ ಅವಶೇಷಗಳನ್ನು ಹಿಂದೆ ಬಿಟ್ಟು, ಹಸಿವು ಆಯಾಸ ದಾಹಗಳ ಪರಿವೆಯಿಲ್ಲದೆ ಸಂಜೆಯಾಗುವ ವರೆಗೂ ಹಾಗೇ ನಡೆಯುತ್ತಿದ್ದ. ರಾತ್ರಿಯಾಗುತ್ತಲೂ ಹಳ್ಳಿಯೊಂದರಲ್ಲಿ ನಿಂತು ಅಲ್ಲಿನ ಹಾಳು ದೇವಾಲಯದಲ್ಲಿಳಿದುಕೊಂಡ. ಯಾರೋ ಪುಣ್ಯಾತ್ಮರು ಅವನನ್ನು ಕಂಡು ಆಹಾರ ಪದಾರ್ಥಗಳನ್ನು ತಂದುಕೊಟ್ಟರು. ಅವುಗಳನ್ನು ತಿಂದು ನೀರು ಕುಡಿದು ದೇವಾಲಯದ ನೆಲದ ಮೇಲೆ ಮಲಗಿ ಇರುಳು ಕಳೆದು ಬೆಳಗಾಗುತ್ತಲೂ ಮತ್ತೆ ಮುಂದೆ ಸಾಗಿದ.

ನಾಲ್ಕು ದಿನಗಳ ಕಾಲ ಹಾಗೆ ಪ್ರವಾಸ ಸಾಗಿದ ಬಳಿಕ ವಿಶಾಲ ನಗರವೊಂದರ ಧ್ವಂಸಾವಶೇಷ ಕಾಣಿಸಿತು. ಅಲ್ಲಿನ ದೇವಮಂದಿರಗಳು ಹಾಳು ಬಿದ್ದಿದ್ದರೂ ಅವುಗಳ ಗೋಡೆಗಳು ಪೂರ್ತಿಯಾಗಿ ಬಿದ್ದುಹೋಗದೆ ಆಗಲೂ ಎದ್ದುನಿಂತಿದ್ದುವು. ಆಧಾರಸ್ತಂಭಗಳ ಮೇಲೆ ಚಿತ್ರವಿಚಿತ್ರಾಕಾರದ ಮೂರ್ತಿಗಳಿದ್ದುವು. ಸ್ತ್ರೀಯರ ಮುಖಾಕೃತಿಗಳೂ ಪಶುಗಳ ಮುಖಾಕೃತಿಗಳೂ ಅಲ್ಲಿ ಇಲ್ಲಿ ಕಾಣುತ್ತಿದ್ದುವು. ಅಂಥ ಮೂರ್ತಿಗಳ ಮಧ್ಯೆ, ಮಂದಿರವೊಂದರಲ್ಲಿ ಮಲಗಿ ಆತ ಒಂದು ರಾತ್ರಿ ಕಳೆಯಬೇಕಾಯಿತು.

ಮತ್ತೆರಡು ದಿನಗಳು ಕಳೆದ ಬಳಿಕ ಜನವಸತಿಯಿಂದ ದೂರವಾಗಿದ್ದ ಸ್ಥಳವೊಂದರಲ್ಲಿ ತಾಡಪತ್ರಿಗಳಿಂದ ನಿರ್ಮಿತವಾಗಿದ್ದ ಬಡ ಗುಡಿಸಲೊಂದು ಅವನ ದೃಷ್ಟಿಗೆ ಬಿತ್ತು. ಅಲ್ಲಿ ಯಾವನಾದರೊಬ್ಬ ಪವಿತ್ರ ಸಾಧು ನೆಲಸಿರಬಹುದೆಂದು ಬಗೆದು ಸಿದ್ಧನಾಥ ಆ ಗುಡಿಸಲ ಬಳಿ ಬಂದ. ಬಾಗಿಲು ಮುಚ್ಚಿರಲಿಲ್ಲವಾದುದರಿಂದ ಗುಡಿಸಲಿನಲ್ಲಿದ್ದ ಒಂದು ಕೊಡವೂ ಎಲೆಗಳದೊಂದು ಚಾಪೆಯೂ ಕಾಣಿಸಿದುವು.

"ಇವು ಸಾಧುವಿನ ಸಾಮಾನುಗಳೇ ಸರಿ. ನಿಯಮಗಳಿಗನುಸಾರವಾಗಿ ಸಾಧುಗಳು ತಮ್ಮ ಕುಟೀರದಿಂದ ಬಹಳ ದೂರ ಹೋಗುವುದಿಲ್ಲ. ಇನ್ನೇನು, ಇಷ್ಟರಲ್ಲೇ ಈ ಸಾಧು ಬಂದುಬಿಡಬಹುದು. ಆತ ಶೈವಪಂಥೀಯನೇ ಆಗಿ

ದ್ದರೆ ಅವನೊಡನೆ ಮಾತನಾಡಿ ಮುಂದೆ ಹೋಗಬಹುದು." ಎಂದುಕೊಂಡು ಸಿದ್ಧನಾಥ ಕುಟೀರದ ಸುತ್ತ ತಿರುಗಿ ಸಾಧುವನ್ನು ಹುಡುಕತೊಡಗಿದ.

ಆತನಿನ್ನೂ ನೂರು ಹೆಜ್ಜೆ ನಡೆದಿರಲಿಲ್ಲ. ಅಷ್ಟರಲ್ಲಿಯೇ ನದೀತೀರದಲ್ಲಿ ಪದ್ಮಾಸನಸ್ಥಿತನಾಗಿ ಕುಳಿತಿದ್ದ ವ್ಯಕ್ತಿಯೊಂದು ಕಾಣಿಸಿತು. ಆತನ ಮೈ ಮೇಲೆ ಬಟ್ಟೆಗಳದೊಂದು ತುಣುಕೂ ಇರಲಿಲ್ಲ. ತಲೆಗೂದಲು, ಗಡ್ಡಮೀಸೆ ಬೆಳ್ಳಗೆ ಬೆಳ್ಳಿಯಂತಿದ್ದುವು. ಪೂರ್ಣ ನಗ್ನವಾಗಿದ್ದ ಆ ದೇಹ ಒಂದು ಕನ್ನಡಿಯಂತೆ ಹೊಳೆಯುತ್ತಿತ್ತು.

ಸಂನ್ಯಾಸಿಗಳ ಪದ್ಧತಿಯಂತೆ ಸಿದ್ಧನಾಥ ಆ ಸಾಧುವಿಗೆ ನಮಸ್ಕರಿಸಿದ.

"ಜೈ ಶಿವಶಂಕರ್ ! ಜೈ ಗೌರೀಶಂಕರ್ !"

ಪ್ರತಿಯಾಗಿ ಆ ಸಾಧು ಏನನ್ನೂ ಹೇಳಲಿಲ್ಲ. ಕೊಂಚವೂ ಚಲನ ವಲನ ಮಾಡದೆ ಆತ ಸ್ಥಿರವಾಗಿ ಕುಳಿತಿದ್ದ. ಸಿದ್ಧನಾಥನ ಜಯಜಯಕಾರ ಅವನಿಗೆ ಕೇಳಿಸಿತೊ ಇಲ್ಲವೊ........

ಬೈರಾಗಿ ಭಾವೋನ್ಮಾದದಲ್ಲಿ ಮೈಮರೆತಿರುವನೆಂದು ತಿಳಿಯುತ್ತಲೂ ಸಿದ್ಧನಾಥ ತಾನೂ ಕುಳಿತು ಕೈಜೋಡಿಸಿ, ಪರಮಾತ್ಮನ ಧ್ಯಾನದಲ್ಲಿ ಮಗ್ನನಾದ. ಸಾಯಂಕಾಲದ ವರೆಗೂ ಆತ ಧ್ಯಾನ ಮಾಡುತ್ತಿದ್ದರೂ ಆ ಬೈರಾಗಿ ಮಾತ್ರ ಅಲುಗಾಡಲಿಲ್ಲ. ಇನ್ನು ಹೆಚ್ಚು ಹೊತ್ತು ಸುಮ್ಮನಿರುವುದಕ್ಕೆ ಸಮಯವಿಲ್ಲವೆಂದುಕೊಂಡು ಸಿದ್ಧನಾಥ ಮತ್ತೆ,

"ಜೈ ಶಿವಶಂಕರ್ ! ಬಂಧು ಬೈರಾಗಿ, ಈಗಲಾದರೂ ನಿನ್ನ ಸಮಾಧಿ ಇಳಿಯಿತೇ ? ಗೌರೀಶಂಕರನ ಹೆಸರಿನಲ್ಲಿ ನನಗೆ ಆಶೀರ್ವಾದ ಮಾಡು." ಎಂದು ಹೇಳಿದ.

ಸಿದ್ಧನಾಥನತ್ತ ಕತ್ತನ್ನೂ ಹೊರಳಿಸದೆ ಬೈರಾಗಿಯೆಂದ:

"ಅಪರಿಚಿತನೇ, ನಿನ್ನ ಅಭೀಷ್ಟವೇನೆಂಬುದು ನನಗೆ ತಿಳಿಯಲಿಲ್ಲ. ನಿನ್ನ ಗೌರೀಶಂಕರನನ್ನೂ ನಾನರಿಯೆ."

"ಹಾ ! ಗೌರೀಶಂಕರನನ್ನು ನೀನರಿಯೆಯಾ ? ಯಾವ ದೇವಾಧಿದೇವನನ್ನು ಋಷಿಗಳು ಹೊಗಳಿರುವರೋ, ದೇವತೆಗಳು ಸ್ತುತಿಸಿರುವರೋ, ರಾಕ್ಷಸರು ವಂದಿಸಿರುವರೋ ಆ ಗೌರೀಶಂಕರನ ಹೆಸರನ್ನು ನೀನರಿಯೆಯಾ ?"

"ಬಂಧು, ನಿಜವಾಗಿಯೂ ನಾನರಿಯೆ."

ಬೈರಾಗಿಯ ಅಜ್ಞಾನವನ್ನು ಕಂಡು ಸಿದ್ಧನಾಥನಿಗೆ ಪರಮಾಶ್ಚರ್ಯವಾಯಿತು.

"ಗೌರೀಶಂಕರನ ಹೆಸರೇ ನಿನಗೆ ತಿಳಿಯದೆಂದ ಬಳಿಕ ಈ ನಿನ್ನ ತಪಸ್ಸಿನಿಂದೇನು ಪ್ರಯೋಜನ ? ನಿನ್ನ ಪರಿಶ್ರಮಕ್ಕೇನು ಫಲ ? ನಿನಗೆ ಮುಕ್ತಿ ದೊರಕುವದಾದರೂ ಹೇಗೆ ?'

ವೃದ್ಧ ಬೈರಾಗಿ ಉತ್ತರವಿತ್ತ:

"ಕರ್ಮಮಾಡುತ್ತಿರುವುದೂ ಕರ್ಮದಿಂದ ವಿರತನಾಗಿರುವುದೂ ಎರಡೂ ವ್ಯರ್ಥ ಜೀವನ ಮತ್ತು ಮೃತ್ಯು ಎರಡರ ಬಗೆಗೂ ನಾನು ನಿರಾಸಕ್ತ."

"ಏನನ್ನುತ್ತೀಯಾ ?" ಸಿದ್ಧನಾಥ ದಿಗಿಲುಗೊಂಡು ಪ್ರಶ್ನಿಸಿದ: "ನಿನಗೆ ಮುಕ್ತಿ ಬೇಡವೇ ? ನೀನು ಸಂನ್ಯಾಸಿಯಾದರೂ ಹೌದೋ ಅಲ್ಲವೋ ?"

"ಹೇಗಾದರೂ ತಿಳಿಯಬಹುದು."

"ನೀನು ಪೂರಾ ನಗ್ನನಾಗಿದ್ದೀಯಾ. ನಿನಗೆ ಯಾವುದರ ಆಸೆಯೂ ಇಲ್ಲವೆ ?"

"ಹಾಗೂ ತಿಳಿಯಬಹುದು."

"ನೀನು ಗೆಡ್ಡೆಗೆಣಸು ಹಣ್ಣುಹಂಪಲಗಳಿಂದಲೇ ಜೀವನ ನಿರ್ವಾಹ ಮಾಡುತ್ತಿದ್ದೀಯಾ ?"

"ಹಾಗೂ ತಿಳಿಯಬಹುದು."

"ಸಂಸಾರದ ಸಮಸ್ತ ಮಾಯಾ ಮೋಹಗಳನ್ನು ನೀನು ತ್ಯಜಿಸಿಲ್ಲವೆ ?"

"ಜನರು ಆಶಿಸುವ ಆ ವ್ಯರ್ಥ ವಸ್ತುಗಳನ್ನೆಲ್ಲ ನಾನು ತ್ಯಾಗ ಮಾಡಿರುವುದು ನಿಜ."

"ಹಾಗಾದರೆ ನೀನೂ ಕೂಡಾ ನನ್ನ ಹಾಗೇ ಒಬ್ಬ ದೀನ ಸಾಧುವಾಗಿದ್ದೀಯಾ. ಆದರೆ, ನನ್ನಂತೆ ನೀನು ಭಗವಂತನ ಭಕ್ತನಾಗಿಲ್ಲ, ಸ್ವರ್ಗೀಯ ಪರಮಾನಂದವನ್ನೂ ಬಯಸುತ್ತಿಲ್ಲ. ಗೌರೀಶಂಕರನಲ್ಲೂ ನಿನಗೆ ಶ್ರದ್ಧೆಯಿಲ್ಲ. ಹಾಗಾದರೆ ನೀನು ಧರ್ಮಪರಾಯಣನೆಂದು ಹ್ಯಾಗೆ ಹೇಳುವುದು ? ಸ್ವರ್ಗೀಯ

ಸುಖದ ಆಸೆ ನಿನಗಿಲ್ಲವಾದರೆ ಸಾಂಸಾರಿಕ ಸುಖವನ್ನಾದರೂ ನೀನು ತ್ಯಜಿಸಿರುವುದೇಕೆ ?"

"ಅಪರಿಚಿತನೇ, ನಾನು ಏನನ್ನೂ ತ್ಯಜಿಸಿಲ್ಲ. ಜೀವನದ ಅತ್ಯಂತ ಸಂತೋಷಜನಕ ರೀತಿಯೊಂದು ನನಗೆ ತಿಳಿದಿದೆಯೆಂದು ನಾನು ಭ್ರಮಿಸಿದ್ದೇನೆ. ನಿಜ ಹೇಳುವುದೇ ಆದರೆ, ಈ ಜೀವನವೆಂಬುದು ಒಳ್ಳೆಯದೂ ಅಲ್ಲ, ಕೆಟ್ಟದೂ ಅಲ್ಲ. ಯಾವುದೇ ವಸ್ತುವಾಗಲಿ ತನ್ನಷ್ಟಕ್ಕೆ ತಾನು ಒಳ್ಳೆಯದಾಗಲಿ, ಕೆಟ್ಟದಾಗಲಿ, ಉಚಿತವಾಗಲಿ, ಅನುಚಿತವಾಗಲಿ, ಸುಖದಾಯಕವಾಗಲಿ, ದುಃಖದಾಯಕವಾಗಲಿ ಇರುವುದಿಲ್ಲ. ನಮ್ಮ ವಿಚಾರಗಳಿಂದಲೇ ವಸ್ತುಗಳಿಗೆ ಆ ಆ ಗುಣ ಪ್ರಾಪ್ತವಾಗುತ್ತದೆ. ಉಪ್ಪಿನಿಂದ ರೊಟ್ಟಿ ರುಚಿಕರವಾಗುವುದಿಲ್ಲವೆ ? ಹಾಗೆ........"

"ಯಾವ ವಸ್ತುವೂ ಸ್ಥಾಯಿಯಾದುದಲ್ಲವೆಂದೇ ನಿನ್ನ ಅಭಿಪ್ರಾಯವಲ್ಲವೆ ? ಪರಮಾತ್ಮನ ಅಸ್ತಿತ್ವದ ಬಗೆಗೂ ನಿನಗೆ ವಿಶ್ವಾಸವಿಲ್ಲ. ಹಾಗಾದರೆ, ನೀನೊಬ್ಬ ಹುಂಬ. ಕೊಳಚೆಯಲ್ಲಿ ಬಿದ್ದುಕೊಂಡು ನಾಯಿಯ ಹಾಗೆ ನಿದ್ರಿಸುತ್ತಿರುವ ನೀಚ........"

"ನಾಯಿಯನ್ನು ತಿರಸ್ಕರಿಸುವುದು ಹೇಗೆ ವ್ಯರ್ಥವೋ ಹಾಗೇ ದಾರ್ಶನಿಕರನ್ನು ತಿರಸ್ಕರಿಸುವುದೂ ವ್ಯರ್ಥ. ನಾಯಿಯೆಂದರೆ ಎಂಥ ವಸ್ತುವೆಂಬುದು ನಮಗೆ ತಿಳಿಯದು. ನಾವು ಯಾರೆಂಬುದೂ ನಮಗೆ ತಿಳಿಯದು. ನನಗಂತೂ ಏನೂ ತಿಳಿಯದು."

"ಹಾಗಾದರೆ ನೀನು ನಾಸ್ತಿಕ ಸಂಪ್ರದಾಯದವನಿರಬೇಕು. ಕರ್ಮ—ವಿರಾಮ ಎರಡನ್ನೂ ಒಪ್ಪಿಕೊಳ್ಳದಿರುವ ಮೂರ್ಖರ ಜಾತಿಗೆ ಸೇರಿದವನಿರಬೇಕು. ಸೂರ್ಯನ ಪ್ರಕಾಶ, ರಾತ್ರಿಯ ಕತ್ತಲು ಎರಡರಲ್ಲೂ ಯಾವ ಭೇದವನ್ನೂ ಕಾಣದಿರುವ ಮಂದಮತಿಗಳ ಗುಂಪಿಗೆ ಸೇರಿದವನಿರಬೇಕು."

"ಪ್ರಿಯ ಬಂಧು, ನೀನು ಹೇಳಿದ್ದೇ ನಿಜ. ನಾನು ನಾಸ್ತಿಕ. ನನ್ನ ನಿಲುವು ನಿನಗೆ ತಿರಸ್ಕರಣೀಯವಾಗಿ ಕಾಣಿಸಿದರೂ ನನಗೆ ಮಾತ್ರ ಸಂಪೂರ್ಣ ಸರಿಯಾಗಿಯೇ ತೋರುತ್ತದೆ. ಒಂದೇ ವಸ್ತುವಿನ ಭಿನ್ನ ಭಿನ್ನ ಆಕೃತಿಗಳಿರುತ್ತವೆ. ಬಾಹ್ಯರೂಪಗಳನ್ನು ನಾನು ಉಪೇಕ್ಷಿಸುವೆನೆಂದು ನೀನು ನನ್ನನ್ನು ದೂಷಿಸುತ್ತಿದ್ದೀಯೆ. ಆದರೆ ವಾಸ್ತವವಾಗಿ ಈ ಬಾಹ್ಯ ರೂಪಗಳೇ ಪೂರ್ಣ

ಸತ್ಯವೆಂದು ನಾನು ತಿಳಿಯುತ್ತೇನೆ. ಸೂರ್ಯನನ್ನು ನೋಡಿದರೆ ಪ್ರಕಾಶ ಮಾನನಾಗಿ ಕಾಣುತ್ತಾನೆ. ಆದರೆ ಆತನ ಸ್ವಭಾವವೇನೆಂಬುದು ನನಗೆ ತಿಳಿಯದು. ಬೆಂಕಿಯಿಂದ ಬೆಂಕಿ ಉರಿಯುತ್ತದೆಂಬುದು ನನಗೆ ಗೊತ್ತು. ಆದರೆ ಅದು ಹೇಗೆ ಉರಿಯುತ್ತದೆ, ಏಕೆ ಉರಿಯುತ್ತದೆಂಬುದು ನನಗೆ ತಿಳಿಯದು. ನಾನು ನೀಚನೆಂದು ನೀನು ಭಾವಿಸುವುದೂ ವ್ಯರ್ಥ. ಭಾವನೆಗಳಿಂದ ಏನೂ ಆಗುವುದಿಲ್ಲ."

"ಈ ನಿರ್ಜನ ಪ್ರದೇಶದಲ್ಲಿ ಹಣ್ಣು ಹಂಪಲು ತಿಂದು ಏತಕ್ಕಾಗಿ ಜೀವಿಸಿರುವೆ ನೀನು? ಏತಕ್ಕಾಗಿ ಶ್ರಮಪಡುತ್ತಿರುವೆ? ನಾನು ಕೂಡಾ ನಿನ್ನ ಹಾಗೇ ಕಷ್ಟಪಡುತ್ತೇನೆ, ನಿನ್ನ ಹಾಗೇ ಏಕಾಂತದಲ್ಲಿ ಸಂಯಮ ಸಾಧನೆ ಮಾಡುತ್ತೇನೆ. ಆದರೆ ಹೀಗೆ ಮಾಡುವುದರಲ್ಲಿ, ಈಶ್ವರನನ್ನು ಪ್ರಸನ್ನಗೊಳಿಸಿ ಮುಕ್ತಿ ಪಡೆಯಬೇಕೆಂಬುದೇ ನನ್ನ ಉದ್ದೇಶ. ಈ ಉದ್ದೇಶ ಯೋಗ್ಯವಾದದ್ದು. ಮಹಾ ಪುರಸ್ಕಾರವೊಂದರ ಅಭಿಲಾಷೆಯಿಂದ ಕಷ್ಟ ಸಹಿಸುವುದೂ ಉಚಿತವಾದದ್ದು. ಯಾವ ಉದ್ದೇಶವೂ ಇಲ್ಲದೆ ವ್ಯರ್ಥವಾಗಿ ಕಷ್ಟಪಡುವುದೆಂದರೆ ಮೂರ್ಖತನವೇ ಸರಿ. ದೇವರಲ್ಲಿ ನನಗೆ ನಂಬಿಕೆಯಿಲ್ಲದಿದ್ದರೆ ನಾನು ಸಂಸಾರಕ್ಕೇ ತಿರುಗಿ ಹೋಗುತ್ತಿದ್ದೆ, ಹಣ ಸಂಪಾದಿಸುತ್ತಿದ್ದೆ, ವಿಲಾಸದಿಂದಲೂ ವೈಭವದಿಂದಲೂ ಜೀವಿಸುತ್ತಿದ್ದೆ, ಮದ್ಯ ಸೇವಿಸುತ್ತಿದ್ದೆ, ಆನಂದತುಂದಿಲನಾಗುತ್ತಿದ್ದೆ. ಆದರೆ, ನೀನು ಮಾಡುತ್ತಿರುವುದೇನು ಮೂರ್ಖ! ಎಲ್ಲ ಸುಖಗಳನ್ನು ತ್ಯಜಿಸಿ ಬಿಟ್ಟು, ಏನನ್ನೂ ಸಂಪಾದಿಸದೆ ಎಲ್ಲವನ್ನೂ ಕಳೆದುಕೊಳ್ಳುತ್ತಿದ್ದೀಯೆ. ನಮ್ಮಂಥ ಸಂನ್ಯಾಸಿಗಳನ್ನು ವ್ಯರ್ಥವಾಗಿ ಅನುಕರಿಸುತ್ತಿದ್ದೀಯೆ. ಚಿತ್ರಕಾರ ಚಿತ್ರ ತೆಗೆಯುವುದನ್ನು ಕದ್ದುನೋಡಿದ ಕೋತಿ ತಾನೂ ಗೋಡೆಯ ಮೇಲೆ ಮಸಿಯ ಗೆರೆ ಎಳೆಯುವ ಹಾಗೆ ನಿನ್ನ ಪ್ರಯತ್ನ. ಏನು? ಇದಕ್ಕೆ ಉತ್ತರವೇನು ?"

ಅತ್ಯಂತ ಆವೇಶದಲ್ಲಿ ಸಿದ್ಧನಾಥ ಮಾತನಾಡಿದ್ದನಾದರೂ ವೃದ್ಧ ಶಾಂತನಾಗಿಯೇ ಇದ್ದ. ಸಿದ್ಧನಾಥನ ಮಾತು ಮುಗಿಯುತ್ತಲೂ ವೃದ್ಧ ನಮ್ರತೆಯಿಂದ ಹೇಳಿದ:

"ಪ್ರಿಯ ಬಂಧು, ಕೊಳಚೆಯಲ್ಲಿ ಬಿದ್ದುಕೊಂಡಿರುವ ನಾಯಿ ಮತ್ತು ಮೂರ್ಖ ಕೋತಿಗಳ ಉತ್ತರದಿಂದ ನಿನಗೇನು ಲಾಭ ?"

ಭಗವಂತನ ಯಶಗಾನವೇ ಸಿದ್ಧನಾಥನ ಏಕಮಾತ್ರ ಉದ್ದೇಶವಾಗಿತ್ತು. ಅವನ ಕ್ರೋಧ ದೂರವಾಯಿತು. ಆತ ನಮ್ರನಾಗಿ ಹೇಳಿದ:

"ಸತ್ಯದ ಆವೇಗದಲ್ಲಿ ಮೇರೆ ಮೀರಿ ಮಾತಾಡಿದೆನೊ ಏನೊ. ನನ್ನನ್ನು ಕ್ಷಮಿಸು ಬೈರಾಗಿ! ಈಶ್ವರನೇ ಸಾಕ್ಷಿ, ನನಗೆ ತಿರಸ್ಕಾರ ಬಂದದ್ದು ನಿನ್ನ ಬಗೆಗಲ್ಲ, ನಿನ್ನ ತಪ್ಪುಗಳ ಬಗ್ಗೆ. ನೀನು ಅಂಧಕಾರದಲ್ಲಿ ತೊಳಲುತ್ತಿರುವುದನ್ನು ನೋಡಿ ನನಗೆ ದುಃಖವಾಗುತ್ತಿದೆ. ಪರಮಾತ್ಮನ ಹೆಸರಿನಲ್ಲಿ ನಾನು ನಿನ್ನನ್ನು ಪ್ರೀತಿಸುತ್ತೇನೆ. ನಿನ್ನ ಮುಕ್ತಿಗಾಗಿ ಆ ದಯಾಘನನನ್ನು ಪ್ರಾರ್ಥಿಸುತ್ತೇನೆ. ಹೇಳು, ನಿನ್ನ ತರ್ಕವನ್ನು ನನಗೆ ವಿಶದಗೊಳಿಸು. ಅದನ್ನು ತಿಳಿದುಕೊಳ್ಳಬೇಕೆಂಬ ಬಲವತ್ತರವಾದ ಇಚ್ಛೆ ನನಗಿದೆ."

ವೃದ್ಧ ಬೈರಾಗಿ ನಿದಾನವಾಗಿ ಉತ್ತರವಿತ್ತ:

"ಮಾತಾಡುವುದೂ ಮಾತಾಡದಿರುವುದೂ ಎರಡೂ ಒಂದೇ ನನ್ನ ದೃಷ್ಟಿಯಲ್ಲಿ. ಆದರೂ ನನ್ನ ತರ್ಕವೇನೆಂಬುದನ್ನು ನಿನಗೆ ತಿಳಿಸಲು ಯತ್ನಿಸುತ್ತೇನೆ. ನಿನ್ನ ತರ್ಕವೇನೆಂಬುದನ್ನು ಅರಿತುಕೊಳ್ಳುವ ಇಚ್ಛೆ ನನಗಿಲ್ಲ. ಏಕೆಂದರೆ ಅದರ ಬಗ್ಗೆ ನನಗೆ ಸ್ವಲ್ಪವೂ ಆಸಕ್ತಿಯಿಲ್ಲ."

"ನಿನಗೆ ಇಷ್ಟು ಅನಾಸಕ್ತಿಯುಂಟಾಗಲು ಕಾರಣವೇನು ?"

"ಅದೊಂದು ದೊಡ್ಡ ಕಥೆ. ಅದನ್ನು ಕೇಳುವುದರಿಂದ ನಿನಗೇನು ಲಾಭ ?"

"ಲಾಭವೋ ಹಾನಿಯೋ, ಅಂತೂ ನಿನ್ನ ಕಥೆಯನ್ನೆಲ್ಲಾ ಕೇಳಬೇಕೆಂದು ಉತ್ಸುಕತೆಯುಂಟಾಗಿದೆ."

"ಕೇಳು ಹಾಗಾದರೆ. ಹೇಳುವುದರಿಂದ ನನಗೇನೂ ಹಾನಿಯಿಲ್ಲ. ನೀನು ಉತ್ಸುಕನಾಗಿದ್ದರೂ ಅಷ್ಟೆ, ಆಗದಿದ್ದರೂ ಅಷ್ಟೆ. ನಿನ್ನ ವಿಚಾರಗಳ ಬಗ್ಗೆ ನನಗೇನೂ ಲಕ್ಷ್ಯವಿಲ್ಲ. ನಿನ್ನನ್ನು ನಾನು ತಿರಸ್ಕರಿಸುವುದೂ ಇಲ್ಲ, ಪ್ರೀತಿಸುವುದೂ ಇಲ್ಲ. ವಿರಾಗ, ಸಹಾನುಭೂತಿ ಎರಡೂ ಜ್ಞಾನಿಗಳಿಗೆ ಅನುಚಿತವಾದುವು. ಆದರೆ, ನೀನು ಇಷ್ಟು ಕೇಳುತ್ತಿರುವಿಯೆಂದು ನನ್ನ ಕಥೆ ಹೇಳುತ್ತಿದ್ದೇನೆ. ನನ್ನ ಹೆಸರು ರವಿಕೀರ್ತಿ. ವಾತಾಪಿಪುರದಲ್ಲಿ ವ್ಯಾಪಾರಿಗಳ ಮನೆತನವೊಂದರಲ್ಲಿ ನಾನು ಜನಿಸಿದೆ. ನನ್ನ ತಂದೆ ಅಗಣಿತ ಸಂಪತ್ತನ್ನು

ಶೇಖರಿಸಿದ್ದ. ನನ್ನ ಹಿರಿಯಣ್ಣಂದಿರು ಅದನ್ನೆಲ್ಲಾ ತೀರಿಸಿಬಿಟ್ಟರು. ವೃದ್ಧಾಪ್ಯದಲ್ಲಿ ನನ್ನ ತಂದೆತಾಯಿಗಳಿಗೆ ಹೊಟ್ಟೆಗೆ ಅನ್ನ ಸಿಕ್ಕುವುದೂ ಕಷ್ಟವಾಯಿತು. ಅಂಥ ಕಷ್ಟದಲ್ಲೇ ಅವರು ತೀರಿಕೊಂಡರು. ಅಣ್ಣಂದಿರ ಹತ್ತಿರ ನಾನು ಇರುವಂತಿರಲಿಲ್ಲ. ಇತರರ ಹಾಗೆ ವ್ಯಾಪಾರ ಮಾಡಿ ಸಂಸಾರಿಯಾಗಿರುವ ಇಚ್ಛೆಯೂ ನನಗಿರಲಿಲ್ಲ. ಯೋಗ್ಯ ಗುರುವೊಬ್ಬನನ್ನು ಹುಡುಕಿ ಅವನ ಸನ್ನಿಧಿಯಲ್ಲಿ ಜ್ಞಾನ ಸಂಪಾದಿಸಬೇಕೆಂಬ ಹಂಬಲದಿಂದ ಭರತಖಂಡದಲ್ಲೆಲ್ಲಾ ತಿರುಗಿದೆ. ವಾರಣಾಸಿ ಪ್ರಯಾಗ ಎಲ್ಲಾ ಕಡೆಗೂ ಸುತ್ತಿದೆ. ಕೊನೆಗೆ ಗಂಗಾತೀರದಲ್ಲಿ ಒಬ್ಬ ನಗ್ನ ಸಾಧುವನ್ನು ಕಂಡೆ. ಪದ್ಮಾಸನ ಹಾಕಿಕೊಂಡು ಮೂವತ್ತು ವರ್ಷಗಳಿಂದಲೂ ಆತ ಅಲ್ಲೇ ಕುಳಿತಿದ್ದನೆಂದು ಕೇಳಿ ತಿಳಿದೆ. ಆತನ ಕೃಶ ಶರೀರದ ನಾಲ್ಕು ಕಡೆಗಳಲ್ಲೂ ಹುತ್ತ ಬೆಳೆದಿತ್ತು. ಅವನ ಜಡೆಯಲ್ಲಿ ಹಕ್ಕಿಗಳು ಗೂಡು ಕಟ್ಟಿದ್ದುವು. ಆದರೂ ಆತ ಜೀವದಿಂದಿದ್ದ. ಅವನನ್ನು ನೋಡುತ್ತಲೂ ನನಗೆ ನನ್ನ ಊರು, ಅಣ್ಣತಮ್ಮಂದಿರು, ತಂದೆತಾಯಿಗಳ ಕಷ್ಟ ಎಲ್ಲಾ ನೆನಪಾಯಿತು. ಆ ವೃದ್ಧ ತಪಸ್ವಿ ಖಂಡಿತವಾಗಿಯೂ ಪರಮ ಜ್ಞಾನಿಯಾಗಿರಬೇಕೆಂದೇ ನನಗನ್ನಿಸಿತು. ಯಾವ ವಸ್ತುವಿನಿಂದ ತಮಗೆ ಲಾಭವುಂಟೆಂದು ಜನರು ತಿಳಿದಿರುವರೋ ಅದು ಸಿಕ್ಕದಿದ್ದಾಗ, ಅಥವಾ ಅದು ಕಳೆದುಹೋದಾಗ ಅವರು ದುಃಖಿತರಾಗುತ್ತಾರೆ. ಅಂತೆಯೇ ಆ ವಸ್ತುವಿನಿಂದ ಲಾಭವುಂಟೆಂಬ ಭಾವನೆಯನ್ನೇ ಬಿಟ್ಟುಬಿಟ್ಟರೆ ಎಲ್ಲಾ ದುಃಖಗಳೂ ಇಲ್ಲವಾಗುತ್ತವೆಂಬ ತಿಳಿವಳಿಕೆ ನನ್ನಲ್ಲಿ ಮೂಡಿತು. ಆ ನಗ್ನ ಸಾಧುವನ್ನೇ ಅನುಸರಿಸಿ ಯಾವ ವಸ್ತುವನ್ನೂ ಅಪೇಕ್ಷಿಸದೆ ಸಾಂಸಾರಿಕ ವಸ್ತುಗಳಿಂದ ದೂರವಾಗಿದ್ದು ಏಕಾಂತ ಸ್ಥಿರಜೀವನ ಸಾಗಿಸುವುದೆಂದು ನಾನೂ ಆಗಲೆ ನಿರ್ಧರಿಸಿದೆ."

ರವಿಕೀರ್ತಿಯ ವೃತ್ತಾಂತವನ್ನು ಲಕ್ಷ್ಯಗೊಟ್ಟು ಕೇಳಿ ಸಿದ್ಧನಾಥನೆಂದ:

"ಬಂಧು ರವಿಕೀರ್ತಿ, ನಿನ್ನ ತಿಳಿವಳಿಕೆ ಪೂರಾ ತಪ್ಪಲ್ಲವೆಂಬುದನ್ನು ನಾನೂ ಒಪ್ಪುತ್ತೇನೆ. ಸಾಂಸಾರಿಕ ವಸ್ತುಗಳ ತ್ಯಾಗ ಮಾಡುವುದು ಬುದ್ಧಿವಂತಿಕೆಯೇ ಸರಿ. ಆದರೆ, ಅಮರತ್ವವನ್ನು ಧಿಕ್ಕರಿಸುವುದೂ, ಹಾಗೆ ಮಾಡಿ ಈಶ್ವರನ ಕೋಪಕ್ಕೆ ಪಾತ್ರನಾಗುವುದೂ ಅವಿವೇಕ. ನಿನ್ನ ಅಜ್ಞಾನದ ಬಗ್ಗೆ ನನಗೆ ವ್ಯಸನವಾಗುತ್ತದೆ. ಪರಮೇಶ್ವರನ ಅಧಿಕಾರವನ್ನೊಪ್ಪಿಕೊಂಡು ಆತನ ಅಪ್ಪಣೆಯಂತೆ ವರ್ತಿಸಬೇಕೆಂದು ನಾನು ನಿನಗೆ ಉಪದೇಶಿಸುತ್ತೇನೆ...."

ರವಿಕೀರ್ತಿ ನಡುವೆಯೆ ಬಾಯಿ ಹಾಕಿ ಹೇಳಿದ:

"ಅಪರಿಚಿತನೇ, ನಿನ್ನ ಅಭಿಪ್ರಾಯಗಳನ್ನು ನನ್ನ ಮೇಲೆ ಹೇರಲು ವ್ಯರ್ಥವಾಗಿ ಯತ್ನಿಸಬೇಡ. ನೀನೇನು ಮಾಡಿದರೂ ನಿನ್ನ ವಿಚಾರಗಳನ್ನು ನಾನು ಒಪ್ಪುವುದು ಶಕ್ಯವಿಲ್ಲ. ಯಾವ ಅಭಿಪ್ರಾಯವನ್ನೂ ಇಟ್ಟುಕೊಳ್ಳಬಾರದೆಂಬುದೇ ನನ್ನ ಅಭಿಪ್ರಾಯವಾಗಿದೆ. ಜನರ ಕೃಪೆಯಿಂದ ನಾನು ವಂಚಿತನಾಗಿದ್ದಲ್ಲಿ ದುಃಖದಿಂದಲೂ ಚಿಂತೆಯಿಂದಲೂ ದೂರವಾಗಿರಬಲ್ಲೆ. ನೀನು ನಿನ್ನ ಹಾದಿ ಹಿಡಿದು ಹೊರಡು. ಜೀವನದ ಕಠೋರ ಶ್ರಮದ ತರುವಾಯ ಇದೀಗ ಉದಾಸೀನತೆಯ ಸಾಗರದಲ್ಲಿ ನಾನು ಸುಂದರಸ್ನಾನ ಮಾಡುತ್ತಿದ್ದೇನೆ. ಅದರಿಂದ ನನ್ನನ್ನು ಹೊರಗೆಳೆಯುವ ಪ್ರಯತ್ನ ಮಾಡಬೇಡ."

ಸಿದ್ಧನಾಥ ಧರ್ಮದ ಸಿದ್ಧಾಂತಗಳ ಬಗೆಗೆ ಗಾಢವಾಗಿ ಅಧ್ಯಯನ ಮಾಡಿದ್ದ; ವೃದ್ಧ ರವಿಕೀರ್ತಿಯ ಮೇಲೆ ಈಶ್ವರೀಯ ಕೃಪೆಯಿಲ್ಲವೆಂದೂ ಅವನ ಬಿಡುಗಡೆಯ ದಿನವಿನ್ನೂ ಬಲು ದೂರವಿದೆಯೆಂದೂ ಆತ ತಿಳಿದುಕೊಂಡ. ತಾನು ಮಾಡುವ ಉಪದೇಶ ಆರೋಪದ ರೂಪ ಧರಿಸಬಾರದೆಂಬ ಭೀತಿಯಿಂದ ಆತ ಅಷ್ಟಕ್ಕೇ ಸುಮ್ಮನಾದ. ಎಷ್ಟೋ ಬಾರಿ, ಅವಿಶ್ವಾಸಿ ವ್ಯಕ್ತಿಗಳೊಡನೆ ಜಗಳ ಮಾಡುವುದರಿಂದ ಅವರು ಪರಿವರ್ತಿತರಾಗುವ ಬದಲು ಇನ್ನಿಷ್ಟು ಅವಿಶ್ವಾಸಿಗಳಾಗುವರೆಂಬುದನ್ನು ಆತ ಜ್ಞಾಪಿಸಿಕೊಂಡ.

"ಎಲೋ ದುರ್ದೈವಿ! ನಾನು ಹೊರಡುತ್ತೇನೆ."

ರವಿಕೀರ್ತಿ ಏನನ್ನೂ ಹೇಳದೆ ಮತ್ತೆ ತನ್ನ ಮೌನಮುದ್ರೆ ಮುಂದುವರಿಸಿದ. ಆಳವಾದ ಉಸಿರೊಂದನ್ನು ಬಿಟ್ಟು ಸಿದ್ಧನಾಥನೂ ತನ್ನ ಪವಿತ್ರ ಯಾತ್ರೆ ಮುಂದುವರಿಸಿದ.

ಪ್ರಾತಃಕಾಲ, ನದೀತೀರದಲ್ಲಿ ಒಂದೇ ಕಾಲಿನ ಮೇಲೆ ನಿಂತುಕೊಂಡಿದ್ದ ಬಕಪಕ್ಷಿಗಳನ್ನಾತ ಕಂಡ. ಅವುಗಳ ಶ್ವೇತವರ್ಣ ನದಿಯ ಜಲದಲ್ಲಿ ಪ್ರತಿಬಿಂಬಿತವಾಗಿತ್ತು. ನದೀತೀರದ ಮೇಲೆ ಬಲು ದೂರದವರೆಗೂ ಬಿದಿರು ಮೆಳೆಯ ಜಾಲ ಪಸರಿಸಿತ್ತು. ನಿರ್ಮಲವಾದ ಆಕಾಶದಲ್ಲಿ ಹಕ್ಕಿಗಳು ಹಿಂಡು ಹಿಂಡಾಗಿ ಹಾರಾಡುತ್ತಿದ್ದುವು.

ದೃಷ್ಟಿ ಹೋದಷ್ಟು ದೂರದವರೆಗೂ ನದಿಯ ವಿಸ್ತೃತ ಪಾತ್ರ ಥಳಥಳಿಸುತ್ತಿತ್ತು. ಕೊಂಚ ದೂರದಲ್ಲಿ ದಂಡೆಯ ಮೇಲೆ ಕೆಲವು ಶ್ವೇತ ಭವನಗಳು

ನಿಂತಿದ್ದುವು. ಅವುಗಳ ಸುತ್ತಲೂ ಹಗುರಾದ ಹೊಗೆ ಮೋಡ ಕವಿದಿದ್ದುವು. ಎಡಗಡೆಗೆ, ಹಸಿರು ಘಟ್ಟದ ವರೆಗೆ ಹರಡಿದ್ದ ಬಯಲೂ ತೋಟಪಟ್ಟಿಗಳೂ ಇದ್ದುವು.

ಸಿದ್ಧನಾಥ ನದಿಯ ನೀರಿನಲ್ಲಿಳಿದು ದೇವರನ್ನು ಪ್ರಾರ್ಥಿಸತೊಡಗಿದ:

"ನನ್ನ ಯಾತ್ರೆಯನ್ನು ಮಂಗಲಮಯವಾಗಿ ಮಾಡಿದ ಭಗವಂತನೇ, ನಿನಗೆ ನಮಸ್ಕಾರ. ತೋಟಪಟ್ಟಿಗಳ ಮೇಲೆ ಪ್ರಾತಃಕಾಲೀನ ಪ್ರಕಾಶ ಬೀರುವ ಹೇ ಪರಮಾತ್ಮಾ, ಈ ಮರ ಗಿಡ ಹೂ ಹಣ್ಣುಗಳಂತೆಯೇ ನೀನು ಅತ್ಯಂತ ಪ್ರೀತಿಯಿಂದ ಸೃಷ್ಟಿಸಿದ ಮುಕ್ತಾದೇವಿಯ ಆತ್ಮದ ಮೇಲೂ ನಿನ್ನ ಕೃಪೆಯನ್ನು ಸುರಿಸು. ನಿನ್ನ ಆಶೀರ್ವಾದದಿಂದ ಈ ಪಾಪಾತ್ಮಳೂ ಪುಣ್ಯದ ಹಾದಿ ಹಿಡಿಯಲಿ !"

೩

ಮತ್ತೊಂದು ದಿನದ ಪ್ರಯಾಣದ ತರುವಾಯ ಆತ ಕಲ್ಯಾಣ ಪಟ್ಟಣದ ಬಳಿ ಬಂದು ಮುಟ್ಟಿದ. ನಗರದ ಹೊರಭಾಗದಲ್ಲಿದ್ದ ಉಪವನವೊಂದರಲ್ಲಿ ಸ್ವಲ್ಪ ಹೊತ್ತು ಕುಳಿತು ಎದುರಿಗೆ ಕಾಣುತ್ತಿದ್ದ ಆ ಮಹಾನಗರದ ಮಂದಿರಗಳನ್ನು ದಿಟ್ಟಿಸುತ್ತಿದ್ದ.

“ಇದೇ ಆ ಆನಂದಮಯ ಸ್ಥಾನ. ಇಲ್ಲೇ! ನಾನು ‘ಪಾಪ’ ದಲ್ಲಿ ಜನಿಸಿದ್ದೆ. ಇಲ್ಲಿಯ ವಿಷಯುಕ್ತ ಹವೆಯಲ್ಲೇ ನಾನು ಉಸುರಾಡಿಸಿದ್ದೆ. ಇಲ್ಲಿನ ಆನಂದಸಾಗರದಲ್ಲಿಯೇ ನಾನು ಅಪ್ಸರೆಯರ ಸಂಗೀತ ಲಹರಿಯಲ್ಲಿ ವಿಹರಿಸಿದ್ದೆ. ಇದೇ ನನ್ನ ಜನ್ಮಭೂಮಿ. ಜಗತ್ತಿನ ದೃಷ್ಟಿಯಲ್ಲಿ ಇದೇ ನನ್ನ ಮನೆ. ಸಂಸಾರಿಕರ ದೃಷ್ಟಿಯಲ್ಲಿ ಇದೇ ಅಮರಾವತಿಯಾಗಿದೆ, ಪ್ರತಿಭೆಯ ಆವಾಸವಾಗಿದೆ. ಹೇ ಕಲ್ಯಾಣ ನಗರಿಯೆ, ತಾಯಿಯ ರೂಪದಲ್ಲಿ ನಿನ್ನನ್ನು ಪ್ರಿಯವಾಗಿ ಭಾವಿಸುವುದು ನಿನ್ನ ಮಕ್ಕಳಿಗೆ ಸ್ವಾಭಾವಿಕವಾಗಿದೆ. ನಾನೂ ಕೂಡಾ ನಿನ್ನ ವೈಭವಪೂರ್ಣ ವಕ್ಷಸ್ಥಳದ ಮೇಲೇ ಬೆಳೆದು ದೊಡ್ಡವನಾದೆ. ತಪಸ್ವಿಗಳು ಪ್ರಕೃತಿಯನ್ನು ತಿರಸ್ಕರಿಸುತ್ತಾರೆ. ದಾರ್ಶನಿಕರು ಆತ್ಮಪ್ರಕಾಶದ ಅವಹೇಳನ ಮಾಡುತ್ತಾರೆ. ಶೈವಪಂಥೀಯ ಸಂನ್ಯಾಸಿಗಳು ತಮ್ಮ ಪೂರ್ವಾಶ್ರಮದ ಮನೆಯನ್ನು ಅಪರಿಚಿತ ಸ್ಥಳವೆಂದು ತಿಳಿಯುತ್ತಾರೆ. ಸಾಧುಗಳು ಜಗತ್ತಿನಿಂದ ಅಲಿಪ್ತರಾಗಿರುತ್ತಾರೆ. ಕಲ್ಯಾಣಿ! ನಾನು ನಿನ್ನನ್ನು ಪ್ರೀತಿಸುವುದನ್ನು ನಿಲ್ಲಿಸಿಬಿಟ್ಟಿದ್ದೇನೆ. ಅದರ ಬದಲು ಇದೀಗ ನಾನು ನಿನ್ನನ್ನು ತಿರಸ್ಕರಿಸುತ್ತೇನೆ. ನಿನ್ನ ಧನ, ನಿನ್ನ ವಿಜ್ಞಾನ, ನಿನ್ನ ನಾಗರಿಕತೆ, ನಿನ್ನ ಸೌಂದರ್ಯಗಳ ಬಗ್ಗೆ ನನಗೆ ಹೇಸಿಕೆಯೆನಿಸುತ್ತದೆ. ಮಾಯೆಯಲ್ಲಿ ಸಿಕ್ಕಿ ಒದ್ದಾಡುತ್ತಿರುವ ಮಾನವ ಭೂತಗಳ ನಗರಿಯೆ, ನಾನು ನಿನಗೆ ಶಾಪ ಕೊಡುತ್ತೇನೆ. ಜುಗುಪ್ಸಾವಹ ದುಷ್ಟರ ಆಶ್ರಯ ಸ್ಥಳವೇ! ನಾಸ್ತಿಕರ ತವರುಮನೆಯೆ! ನಾನು ನಿನ್ನನ್ನು ಶಪಿಸುತ್ತೇನೆ. ಆದರೂ........ಆದರೂ........ಒಂದು ಮಹೋದ್ದೇಶವನ್ನು ಸಾಧಿಸಲೆಂದು ನಾನು ನಿನ್ನ ಬಳಿ ಬಂದಿದ್ದೇನೆ. ನಮ್ಮ ಗುರುಮಹಾರಾಜ

ಪೂಜ್ಯಪಾದರ ಹರಕೆಯಿಂದ, ಪರಮಾತ್ಮನ ದಯೆಯಿಂದ ನನ್ನ ಉದ್ದೇಶದಲ್ಲಿ ನಾನು ಯಶಸ್ವಿಯಾಗುತ್ತೇನೆ. ಓ ಭಗವಂತಾ, ನಿನ್ನ ಪವಿತ್ರ ಉಸಿರನ್ನು ಈ ಪಾಪಿ ನಗರದ ಮೇಲೆ ಬಿಟ್ಟು ನಾನಿಲ್ಲಿ ಅನಿರ್ಬಂಧವಾಗಿ ಉಸಿರಾಡಿಸಲು ಸಾಧ್ಯವಾಗುವಂತೆ ಮಾಡು."

ಈ ರೀತಿ ಪ್ರಾರ್ಥಿಸಿದ ತರುವಾಯ ಆತ ಮತ್ತೆ ಎದ್ದು ನಗರದಲ್ಲಿ ಪ್ರವೇಶಿಸಿದ. ದೊಡ್ಡ ದೊಡ್ಡ ಶಿಲೆಗಳಿಂದ ನಿರ್ಮಿತವಾದ ಮಂಟಪದ್ವಾರದ ಛಾಯೆಯಲ್ಲಿ ಕೆಲವು ದುರ್ದೈವಿಗಳು ನಿಂತುಕೊಂಡು ಆರ್ತಧ್ವನಿ ಹೊರಡಿಸುತ್ತ ಭಿಕ್ಷೆ ಬೇಡುತ್ತಿದ್ದರು. ಆ ಭಿಕ್ಷುಕರ ತಂಡದಲ್ಲಿದ್ದ ಮುಪ್ಪಿನ ಮುದುಕಿಯೊಬ್ಬಳು ಸಿದ್ಧನಾಥನ ಅಂಗವಸ್ತ್ರವನ್ನು ಹಿಡಿದೆಳೆದು ಬೇಡಿಕೊಂಡಳು.

"ನನಗೆ ಆಶೀರ್ವಾದ ಮಾಡು ಸಾಧೂ ಮಹಾತ್ಮಾ! ಈ ಜಗತ್ತಿನ ಕಷ್ಟ ನನಗೆ ಸಾಕಾಗಿದೆ. ಪರಲೋಕದ ಸುಖಕ್ಕಾಗಿಯೆ ಕಾದು ಕುಳಿತಿದ್ದೇನೆ. ನೀನು ಭಗವಂತನ ದೂತನಾಗಿದ್ದೀಯೆ. ಸುವರ್ಣ ನಾಣ್ಯಗಳಿಗಿಂತಲೂ ನಿನ್ನ ಚರಣಧೂಳಿಯೇ ಹೆಚ್ಚಿನದು."

"ಜೈ ಗೌರೀಶಂಕರ್!" ಎಂದು ಘೋಷಿಸಿ ಆ ವೃದ್ಧೆಯನ್ನು ಹರಸಿ ಸಿದ್ಧನಾಥ ಮುಂದೆ ಸಾಗಿದ. ಆತನಿನ್ನೂ ಹತ್ತು ಹೆಜ್ಜೆ ಹೋಗಿರಲಿಲ್ಲ, ಅಷ್ಟರಲ್ಲಿಯೇ ಹುಡುಗರ ತಂಡವೊಂದು ಅವನನ್ನು ಕಂಡು ಕೂಗುತ್ತ ಕಿರಿಚುತ್ತ ಅವನ ಸುತ್ತಲೂ ನೆರೆದು ಕಲ್ಲು ಎಸೆಯತೊಡಗಿತು.

"ನೋಡಿರೋ! ಈ ದುಷ್ಟ ಸಾಧುವನ್ನು ನೋಡಿರೋ. ಈತ ಕಾಗೆಗಿಂತಲೂ ಕರ್‍ರಗಿದ್ದಾನೆ!" ಎಂದನೊಬ್ಬ ಹುಡುಗ.

"ಆಡಿನ ಗಡ್ಡಕ್ಕಿಂತಲೂ ಇವನ ಗಡ್ಡ ಉದ್ದವಿದೆ!" ಎಂದನಿನ್ನೊಬ್ಬ.

"ತಿಂದು ತಿಂದು ಹ್ಯಾಗೆ ದೆವ್ವನಂತೆ ಬೆಳೆದಿದ್ದಾನೆ ನೋಡಿರೋ!" ಎಂದ ಮತ್ತೊಬ್ಬ.

"ಭಿಕ್ಷೆ ಬೇಡುವದಕ್ಕೇ ಇಲ್ಲಿ ಬಂದ ಹಾಗೆ ಕಾಣುತ್ತದೆ!" ಎಂದ ಮಗುದೊಬ್ಬ.

"ಹಕ್ಕಿಗಳನ್ನು ಹೆದರಿಸಲಿಕ್ಕೆಂದು ಇವನನ್ನು ಹೊಲದಲ್ಲಿ ಕೂಡಿಸಿಬಿಟ್ಟರೆ ಬಹಳ ಮೋಜಾದೀತು ನೋಡಿರೋ!" ಎಂದ ಇನ್ನೊಬ್ಬ

"ಛೀ, ಬೇಡ ಬೇಡ. ಇವನ ಪಾಪಕ್ಕೆ ಬೆಳೆಯೂ ಬರಲಿಕ್ಕಿಲ್ಲ."

"ಹಾಗಾದರೆ ಇವನನ್ನು ಕಲ್ಲಿನಿಂದ ಹೊಡೆಯಿರಿ. ಇವನ ಮಾಂಸವನ್ನು ಕಾಗೆಗಳಿಗೆ ತಿನ್ನಿಸಿರಿ."

ಮತ್ತೆ ಅವನ ಮೇಲೆ ಕಲ್ಲು ಬೀಳತೊಡಗಿದವು.

"ಭಗವಂತಾ, ಈ ಮಕ್ಕಳ ಮೇಲೆ ಕೃಪೆ ಮಾಡು!" ಎಂದು ಸಿದ್ಧನಾಥ ಉದ್ಗಾರ ತೆಗೆದ. ಅದನ್ನು ಕೇಳಿದ ಕೆಲವು ಹುಡುಗರು ಅವನನ್ನು ಪೀಡಿಸುವುದನ್ನು ನಿಲ್ಲಿಸಿ ಅವನಿಗೆ ದಾರಿಬಿಟ್ಟರು.

ಸಿದ್ಧನಾಥ ಮುಂದೆ ಹೆಜ್ಜೆಯಿಡುತ್ತಿದ್ದ ಹಾಗೇ ಯೋಚಿಸಿದ.

"ಆ ವೃದ್ಧೆ ನನ್ನನ್ನು ಗೌರವಿಸಿದಳು. ಈ ಹುಡುಗರು ನನ್ನನ್ನು ಅಪಮಾನಗೊಳಿಸಿ ಕಲ್ಲೆಸೆದರು. ಈ ರೀತಿಯಾಗಿ ಒಂದೇ ವಿಷಯದ ಬಗ್ಗೆ ಜನರು ಎರಡು ಬಗೆಯಾಗಿ ಯೋಚಿಸುವುದುಂಟು. ಮಿಥ್ಯಾವಾದಿ ಮುದುಕ ರವಿಕೀರ್ತಿ ಜ್ಞಾನಶೂನ್ಯನಲ್ಲವೆಂದು ಒಪ್ಪಿಕೊಳ್ಳಲೇ ಬೇಕಾಗುವುದು. ಅಜ್ಞಾನದಿಂದಾಗಿ, ತಾನು ಪ್ರಕಾಶದಿಂದ ವಂಚಿತನಾಗಿರುವುದಾಗಿ ಆತ ಭಾವಿಸುತ್ತಾನೆ. ಸಂಸಾರದ ಪ್ರತಿಯೊಂದು ವಸ್ತುವೂ ಮಣ್ಣು ಮತ್ತು ಮರೀಚಿಕೆಗಳಂತೆ ನಶ್ವರವಾಗಿದೆ. ಕೇವಲ ಒಬ್ಬ ಭಗವಂತನಲ್ಲಿಯೇ ಸ್ಥಿರತೆಯಿದೆ, ಅಮರತೆಯಿದೆ."

ಆತ ಲಗುಬಗೆಯಿಂದ ನಡೆಯತೊಡಗಿದ. ಹತ್ತು ವರ್ಷಗಳ ಹಿಂದಿನ ಪ್ರತಿಯೊಂದು ವಿಚಾರವೂ ಅವನಿಗೆ ನೆನಪಾಗುತ್ತಲಿತ್ತು. ಆ ನಗರದ ಪ್ರತಿಯೊಂದು ಬೀದಿಯೂ, ಪ್ರತಿಯೊಂದು ಕಲ್ಲೂ ಅವನಿಗೆ ಚಿರಪರಿಚಿತವಾಗಿತ್ತು. ಈಗ ಅದೆಲ್ಲವೂ ಅವನಿಗೆ ಕಲಂಕಿತವೂ ಪಾಪಮಯವೂ ಆಗಿ ಕಾಣಿಸಿತು. ಆತ ಕ್ರೋಧದಿಂದ ತನ್ನ ಬರಿಗಾಲುಗಳನ್ನು ಬೀದಿಯ ಕಲ್ಲುಗಳ ಮೇಲೆ ಅಪ್ಪಳಿಸಿದ. ಚರ್ಮ ಒಡೆದು ನೆತ್ತರು ಸುರಿಯಲಾರಂಭಿಸುತ್ತಲೂ ಅದನ್ನು ಕಂಡು ಪ್ರಸನ್ನನಾದ. ನಡೆಯುತ್ತ ನಡೆಯುತ್ತ ಸುಗಂಧ ವಾಯುವಿನಿಂದ ತುಂಬಿದ ಓಣಿಯೊಂದರಲ್ಲಿ ಆತ ಪ್ರವೇಶಿಸಿದ. ಎರಡು ಮೂರು ಅಂತಸ್ತುಗಳನ್ನುಳ್ಳ ಭವ್ಯ ಮನೆಗಳು ಅಲ್ಲಿ ತಲೆಯೆತ್ತಿ ನಿಂತಿದ್ದುವು. ಆ ಮನೆಗಳ ಮುಂದೆ ಸುಂದರವಾದ ಉದ್ಯಾನಗಳೂ ಇದ್ದುವು. ಯಾವುದೋ ಒಂದು ಮನೆಯಿಂದ ವೀಣಾವಾದನದ ಇಂಚರ ಹರಿದು ಬರುತ್ತಿತ್ತು. ಇನ್ನಾವುದೋ ಒಂದು ಮನೆಯಿಂದ ಮಂಜುಳಗಾನ ಕೇಳಿಬರುತ್ತಿತ್ತು. ಎದುರಿಗೆ ಮೂರ್ತಿಗಳನ್ನು ನಿಲ್ಲಿಸಿದ್ದ ಪುಟ್ಟ

ದಾದರೂ ಮೋಹಕವಾಗಿದ್ದ ಮನೆಯೊಂದರ ಎದುರು ಸಿದ್ಧನಾಥ ನಿಂತು ಕೊಂಡು ಬಾಗಿಲು ತಟ್ಟಿದ.

ಸೇವಕನೊಬ್ಬ ಧಾವಿಸಿ ಬಂದು ಬಾಗಿಲು ತೆರೆದ. ಅರ್ಧ ನಗ್ನನಾಗಿ ನಿಂತಿದ್ದ ಈ ಬೈರಾಗಿಯನ್ನು ಕಂಡು ಕರ್ಕಶ ಸ್ವರದಲ್ಲಿ ಹೇಳಿದ:

"ಮುಂದಿನ ಮನೆಗೆ ಹೋಗಿ ಭಿಕ್ಷೆ ಬೇಡು. ನಡೆ ಇಲ್ಲಿಂದ, ಇಲ್ಲವಾದರೆ ಬಡಿಗೆಯಿಂದ ಬಡಿದೋಡಿಸಬೇಕಾದೀತು."

ಸಿದ್ಧನಾಥ ಶಾಂತಸ್ವರದಲ್ಲಿಯೇ ಉತ್ತರವಿತ್ತ:

"ಸಹೋದರಾ, ನಾನು ಭಿಕ್ಷುಕನಲ್ಲ. ಈ ಮನೆಯೊಡೆಯನಾದ ಮಾಧವರಸ ನನ್ನ ಪರಮ ಮಿತ್ರ. ಅವನನ್ನು ನೋಡಲೆಂದೇ ನಾನು ಬಂದಿದ್ದೇನೆ."

ಸೇವಕ ಮತ್ತೂ ಕೋಪೋದ್ರಿಕ್ತನಾಗಿ ಗದರಿಸಿದ:

"ನಮ್ಮ ಒಡೆಯನೆಲ್ಲಿ! ನೀನೆಲ್ಲಿ! ಅವನಿಗೂ ನಿನಗೂ ಮಿತ್ರತ್ವ ಅಂದರೆ ಯಾರಾದರೂ ನಕ್ಕಾರು. ನಿನ್ನಂಥ ನಾಯಿಯನ್ನು ಆತ ಭೆಟ್ಟಿಯಾಗುವುದಿಲ್ಲ, ನಡೆ ಹೋಗು."

"ನಾನು ಹೇಳುವ ಹಾಗೆ ಮಾಡು ಮಗನೇ! ನಾನು ಭೆಟ್ಟಿಗಾಗಿ ಬಂದಿದ್ದೇನೆಂದು ನಿನ್ನ ಯಜಮಾನನಿಗೆ ಹೇಳು."

"ಅದೆಲ್ಲಾ ರಗಳೆ ಬೇಡ. ನಡೆ ಇಲ್ಲಿಂದ!" ಎಂದ ಸೇವಕ.

ಆಗಲೂ ಸಿದ್ಧನಾಥ ಕದಲದೆ ಅಲ್ಲಿಯೇ ನಿಂತುಕೊಳ್ಳಲು, ಸೇವಕ ತನ್ನ ದೊಣ್ಣೆಯೆತ್ತಿ ಒಂದು ಏಟು ಬಿಟ್ಟ. ಸಿದ್ಧನಾಥ ಕೊಂಚವೂ ಅಳುಕದೆ, ಎದೆಯ ಮೇಲೆ ಕೈಕಟ್ಟಿಕೊಂಡು ಶಾಂತವಾಗಿ ನಿಂತಿದ್ದ.

"ಸಹೋದರಾ, ನನ್ನನ್ನು ಹೊಡೆಯುವುದು ವ್ಯರ್ಥ. ನಾನು ಹೇಳಿದಂತೆ ಮಾಡು."

ಸೇವಕ ಆಶ್ಚರ್ಯವಿಸ್ಮಿತನಾಗಿ, ಹೊಡೆದರೂ ಕೂಡಾ ಹೆದರದಿರುವ ಈ ವ್ಯಕ್ತಿಯೆಂಥವನೋ ಎಂದು ಯೋಚನೆಗೊಳಗಾಗಿ ಆತನ ಆಗಮನದ ವಾರ್ತೆಯನ್ನು ತನ್ನ ಒಡೆಯನಿಗೆ ಅರುಹಲೆಂದು ಒಳಗೆ ಹೋದ.

ಆ ಸಮಯದಲ್ಲಿ ಮಾಧವರಸ ಸ್ನಾನ ಮಾಡುವುದರಲ್ಲಿ ಮಗ್ನನಾಗಿದ್ದ. ಆತ ಹಸನ್ಮುಖದ ಸುಂದರ ಪುರುಷ. ಅವನ ಮುಖದ ಮೇಲೆ ಮಧುರ

ವ್ಯಂಗ್ಯದ ಭಾವ ಮೂಡಿತ್ತು. ಅಪ್ಪಣೆಗಾಗಿ ಕಾದು ನಿಂತಿರದೆ, ನೇರವಾಗಿ ಸ್ನಾನಗೃಹದ ಹತ್ತಿರಕ್ಕೇ ನಡೆದು ಬಂದ ಸಾಧುವನ್ನು ಥಟ್ಟನೆ ಗುರುತಿಸಿ ಆತ ಕೈಗಳೆರಡನ್ನೂ ಚಾಚಿ ಹೇಳಿದ:

"ಓ! ಸಿದ್ಧನಾಥ! ನನ್ನ ಪ್ರಾಣಸ್ನೇಹಿತ ಸಿದ್ಧನಾಥ! ಇದೇನು, ಇದ್ದ ಕ್ಕಿದ್ದ ಹಾಗೆ ಎಲ್ಲಿಂದ ಬಂದೆ!"

"ಜೈ ಗೌರೀಶಂಕರ್! ಪರಮಾತ್ಮನ ಕಾರ್ಯವೊಂದನ್ನು ನೆರವೇರಿ ಸಲು ನಾನು ಈ ನಗರಕ್ಕೆ ಬರಬೇಕಾಯಿತು, ಮಾಧವಮಿತ್ರ!"

"ಬಹಳ ಸಂತೋಷ. ಬಹಳ ಸಂತೋಷ. ಅಂತೂ ಇಷ್ಟು ವರ್ಷಗಳ ಮೇಲಾದರೂ ಮತ್ತೆ ಇಲ್ಲಿಗೆ ಬರುವ ಮನಸ್ಸು ಮಾಡಿದಿಯಲ್ಲ ಪುಣ್ಯಾತ್ಮ! ಸ್ವಲ್ಪ ಕುಳಿತಿರು, ನಾನು ಸ್ನಾನ ಮುಗಿಸಿಕೊಂಡು ಬಂದುಬಿಡುತ್ತೇನೆ."

ಅವಸರದಿಂದ ಸ್ನಾನ ತೀರಿಸಿ ಮಾಧವರಸ ಬಟ್ಟೆ ಹಾಕಿಕೊಂಡು ಬಂದು ಸಿದ್ಧನಾಥನನ್ನು ಅಪ್ಪಿಕೊಂಡ.

"ಇದೇನು? ನೀನೆಷ್ಟು ಕಪ್ಪಾಗಿ ಹೋಗಿರುವಿಯಲ್ಲ! ಇಲ್ಲಿದ್ದಾಗ ಹೇಗೆ ಬಂಗಾರದಂತೆ ಹೊಳೆಯುತ್ತಿತ್ತು ನಿನ್ನ ಮೈ!"

"ಬಂಗಾರವೂ ಅಷ್ಟೆ, ಇದ್ದಲೂ ಅಷ್ಟೆ ನನ್ನ ದೃಷ್ಟಿಯಲ್ಲಿ."

"ಓಹ್ಹೊ? ನೀನೀಗ ಸಂನ್ಯಾಸಿಯಲ್ಲವೆ? ಮರೆತೇ ಬಿಟ್ಟಿದ್ದೆ. ಆದರೆ, ನಮ್ಮಿಬ್ಬರ ಸ್ನೇಹವನ್ನು ಮಾತ್ರ ನಾನೆಂದೂ ಮರೆಯಲಾರೆ. ನಾವಿಬ್ಬರೂ ಜೊತೆಗೂಡಿ ಗುರುಗಳ ಬಳಿ ವ್ಯಾಕರಣ, ನ್ಯಾಯ, ಕಾವ್ಯ, ದರ್ಶನಗಳನ್ನೋ ದುತ್ತಿದ್ದುದರ ನೆನಪು ನಿನಗಿರಬಹುದು. ಆಗಲೂ ನಿನ್ನ ಸ್ವಭಾವ ಹೀಗೇ ಒರಟಾಗಿಯೇ ಇತ್ತು. ಆದರೂ, ನಿನ್ನ ಸತ್ಯವಾದಿತ್ವಕ್ಕಾಗಿ ನಾನು ನಿನ್ನನ್ನು ಮೆಚ್ಚಿಕೊಂಡಿದ್ದೆ."

"ಅದನ್ನೆಲ್ಲಾ ಈಗ ನೆನಸಿಕೊಂಡೇನು ಲಾಭ, ಬಂಧು?"

"ನೀನು ಸತ್ಯಪ್ರೇಮಿಯೂ ಆಗಿದ್ದೆ, ನಾಸ್ತಿಕನೂ ಆಗಿದ್ದೆ. ಅದೇ ಆಶ್ಚ ರ್ಯದ ವಿಷಯವಾಗಿತ್ತು. ನೀನು ಅಂಥ ಜಾಣನೇನೂ ಆಗಿರಲಿಲ್ಲವಾದರೂ ಬಹಳ ಉದಾರಿಯಾಗಿದ್ದೆ. ಹಣ, ಜೀವನ ಎರಡಕ್ಕೂ ನೀನು ಹೆಚ್ಚು ಮಹತ್ವ ಕೊಡುತ್ತಿರಲಿಲ್ಲ. ನಿನ್ನಲ್ಲಿ ಒಂದು ವಿಚಿತ್ರ ಪ್ರತಿಭೆಯಿತ್ತು, ಒಂದು ಅದ್ಭುತ ಸಾಹಸವಿತ್ತು. ಅದೇ ನನ್ನನ್ನು ಆಕರ್ಷಿಸಿದ್ದು. ಹತ್ತು ವರ್ಷಗಳ ದೀರ್ಘ

ಕಾಲದ ನಂತರ ಈಗ ನಿನ್ನನ್ನು ಕಂಡು ನನಗೆ ನಿಜವಾಗಿಯೂ ಅತ್ಯಂತ ಆನಂದವಾಗಿದೆ. ಶೈವಪಂಥೀಯ ಸಂನ್ಯಾಸಿಗಳ ಸಹವಾಸ ಬಿಟ್ಟು ಮತ್ತೆ ಎಂದಿನಂತೆಯೇ ಸುಖದ ಜೀವನ ನಡಸುವುದಕ್ಕೇ ನೀನು ಬಂದಿರುವಿಯಲ್ಲವೆ? ಸಂತೋಷ, ಬಹಳ ಸಂತೋಷ."

ಮಾಧವರಸ ಚಪ್ಪಾಳೆ ತಟ್ಟಿ, ದಾಸಿಯರನ್ನು ಕರೆದು ಹೇಳಿದ:

"ನನ್ನ ಪ್ರಿಯ ಮಿತ್ರನ ಮೈಗೆ ಸುಗಂಧ ತೈಲ ಪೂಸಿರಿ."

ಯುವತಿಯರು ಮುಗುಳ್ನಗುತ್ತಾ ಕನ್ನಡಿಯನ್ನೂ ಸುಗಂಧ ತೈಲದ ಪಾತ್ರೆಗಳನ್ನೂ ತೆಗೆದುಕೊಂಡು ಬಂದರು.

ಸಿದ್ಧನಾಥ ಕಠೋರ ಮುದ್ರೆಯಿಂದ ಅವರನ್ನು ದೂರದಲ್ಲಿಯೇ ತಡೆದು ನಿಲ್ಲಿಸಿ, ಅವರ ನಗ್ನಶರೀರಗಳ ದರ್ಶನವಾಗಬಾರದೆಂದು ತನ್ನ ದೃಷ್ಟಿಯನ್ನು ನೆಲಕ್ಕೆ ಹರಿಸಿದ.

"ಯಾಕೆ ಸಿದ್ಧನಾಥ? ನೀನು ಸ್ನಾನ ಮಾಡುವುದಿಲ್ಲವೆ?"

"ಬೆಳಿಗ್ಗೆ ಕೆರೆಯಲ್ಲಿ ಮಾಡಿಕೊಂಡೇ ಬಂದಿದ್ದೇನೆ. ಈಗ ಮತ್ತೆ ಬೇಡ."

"ಹಾಗಾದರೆ ಅಡ್ಡಿಯಿಲ್ಲ. ನೀನು ಹಸಿದು ಬಂದಿರಬಹುದು. ಊಟಕ್ಕೇಳು."

ದಾಸಿಯರು ಬಗೆಬಗೆಯ ಆಹಾರಪದಾರ್ಥಗಳನ್ನೂ ರುಚಿಕರ ಪಾನೀಯಗಳನ್ನೂ ತಂದಿರಿಸಿದರು. ಸಿದ್ಧನಾಥ ಏನನ್ನೂ ಸ್ವೀಕರಿಸಲಿಲ್ಲ.

"ಯಾಕಯ್ಯಾ, ಹೀಗೆ ಮಾಡುತ್ತೀಯಾ? ನೀನು ಊಟ ಮಾಡುವುದಿಲ್ಲವೆ?" ಎಂದ ಮಾಧವರಸ.

"ಮಾಧವಮಿತ್ರಾ, ನಾನು ಸಂನ್ಯಾಸವನ್ನು ತ್ಯಜಿಸಿ ಇಲ್ಲಿಗೆ ಬಂದಿರಬೇಕೆಂದು ನೀನು ತಪ್ಪಾಗಿ ತಿಳಿದುಕೊಂಡಿದ್ದೀಯೆ. ಯಾವುದನ್ನು ನೀನು ಅಂಧ ವಿಶ್ವಾಸ ಎಂದು ಭಾವಿಸಿದ್ದೀಯೊ ಅದು ನಿಜವಾಗಿಯೂ ಸತ್ಯವಾಗಿದೆ. ಅದನ್ನು ನಾನು ತ್ಯಜಿಸುವುದಾದರೂ ಹೇಗೆ ಸಾಧ್ಯ? ಪರಮಾತ್ಮನ ಕೃಪೆಯನ್ನು ಬಿಟ್ಟರೆ ಈ ಜಗತ್ತಿನಲ್ಲಿ ಇನ್ನೇನೂ ಇಲ್ಲ. ನಿನ್ನ ಈ ಭವ್ಯ ಮಂದಿರ, ಈ ಸೇವಕರು, ಈ ದಾಸಿಯರು, ಈ ಸುಗಂಧ, ಈ ಪಕ್ವಾನ್ನಗಳು, ಈ ಮದ್ಯ ಎಲ್ಲಾ ಎಲ್ಲಾ ಮಾಯಾಬಜಾರದ ವಸ್ತುಗಳು."

ನಿಲುವುಗನ್ನಡಿಯಲ್ಲಿ ಮುಖ ನೋಡಿಕೊಳ್ಳುತ್ತ ತಲೆಗೂದಲನ್ನು ಬಾಚಿಕೊಳ್ಳುತ್ತಿದ್ದ ಮಾಧವರಸ ಉತ್ತರವಿತ್ತ:

"ಮಿತ್ರ ಸಿದ್ಧನಾಥಾ, ನಾನಿದನ್ನೆಲ್ಲಾ ಕೇಳಬಲ್ಲೆ. ಈ ಶಬ್ದಜಾಲದಿಂದ ನನ್ನನ್ನು ಚಕಿತಗೊಳಿಸಬಹುದೆಂದು ನೀನು ಭಾವಿಸಿಲ್ಲವಷ್ಟೆ? ನಾನೂ ಕೂಡ ಅಲ್ಪಸ್ವಲ್ಪ ತತ್ವಜ್ಞಾನ ತಿಳಿದುಕೊಂಡಿರುವೆನೆಂಬುದನ್ನು ನೀನು ಮರೆತುಬಿಟ್ಟಿರುವೆಯೊ ಏನೊ. ಸಾಧುಗಳೂ ಸಂನ್ಯಾಸಿಗಳೂ ಧರ್ಮಸ್ಥಾಪಕರೂ ಹೇಳಿದ ಮಾತುಗಳೆಲ್ಲ ಮಾನವ ಪ್ರಾಣಿಗಳ ಮನೋರಂಜನೆಗಾಗಿ ಇವೆಯಷ್ಟೆ. ಹಾಸ್ಯ ಕಥೆಗಳನ್ನು ಕೇಳಿ ನಾವು ನಕ್ಕುಬಿಡುವಂತೆ ಈ ಸಿದ್ಧಾಂತಗಳನ್ನು ಕೇಳಿ ನಕ್ಕುಬಿಡಬೇಕು. ಅದಕ್ಕಿಂತ ಹೆಚ್ಚಿನ ಮಹತ್ವವನ್ನು ನಾನಂತೂ ಕೊಡುವುದಿಲ್ಲ."

ಅಷ್ಟು ಹೇಳಿ ಸಿದ್ಧನಾಥನ ಕೈ ಹಿಡಿದುಕೊಂಡು ದೊಡ್ಡದೊಂದು ಕೊಟಡಿಗೆ ಕರೆದೊಯ್ದ. ತಾಳೆಯ ಗರಿಗಳ ಗ್ರಂಥಗಳಿಂದ ಆ ಕೊಟಡಿ ತುಂಬಿಕೊಂಡಿತ್ತು.

"ಇದೋ, ನನ್ನ ಪುಸ್ತಕಾಲಯ. ಜಗತ್ತಿನ ಸೃಷ್ಟಿಯ ಬಗ್ಗೆ ತತ್ವಜ್ಞಾನಿಗಳು ರಚಿಸಿದ ಜ್ಞಾನಭಂಡಾರವೆಲ್ಲಾ ಇಲ್ಲಿದೆ. ಈ ನಗರದಲ್ಲಿಯೇ ಇಂಥ ದೊಡ್ಡ ಪುಸ್ತಕಾಲಯ ಇನ್ನೊಂದಿಲ್ಲ. ಆದರೂ, ಇಲ್ಲಿರುವುದೆಲ್ಲಾ ರೋಗಿಗಳ ಸ್ವಪ್ನವಿದ್ದಂತಿದೆಯೆಂದು ನನಗೆ ವ್ಯಸನ."

ಹಸ್ತಿದಂತದ ಆಸನವೊಂದರಲ್ಲಿ ಅತಿಥಿಯನ್ನು ಬಲವಂತದಿಂದ ಕೂಡಿಸಿ ತಾನೂ ಹತ್ತಿರ ಕುಳಿತುಕೊಂಡು ಮಾಧವರಸನೆಂದ:

"ಇಲ್ಲಿರುವ ಅನೇಕ ಪುಸ್ತಕಗಳನ್ನು ನೀನೂ ಓದಿರಬಹುದು. ಇವುಗಳ ಬಗ್ಗೆ ನಿನ್ನ ಅಭಿಪ್ರಾಯವೇನು?"

ಆ ಪುಸ್ತಕಗಳ ಮೇಲೆ ದುಃಖಭರಿತ ದೃಷ್ಟಿ ಹಾಯಿಸುತ್ತ ಸಿದ್ಧನಾಥನೆಂದ:

"ಇವನ್ನೆಲ್ಲಾ ಬೆಂಕಿಗೆ ಹಾಕಿ ಸುಟ್ಟುಬಿಡಬೇಕು."

ಮಾಧವರಸ ಮುಗುಳ್ನಗುತ್ತ ಹೇಳಿದ:

"ಸುಟ್ಟುಬಿಡುವುದೇ? ಛೆ. ಅದಕ್ಕೆ ನನ್ನ ಒಪ್ಪಿಗೆಯಿಲ್ಲ. ಈ ರೋಗಿಗಳ ಸ್ವಪ್ನಗಳೂ ಎಷ್ಟೋ ಬಾರಿ ತುಂಬಾ ಮನೋರಂಜಕವಾಗಿ ಕಾಣುತ್ತವೆ. ಅದಲ್ಲದೆ, ಈ ರೋಗಿಗಳ ಸ್ವಪ್ನಗಳನ್ನೂ ಕಲ್ಪನೆಗಳನ್ನೂ ನಷ್ಟಗೊಳಿಸಿ ಬಿಟ್ಟರೆ

ಜಗತ್ತಿನಲ್ಲಿ ರಸವೆಂಬುದೇ ಉಳಿಯಲಾರದು. ನಾವೆಲ್ಲರೂ ಉದಾಸೀನತೆಯ ಕೊಳ್ಳದಲ್ಲಿ ಬಿದ್ದು ನರಳಬೇಕಾದೀತು."

"ನೀನು ಹೇಳುವುದು ನಿಜ, ಮಾಧವರಸ! ನಾಸ್ತಿಕರ ಸಿದ್ಧಾಂತಗಳೆಂದರೆ ಕೇವಲ ಸ್ವಪ್ನಗಳೇ ಸರಿ. ಜಗತ್ತಿನಲ್ಲಿ ಪರಮಾತ್ಮನೊಬ್ಬನೇ ಸತ್ಯ. ಮಿಕ್ಕದೆಲ್ಲಾ ಮಿಥ್ಯೆ."

"ಈ ನಿನ್ನ ಪರಮಾತ್ಮನೆಂದರೆ ಯಾರೆಂದು ತಿಳಿದಿರುವೆ? ನಮ್ಮನ್ನು ಬಿಟ್ಟು ಇನ್ನೆಲ್ಲಿಯ ಪರಮಾತ್ಮ? ಯೋಚಿಸುವ, ವಿಚಾರ ಮಾಡುವ, ಕರ್ಮ ಮಾಡುವ, ಮಾತನಾಡುವ ಪರಮಾತ್ಮನೆಂದರೇನೇ ಮನುಷ್ಯ."

"ನಿನ್ನ ಕಲ್ಪನೆ ತಪ್ಪು. ಮನುಷ್ಯನೆಂದರೆ ಪರಮಾತ್ಮ ಸೃಷ್ಟಿಸಿದ ಮಾಯೆ. ಮನುಷ್ಯನೆಂದರೆ ಒಂದು ಕ್ಷುದ್ರ ಕ್ರಿಮಿ. ಇಡೀ ಪ್ರಪಂಚದ ಅಧಿದೇವತೆಯೆಂದರೇ ಪರಮಾತ್ಮ."

"ಯಾರೂ ಕಾಣದ ಈ ಪರಮಾತ್ಮನಿಗಾಗಿ ಯಾಕೆ ವ್ಯರ್ಥವಾಗಿ ಕಂಠ ಶೋಷಣೆ ಮಾಡಿಕೊಳ್ಳುವೆ ಮಿತ್ರಾ? ನಿನ್ನ ಕಲ್ಪನೆಯನ್ನು ಜನರು ನಂಬುವುದೂ ಸಾಧ್ಯವಿಲ್ಲ. ನೀನು ಸುಮ್ಮನೆ ಒಂದು ಮರೀಚಿಕೆಯ ಬೆನ್ನುಹತ್ತಿ ಹೊರಟಿದ್ದೀಯೆ. ಭಗವಂತನ ಬಗ್ಗೆ ಚರ್ಚೆ ಮಾಡಲೆಂದೇ ನೀನಿಲ್ಲಿಗೆ ಬಂದಿರುವೆಯೋ ಏನು? ಅಥವಾ ನನ್ನಿಂದ ಇನ್ನೇನಾದರೂ ಸೇವೆಯಾಗಬೇಕಾಗಿದೆಯೋ?"

"ನಾವು ಸಂನ್ಯಾಸಿಗಳು ಸಂಸಾರಿಕರ ಸೇವೆಯನ್ನು ಸ್ವೀಕರಿಸುವುದಿಲ್ಲ. ಆಗಲೇ ಹೇಳಲಿಲ್ಲವೆ? ಪರಮಾತ್ಮನದೊಂದು ಕೆಲಸಕ್ಕೆಂದು ನಾನಿಲ್ಲಿಗೆ ಬರಬೇಕಾಯಿತು. ನಿನ್ನಿಂದ ಸ್ವಲ್ಪ ಸಹಾಯವಾಗಬೇಕಾಗಿದೆ. ಇದೊಂದು ಅಂಗವಸ್ತ್ರವನ್ನಷ್ಟೆ ಧರಿಸಿ ನಾನು ನಗರದಲ್ಲಿ ತಿರುಗುವಂತಿಲ್ಲ. ಕೆಲವು ದಿನಗಳ ಮಟ್ಟಿಗೆ ನೀನು ನನಗೊಂದು ನಿಲುವಂಗಿಯನ್ನು ಎರವಲಾಗಿ ಕೊಡುತ್ತೀಯಾ?"

"ಅಷ್ಟೇ ತಾನೆ? ಇನ್ನೇನು ಬೇಡವೆ? ನಿಲುವಂಗಿಗಳಿಗೇನು ಕೊರತೆ? ಬೇಕಾದಷ್ಟು ಬಿದ್ದಿವೆ. ನಿನ್ನ ಮನಸ್ಸಿಗೊಪ್ಪುವಂಥಾದ್ದು ಆರಿಸಿಕೊ." ಎಂದು ಹೇಳಿ ಮಾಧವರಸ ದಾಸಿಯರನ್ನು ಕೂಗಿ ನಿಲುವಂಗಿಗಳನ್ನು ತೆಗೆದುಕೊಂಡು ಬರುವಂತೆ ಆಜ್ಞೆ ವಿಧಿಸಿದ.

ರೇಶಿಮೆ ಜರತಾರಿಗಳಿಂದ ಸಿದ್ಧಗೊಳಿಸಲ್ಪಟ್ಟು ಹೂವುಗಳಿಂದಲಂಕೃತವಾಗಿದ್ದ ಹತ್ತಿಪ್ಪತ್ತು ನಿಲುವಂಗಿಗಳನ್ನು ದಾಸಿಯರು ಹೊತ್ತುಕೊಂಡು ಬಂದರು. ಅವುಗಳಲ್ಲೆಲ್ಲ ಕೀರ ಸಾಧಾರಣವಾಗಿದ್ದೊಂದು ಅಂಗಿಯನ್ನಾರಿಸಿ ತನ್ನ ಅಂಗ ವಸ್ತ್ರದ ಮೇಲೆಯೆ ಅದನ್ನು ತೊಟ್ಟುಕೊಳ್ಳತೊಡಗಿದ ಸಿದ್ಧನಾಥ.

"ಒಳಗೆ ವಸ್ತ್ರ ಇದ್ದರೆ ನಿಲುವಂಗಿ ಶೋಭಿಸುವುದಿಲ್ಲ. ಅದನ್ನು ತೆಗೆದು ಬಿಡಿರಿ" ಎಂದು ಒಬ್ಬ ದಾಸಿ ಹೇಳಿದಳು.

"ಬೇಡ ಬೇಡ, ಅದೂ ಇರಲಿ. ಈ ನಿಲುವಂಗಿಯೇನು ನನಗೆ ಶಾಶ್ವತವಲ್ಲ" ಎಂದ ಸಿದ್ಧನಾಥ.

ದಾಸಿಯರು ನಗುತ್ತಾ ಹೊರಟುಹೋದರು.

"ಇನ್ನೇನಾದರೂ ಬೇಕೇ ಸಿದ್ಧನಾಥ?"

"ಒಂದು ಜೊತೆ ಪಾದತ್ರಾಣವನ್ನೂ ಒಂದು ಸಾವಿರ ವರಹಗಳನ್ನೂ ಕೊಟ್ಟರೆ ದೇವರು ನಿನ್ನನ್ನು ಆಶೀರ್ವದಿಸುವನು."

ಮಾಧವರಸ ಅವುಗಳನ್ನೂ ತರಿಸಿಕೊಟ್ಟ. ವರಹಗಳನ್ನು ತುಂಬಿದ ಚೀಲವನ್ನು ಸೊಂಟಕ್ಕೆ ಬಿಗಿದು, ಪಾದತ್ರಾಣಗಳನ್ನು ಮೆಟ್ಟಿಕೊಂಡು, ತನ್ನ ವೇಷವನ್ನು ನೋಡಿ ತಾನೇ ನಗುತ್ತಾ ಸಿದ್ಧನಾಥನೆಂದ:

"ನನ್ನ ಬಗ್ಗೆ ತಪ್ಪು ಕಲ್ಪನೆ ಮಾಡಿಕೊಳ್ಳಬೇಡ ಮಾಧವರಸ! ಒಂದು ಸದುದ್ದೇಶ ಸಾಧಿಸುವುದಕ್ಕಾಗಿಯೆ ನಾನು ಹೊರಟಿದ್ದೇನೆ."

"ಪ್ರಿಯ ಮಿತ್ರಾ, ನಾನೇಕೆ ತಪ್ಪು ಕಲ್ಪನೆ ಮಾಡಿಕೊಳ್ಳಲಿ? ಅದೂ ನಿನ್ನಂಥ ವಿರಕ್ತನ ಬಗ್ಗೆ? ಒಳ್ಳೆಯದನ್ನೋ ಕೆಟ್ಟದ್ದನ್ನೋ ಮಾಡುವ ಶಕ್ತಿಯೇ ಮನುಷ್ಯನಲ್ಲಿಲ್ಲವೆಂದು ನನಗನಿಸುತ್ತದೆ. ಒಳ್ಳೆಯದೆನ್ನುವುದೂ ಕೆಟ್ಟದೆನ್ನುವುದೂ ಕೇವಲ ವಿಚಾರಗಳನ್ನವಲಂಬಿಸಿವೆ. ತಪಸ್ವಿಗಳು ಕರ್ಮ ಮಾಡಲು ಕೆಲವು ನಿಯಮಗಳಿರುತ್ತವೆಂದೂ ನಾನು ಬಲ್ಲೆ. ನಿನ್ನ ಮನಸ್ಸಿಗೆ ಬಂದಂತೆ ಮಾಡಬಹುದು."

ತನ್ನ ಕಾರ್ಯದ ಬಗೆಗೆ ಮಾಧವರಸನಿಗೆ ತಿಳಿಸಿಬಿಡುವುದೇ ಒಳ್ಳೆಯದೆಂದು ಸಿದ್ಧನಾಥನಿಗನ್ನಿಸಿತು. ಅಂತೆಯೆ ಆತ ಹೇಳಿದ:

"ನಾನು ಬಂದ ಉದ್ದೇಶವನ್ನು ನಿನಗೆ ತಿಳಿಸಿಬಿಡುತ್ತೇನೆ. ಇಲ್ಲಿಯ ಪ್ರಸಿದ್ಧ ನರ್ತಕಿ ಮುಕ್ತಾದೇವಿಯನ್ನು ನೀನು ಬಲ್ಲೆಯಷ್ಟೆ?"

"ಸಿದ್ಧನಾಥ, ಮುಕ್ತಾದೇವಿಯ ಪರಿಚಯವಿಲ್ಲದ ಪ್ರಜರೂ ಉಂಟೇ ಈ ನಮ್ಮ ನಗರಿಯಲ್ಲಿ ? ನಾನೂ ಆಗಾಗ ಅವಳ ಮನೆಗೆ ಹೋಗುತ್ತಿದ್ದೆ— ಕೆಲವು ವರ್ಷಗಳ ಹಿಂದೆ. ಕಲ್ಯಾಣ ಪಟ್ಟಣದ ಸುಂದರಿಯರಲ್ಲೆಲ್ಲಾ ಅವಳು ಸುಂದರಿಯಾಗಿದ್ದಾಳೆ. ಅವಳಿಗಾಗಿ ನನ್ನ ಎಷ್ಟೋ ಸಂಪತ್ತು ಹೊರಟು ಹೋಗಿದೆ. ಅವಳ ರೂಪ ಸೌಂದರ್ಯ ಕಲಾವಂತಿಕೆಗಳನ್ನು ಗೌರವಿಸಲೆಂದು ನಾನೊಂದು ಕಾವ್ಯವನ್ನು ರಚಿಸಿದ್ದುಂಟು. ಸೌಂದರ್ಯವೇ ಪ್ರಪಂಚದ ಮಹಾಶಕ್ತಿಶಾಲಿ ವಸ್ತುವಾಗಿದೆ. ನಾವು ಸದಾಕಾಲವೂ ಸುಂದರವಾಗಿರಲು ಸಾಧ್ಯವಾದಲ್ಲಿ, ದಾರ್ಶನಿಕರ ಈಶ್ವರೀಯ ಶಬ್ದಗಳ, ಜೀವ, ಮಾಯೆ, ಮೋಹ ಮತ್ತಿನ್ನಿತರ ಕಲ್ಪಿತ ಕನಸುಗಳ ಚಿಂತೆ ನಮಗಿರಲಾರದು. ಅದಿರಲಿ. ಆದರೆ, ನಿನ್ನಂಥ ವಿರಕ್ತ ತಪೋವನಸವನ್ನು ತ್ಯಜಿಸಿ ಬಂದು ಮುಕ್ತಾದೇವಿಯ ಮಾತು ಆಡುತ್ತಿರುವೆಯಲ್ಲಾ ಅಂತ ನನಗೆ ಆಶ್ಚರ್ಯ.

ಸಿದ್ಧನಾಥ ಚಕಿತನಾಗಿ ತನ್ನ ಮಿತ್ರನನ್ನು ದಿಟ್ಟಿಸಿದ. ಮಾಧವರಸ ತನ್ನ ಪಾಪಜೀವನದ ಬಗೆಗೆ ಇಷ್ಟು ಸ್ಪಷ್ಟವಾಗಿ ಮಾತನಾಡಿದುದನ್ನು ಕಂಡು ಅವನಿಗೆ ಆಶ್ಚರ್ಯವಾಗದಿರಲಿಲ್ಲ.

"ಮಾಧವಮಿತ್ರಾ, ಮುಕ್ತಾದೇವಿಯೊಡನೆ ನನಗೇನು ಸಂಬಂಧ ಎಂದು ಕೇಳುತ್ತೀಯಲ್ಲವೆ ? ಈ ತಿರಸ್ಕರಣೀಯವಾದ ಸಾಂಸಾರಿಕ ಜೀವನದಿಂದ ಆಕೆಯನ್ನು ಮುಕ್ತಗೊಳಿಸಿ ಗೌರೀಶಂಕರನ ಸೇವೆಗೆ ತೊಡಗಿಸುವುದೇ ನನ್ನ ಉದ್ದೇಶ. ಪರಮಾತ್ಮನ ಕೃಪೆಯಿದ್ದಲ್ಲಿ ನಾನು ಇಂದೇ ಅವಳನ್ನು ಕಲ್ಯಾಣ ದಿಂದ ಹೊರಡಿಸಬಹುದು. ಶೈವಪಂಥೀಯ ಸಂನ್ಯಾಸಿನಿಯರ ಆಶ್ರಮವೊಂದ ರಲ್ಲಿ ಅವಳೂ ಆಶ್ರಯಪಡೆಯಬಹುದು."

"ಪ್ರಿಯ ಮಿತ್ರಾ, ರತಿದೇವಿಯನ್ನು ರೇಗಿಸಬೇಡ. ಅಪೂರ್ವ ಶಕ್ತಿವಂತ ಳಾದ ದೇವಿ ಅವಳು. ರತಿದೇವಿಯ ಸರ್ವೋತ್ತಮ ಪೂಜಾರಿಣಿಯನ್ನೇ ನೀನು ಕದ್ದೊಯ್ದರೆ ಅವಳು ಕೋಪಿಸಿಕೊಳ್ಳದಿರಲಾರಳು."

"ಈ ದೇವಿಯರೆಲ್ಲಾ ಎಂಥ ದೇವಿಯರು ! ಇವರೆಲ್ಲರ ಅಧಿದೇವತೆ ಯಾದ ಗೌರೀಶಂಕರನೇ ನನ್ನ ರಕ್ಷಣೆಗಿರುವಾಗ ನನಗೇನು ಹೆದರಿಕೆ ? ನರಕ ಕುಂಡದಲ್ಲಿ ಮುಳುಗಿರುವ ನಿನ್ನನ್ನೂ ಹೊರಗೆಳೆದು ಸನ್ಮಾರ್ಗಕ್ಕೆ ತರುವ ಶಕ್ತಿ ಯುಂಟು ಪರಮಾತ್ಮನಿಗೆ."

ಅಷ್ಟು ಹೇಳಿ ಸಿದ್ಧನಾಥ ಅಲ್ಲಿಂದ ನಡೆದ. ಮಾಧವರಸನೂ ಅವನನ್ನು ಹಿಂಬಾಲಿಸಿಕೊಂಡು ಬಂದು, ಬಾಗಿಲಿನ ಹತ್ತಿರ ಅವನ ಭುಜದ ಮೇಲೆ ಕೈ ಯಿಟ್ಟು ಸ್ನೇಹದ ಸಲುಗೆಯಿಂದ ಹೇಳಿದ:

"ರತಿ–ಮದನರನ್ನು ಕೆಣಕಬೇಡ ಸಿದ್ಧನಾಥ! ಒಂದಿಲ್ಲೊಂದು ದಿನ ಅವರು ನಿನ್ನ ಮೇಲೆ ಸೇಡು ತೀರಿಸಿಕೊಳ್ಳದಿರಲಾರರು."

ಆ ಎಚ್ಚರಿಕೆಯನ್ನು ತುಚ್ಛವಾಗಿ ಕಂಡು ಸಿದ್ಧನಾಥ ಬೀದಿಗಿಳಿದು ನಡೆಯ ತೊಡಗಿದ. ಮಾಧವರಸನ ಮಾತುಗಳಿಂದಾಗಿ ಅವನ ಮನಸ್ಸಿನಲ್ಲಿ ಜುಗುಪ್ಸೆ ಯುಂಟಾಗಿತ್ತು. ಆತ ಮುಕ್ತಾದೇವಿಯೊಡನೆ ಪ್ರಣಯಸಂಬಂಧವಿಟ್ಟುಕೊಂಡ ವಿಚಾರವಂತೂ ಸಿದ್ಧನಾಥನಿಗೆ ಪೂರಾ ಅಸಹ್ಯವೆನಿಸಿತ್ತು. ಈ ಸ್ತ್ರೀಯ ಸಂಗ ದಲ್ಲಿ ಆತ ಮಾಡಿದ ಪಾಪ ಇನ್ನಿತರ ಪಾಪಗಳಿಗಿಂತ ಹೆಚ್ಚಿನದೆಂದೇ ಅವನಿಗೆ ತೋರಿತು. ಸಿದ್ಧನಾಥನ ಮನಸ್ಸಿನಲ್ಲಿ ಭೀಕರವಾದ ವೈಮನಸ್ಯದ ಭಾವ ವೆದ್ದಿತು. ಮಾಧವರಸನ ಬಗೆಗೆ ಅವನಿಗೆ ಅತಿಶಯವಾದ ತಿರಸ್ಕಾರವೆನ್ನಿಸತೊಡ ಗಿತು. ಪತಿತ ಕರ್ಮಗಳ ಬಗೆಗೆ ಅವನಿಗೆ ಯಾವಾಗಲೂ ಜುಗುಪ್ಸೆಯೇ ಇದ್ದಿತಾದರೂ ಈ ದಿನ ಅನ್ನಿಸಿದಷ್ಟು ಹೇಸಿಕೆ ಈ ಮೊದಲೆಂದೂ ಅವನಿಗನ್ನಿಸಿ ರಲಿಲ್ಲ.

ಎಂತಲೇ, ಈ ನೀಚ ವಿಲಾಸಿಗಳ ಹಿಡಿತದಿಂದ ಮುಕ್ತಾದೇವಿಯನ್ನು ಮುಕ್ತಗೊಳಿಸಬೇಕೆಂಬ ಅವನ ಆಕಾಂಕ್ಷೆ ಇನ್ನೂ ಪ್ರಬಲವಾಯಿತು. ಸಾಧ್ಯ ವಾದಷ್ಟು ಬೇಗ ಆಕೆಯನ್ನು ನೋಡಬೇಕು, ಈ ಹೇಯವಾದ ಜೀವನದ ಕುರಿತು ಅವಳಿಗೂ ಜುಗುಪ್ಸೆ ಹುಟ್ಟುವಂತೆ ಮಾಡಬೇಕು, ಈ ಪಾಪಕುಂಡ ದಿಂದ ಅವಳನ್ನೆಬ್ಬಿಸಿ ಪರ್ವತಕ್ಕೆ ಕರೆದೊಯ್ಯಬೇಕು.

ಆದರೆ, ಅಷ್ಟು ಬೇಗ ಅವನಿಗೆ ಮುಕ್ತಾದೇವಿಯ ಭೆಟ್ಟಿಯಾಗುವಂತಿರ ಲಿಲ್ಲ. ಸಂಜೆಯಾಗುವ ವರೆಗೂ ಆತ ಕಾದುಕೊಂಡಿರಬೇಕಾದುದು ಅಗತ್ಯ ವಾಗಿತ್ತು. ಸಿದ್ಧನಾಥ ನಗರದ ಬೀದಿಗಳಲ್ಲಿ ಅಲೆಯತೊಡಗಿದ. ಅಲ್ಲಿನ ಭವ್ಯ ದೇವಮಂದಿರಗಳಿಗೂ ಆತ ಅಡಿಯಿಡಲಿಲ್ಲ. ಭಗವಂತನಲ್ಲಿ ನಂಬುಗೆ ಯಿಲ್ಲದಿದ್ದ ನಾಸ್ತಿಕರು ಆ ದೇವಾಲಯಗಳನ್ನು ಅಪವಿತ್ರಗೊಳಿಸಿರುವರೆಂದೇ ಆತ ಭಾವಿಸಿದ್ದ. ಪೂಜ್ಯಪಾದ ಪಂಥೀಯ ಶೈವಸಂನ್ಯಾಸಿಗಳನ್ನು ಅಲ್ಲಿನ ಜನ ಹಿಂದೆ ಅನೇಕ ಬಾರಿ ಪೀಡಿಸಿದ್ದರು. ಆ ಪಂಥದಲ್ಲಿ ಶ್ರದ್ಧೆಯಿಟ್ಟುಕೊಂಡಿದ್ದ

ಭಕ್ತರನೇಕರನ್ನು ಚಿತ್ರಹಿಂಸೆಗೊಳಗು ಮಾಡಿದ್ದರು. "ಜೈ ಶಿವಶಂಕರ್" ಎಂದು ಘೋಷಿಸುವುದಕ್ಕೂ ಪ್ರತಿಬಂಧವಿತ್ತು ಆ ನಗರದಲ್ಲಿ. ಹಾಗೆ ಘೋಷಿಸಿದವರನೇಕರು ಪ್ರಾಣ ಕಳೆದುಕೊಳ್ಳುವ ಪ್ರಸಂಗಗಳೂ ಬಂದಿದ್ದುವು. ಈಚೆಗೆ ಕೊಂಚ ಉದಾರಮತವಾದಿಯಾದ ರಾಜನೊಬ್ಬ ಪಟ್ಟವೇರಿದಂದಿನಿಂದ ಮೊದಲಿನ ನಿರ್ಬಂಧಗಳು ಸಡಿಲುಗೊಂಡಿದ್ದುವಾದರೂ, ಒಟ್ಟಿನಲ್ಲಿ ಶೈವಪಂಥೀಯ ಧರ್ಮದ ಬಗೆಗೆ ಅಲ್ಲಿ ಆದರಭಾವವಿರಲಿಲ್ಲ.

ಸಿದ್ಧನಾಥ ನಗರವನ್ನೆಲ್ಲ ಸುತ್ತಿದ. ಒಂದೊಂದು ಬಾರಿ ದೈನ್ಯಭರಿತ ಕಣ್ಣುಗಳನ್ನು ನೆಲದ ಕಡೆ ತಿರುಗಿಸುತ್ತಿದ್ದ; ಒಂದೊಂದು ಬಾರಿ ಉಲ್ಲಾಸದಿಂದ ಆಕಾಶದೆಡೆಗೆ ದೃಷ್ಟಿ ಹೊರಳಿಸುತ್ತಿದ್ದ. ಹಾಗೆ ಅಲೆಯುತ್ತ ಅಲೆಯುತ್ತ ನಗರದ ಹತ್ತಿರವಿದ್ದ ಪ್ರಖ್ಯಾತ ಸರೋವರದ ಬಳಿ ಬಂದು ಒಂದು ಗಿಡದ ಕೆಳಗೆ ಕುಳಿತುಕೊಂಡ. ಸರೋವರದಲ್ಲಿ ದೋಣಿಗಳು ವಿಹರಿಸುತ್ತಿದ್ದುವು. ಹಾಡು ಹೇಳುತ್ತ ನಾವಿಕರು ಹುಟ್ಟು ಬೀಸುತ್ತಿದ್ದರು.

ಸಿದ್ಧನಾಥ ಯೋಚಿಸಿದ: "ನಾನು ಒಂದು ಬಾರಿ ಗೀತೆಗಳನ್ನು ಹಾಡುತ್ತ ಈ ಸರೋವರದಲ್ಲಿ ವಿಹರಿಸಿದ್ದೆ. ಸಂಸಾರದ ದೋಣಿ ನನ್ನನ್ನೂ ಮರುಳುಗೊಳಿಸಿತ್ತು. ಆದರೂ ನಾನು ಬಲು ಬೇಗ ನನ್ನ ತಪ್ಪನ್ನರಿತುಕೊಂಡೆ. ಮಾಯಾರೂಪಸಿಯ ಮಾಟಗಾರಿಕೆ ನನ್ನ ಮೇಲೆ ನಡೆಯಲಿಲ್ಲ."

ಯೋಚಿಸುತ್ತಿದ್ದ ಹಾಗೆಯೆ ಆವನ ಕಣ್ಣು ಮುಚ್ಚಿಕೊಂಡುವು. ಒಂದೆರಡು ಗಳಿಗೆಗಳಲ್ಲಿಯೇ ಆವನಿಗೆ ನಿದ್ದೆ ಬಂತು. ನಿದ್ದೆಯಲ್ಲಿ ಒಂದು ಕನಸು ಕಾಣಿಸಿತು. ಆ ಕನಸಿನಲ್ಲಿ ತೀವ್ರತರವಾದುದೊಂದು ಸದ್ದು ಕೇಳಿಸಿತು. ಆಕಾಶದಲ್ಲಿ ಕೆಂಬಣ್ಣ ಪಸರಿಸಿತು. ಪ್ರಳಯಕಾಲ ಸಮೀಪಿಸಿದೆಯೆಂದೇ ಅವನಿಗನ್ನಿಸಿತು. ಆತ ಹೃದಯಪೂರ್ವಕವಾಗಿ ದೇವರನ್ನು ಪ್ರಾರ್ಥಿಸತೊಡಗಿದ. ಅದೇ ಸಮಯದಲ್ಲಿ ಹಣೆಯ ಮೇಲೆ ಪ್ರಕಾಶ ಕಿರಣಗಳನ್ನುಳ್ಳ ಭಯಂಕರ ಜಂತುವೊಂದು ತನ್ನೆಡೆಗೆ ಬರುತ್ತಿದ್ದುದನ್ನು ಆತ ನೋಡಿದ. ಅದು ಮುನ್ನುಗ್ಗಿ ಬಂದು ಆತನನ್ನು ತನ್ನ ಕೋರೆದಾಡೆಗಳಲ್ಲಿ ಹಿಡಿದುಕೊಂಡು, ಬೆಕ್ಕು ತನ್ನ ಮರಿಗಳನ್ನು ಕಚ್ಚಿಕೊಂಡೊಯ್ಯುವಂತೆ ಅವನನ್ನು ಒಯ್ಯತೊಡಗಿತು. ಎಷ್ಟೋ ರಾಜ್ಯಗಳನ್ನು ದಾಟಿ, ನದಿಗಳನ್ನೂ ಬೆಟ್ಟಗಳನ್ನೂ ದಾಟಿ ಕೊನೆಗೆ ನಿರ್ಜನ ಸ್ಥಾನವೊಂದಕ್ಕೆ ಆತನನ್ನು ತಂದಿತು. ಅಲ್ಲಿ ಭಯಾನಕವಾದ ಪರ್ವತವಿತ್ತು.

ಉರಿಯುವ ಬೂದಿಯ ಬೆಟ್ಟವಿತ್ತು. ಪೃಥ್ವಿಯ ಗರ್ಭದಿಂದ ಬೆಂಕಿಯ ಉಂಡೆಗಳು ಹೊರಬೀಳುತ್ತಿದ್ದುವು. ಸಿದ್ಧನಾಥನನ್ನು ನೆಲಕ್ಕಿಳಿಸಿ ಆ ಜಂತುವೆಂದಿತು: "ನೋಡು."

ಸಿದ್ಧನಾಥ ಆ ತಗ್ಗಿನಲ್ಲಿಣುಕಿ ನೋಡಿದ. ಅಗ್ನಿನದಿಯೊಂದು ಕಪ್ಪು ಪರ್ವತಗಳ ನಡುವೆ ಹಾದು ಪೃಥ್ವಿಯ ಅಂತಸ್ತಲದಲ್ಲಿ ಹರಿಯುತ್ತಿದ್ದುದು ಕಾಣಿಸಿತು. ಅಲ್ಲಿನ ತೀವ್ರ ಪ್ರಕಾಶದಲ್ಲಿ ಯಮದೂತರು ಮೃತಾತ್ಮಗಳಿಗೆ ಘೋರ ಯಾತನೆಗಳನ್ನೀಯುತ್ತಿದ್ದರು. ಇಂಥ ಯಾತನೆ ಸಹಿಸುವಾಗಲೂ ಅವು ಸುಖವಾಗಿದ್ದ ಹಾಗೆ ತೋರುತ್ತಿತ್ತು. ಅವುಗಳಲ್ಲೊಬ್ಬ ಪುರುಷನ ಆತ್ಮ ಕಣ್ಣು ಮುಚ್ಚಿಕೊಂಡು ಗಾನ ಮಾಡುತ್ತಿತ್ತು. ಆ ಗಾನದಲ್ಲಿ ಭೂಲೋಕದ ಮಾಧುರ್ಯ ಪ್ರವಹಿಸುತ್ತಿತ್ತು. ಆ ಹಾಡಿನಲ್ಲಿ ವೀರಪುರುಷರ ಪ್ರಶಂಸೆಯಿತ್ತು, ದೇವತೆಗಳ ಸ್ತೋತ್ರವಿತ್ತು, ಸುಂದರಿಯರ ಬಣ್ಣನೆಯಿತ್ತು, ಶೃಂಗಾರದ ಸೊಬಗಿತ್ತು, ಋತುಗಳ ಗುಣಗಾನವಿತ್ತು. ಹಸಿರು ಬಣ್ಣದ ಪುಟ್ಟ ಪುಟ್ಟ ಪಿಶಾಚಗಳು ಆ ಗಾಯಕನ ಕಂಠವನ್ನೂ ಬಾಯಿಯನ್ನೂ ತಪ್ತ ಲೋಹದ ಕತ್ತಿಗಳಿಂದ ಇರಿಯುತ್ತಿದ್ದುವು. ಅದನ್ನು ಕೊಂಚವೂ ಗಮನಿಸದೆ ಕಾಲಿದಾಸನ ಆ ಪ್ರತಿಚ್ಛಾಯೆ ತನ್ನ ಹಾಡುಗಳಲ್ಲಿಯೇ ತಲ್ಲೀನವಾಗಿತ್ತು. ಅವನ ಸಮೀಪದಲ್ಲಿಯೆ ವಿಕ್ರಮಾದಿತ್ಯನ ಛಾಯೆ ಕತ್ತು ಅಲುಗಾಡಿಸುತ್ತಿತ್ತು. ಯಮದೂತನೊಬ್ಬ ಆ ರಾಜನ ಕಿವಿಗಳಲ್ಲಿ ಸುಡುಸುಡುವ ತೈಲವನ್ನು ತುಂಬುತ್ತಿದ್ದ. ಆದರೂ ವಿಕ್ರಮಾದಿತ್ಯನ ಛಾಯೆ ಕಾಲಿದಾಸನ ಗಾಯನವನ್ನಾಲಿಸಿ ಕತ್ತು ಅಲುಗಾಡಿಸುವುದನ್ನು ನಿಲ್ಲಿಸಲಿಲ್ಲ.

ಆ ಅಗ್ನಿ ನದಿಯ ಮಲಿನ ತೀರದ ಮೇಲೆ ಅನೇಕ ಋಷಿಗಳೂ ತಪಸ್ವಿಗಳೂ ಓದುತ್ತ ಬರೆಯುತ್ತ ಕುಳಿತಿದ್ದುದು ಸಿದ್ಧನಾಥನಿಗೆ ಕಾಣಿಸಿತು. ವಿಶ್ವಾಮಿತ್ರ, ವಸಿಷ್ಠ, ಅಗಸ್ತ್ಯ, ದೂರ್ವಾಸ, ವ್ಯಾಸ, ವಾಲ್ಮೀಕಿ ಮೊದಲಾದ ಮಹಾ ಮಹಾ ಋಷಿಗಳ ಛಾಯೆಗಳೆಲ್ಲ ಅಲ್ಲಿ ಕಾಣಿಸಿದುವು. ಸಿದ್ಧನಾಥ ವಿಸ್ಮಿತನಾಗಿ ಕಣ್ಣರಳಿಸಿ ನೋಡಿದ. ಆ ಋಷಿಗಳಿಂದ ತುಸು ದೂರದಲ್ಲಿ ರಾಮ, ರಾವಣ, ಸೀತೆ, ಮಂಡೋದರಿ, ಲಕ್ಷ್ಮಣ, ದಶರಥ, ಹನುಮಂತ, ಕೃಷ್ಣ, ಅರ್ಜುನ, ದುರ್ಯೋಧನ, ದುಶ್ಶಾಸನ, ದ್ರೌಪದಿ ಮೊದಲಾದ ಪುರಾಣಕಾಲದ ಪ್ರಖ್ಯಾತ ಸ್ತ್ರೀಪುರುಷರೆಲ್ಲರ ನಗ್ನಛಾಯೆಗಳು ಹತ್ತಿರ ಹತ್ತಿರವೇ ಬಿದ್ದು

ಕೊಂಡಿದ್ದುದು ಕಂಡುಬಂದಿತು.

ಈ ದೃಶ್ಯದಿಂದ ಸ್ತಿಮಿತನಾಗಿ ಸಿದ್ಧನಾಥ ಆ ಜಂತುವಿನ ಕಡೆ ನೋಡಿದ. ಅದು ಇದ್ದಕ್ಕಿದ್ದ ಹಾಗೇ ಅದೃಶ್ಯವಾಯಿತು. ಅದರ ಬದಲು ಸ್ತ್ರೀಮೂರ್ತಿಯೊಂದು ಕಾಣಿಸಿಕೊಂಡಿತು. ಆಕೆ ಹೇಳಿದಳು:

"ಇದನ್ನೆಲ್ಲಾ ಸರಿಯಾಗಿ ನೋಡಿ ಇದರರ್ಥವೇನೆಂದು ತಿಳಿದುಕೋ. ವಿಕಟದುರಾಗ್ರಹಗಳಿಂದಾಗಿ ಈ ಪತಿತರು ನರಕದಲ್ಲೂ ಭ್ರಮೆಗಳ ಜಾಲದಲ್ಲೇ ಸಿಲುಕಿ ಒದ್ದಾಡುತ್ತಿದ್ದಾರೆ. ಇವರಲ್ಲಿ ಕೆಲವರಿಗೆ ತಾವು ಕವಿಗಳೆಂಬ ಜಂಬವಿತ್ತು. ಇನ್ನು ಕೆಲವರಿಗೆ ತಾವು ರಾಜ-ಮಹಾರಾಜರೆಂಬ ಗರ್ವವಿತ್ತು. ಇನ್ನು ಕೆಲವರು ತಾವೇ ಅವತಾರಪುರುಷರೆಂದು ಭ್ರಮಿಸಿದ್ದರು. ಮತ್ತೆ ಕೆಲವರು ತಾವೇ ಮೂಲೋಕದ ಗಂಡರೆಂದು ಮೆರೆಯುತ್ತಿದ್ದರು. ಮೃತ್ಯುವಿನಿಂದಲೂ ಕೂಡಾ ಇವರ ವಿಚಾರ ಬದಲಾಗಲಿಲ್ಲ. ಇದರಿಂದ ಏನು ಸಿದ್ಧವಾಗುತ್ತೆ, ತಿಳಿಯಿತೇ? ಪರಮಾತ್ಮನ ದರ್ಶನವಾಗಲು ಸಾವು ಮಾತ್ರವೇ ಸಾಲದು. ಮಾನವ ಪ್ರಾಣಿಗಳಾಗಿರುವಾಗ ಸತ್ಯವನ್ನುಪೇಕ್ಷಿಸಿ ಕೇವಲ ಅಹಂಕಾರನಿರತರಾಗಿದ್ದ ಈ ಪಾಪಿಗಳು ಕಡೆಯವರೆಗೂ ಸತ್ಯದಿಂದ ವಂಚಿತರಾಗಿಯೇ ಉಳಿಯುವರು. ಈ ಆತ್ಮಗಳ ಸುತ್ತುಮುತ್ತ ರೋಷದಿಂದ ಹಾರಾಡುತ್ತಿರುವ ಜಂತುಗಳಾವುವು ಗೊತ್ತೇ? ಅವು ಇನ್ನೇನೂ ಅಲ್ಲ; ಈಶ್ವರೀ ನ್ಯಾಯದ ಭಿನ್ನ ಭಿನ್ನ ರೂಪಗಳೇ ಅವುಗಳು. ಈ ಆತ್ಮಗಳು ಏನನ್ನೂ ನೋಡಲಾರವು, ಏನನ್ನೂ ಅರಿಯಲಾರವು. ಸತ್ಯಜ್ಞಾನಕ್ಕೆರವಾದ ಈ ಆತ್ಮಗಳಿಗೆ ತಮ್ಮ ಸ್ವಂತ ದುಷ್ಕರ್ಮಗಳ ಅರಿವೂ ಇಲ್ಲ. ಭಗವಂತನೂ ಇವುಗಳನ್ನು ಶಿಕ್ಷೆಯಿಂದ ಮುಕ್ತಗೊಳಿಸಲಾರ."

ಸಿದ್ಧನಾಥ ಹೇಳಿದ:

"ಈಶ್ವರ ಸರ್ವಶಕ್ತಿವಂತ. ಅವನಿಗೆ ಅಸಾಧ್ಯವಾದುದೇನೂ ಇಲ್ಲ."

ಆ ಸ್ತ್ರೀಮೂರ್ತಿ ಹೇಳಿತು:

"ಆತ ಅನ್ಯಾಯ ಮಾಡುವುದಿಲ್ಲ. ಆತ್ಮಗಳಿಗೆ ಶಿಕ್ಷೆ ಕೊಡುವ ಮೊದಲು ಅವುಗಳನ್ನು ಜ್ಞಾನದಿಂದ ಪ್ರಕಾಶಿತಗೊಳಿಸಬೇಕಾಗುತ್ತದೆ. ಸತ್ಯದ ಜ್ಯೋತಿಯನ್ನು ಕಂಡ ಬಳಿಕ ಅವರು ಮೆತ್ತಗಾಗುವರು."

ಸಿದ್ಧನಾಥ ಮತ್ತೆ ಭಯಭೀತನಾಗಿ ಭೂಗರ್ಭದಲ್ಲಿಣುಕಿ ನೋಡಿದ. ಈ ಬಾರಿ, ಪುಟ್ಟ ಪುಟ್ಟ ಗಿಡಗಳ ಕೆಳಗೆ, ಹಣೆಯ ಮೇಲೆ ಹೂಮಾಲೆಯಿಟ್ಟು ಕೊಂಡು ನಗುತ್ತ ಕುಳಿತಿದ್ದ ಮಾಧವರಸನ ಛಾಯಾಮೂರ್ತಿ ಕಾಣಿಸಿತು. ಅವನ ಹತ್ತಿರದಲ್ಲಿಯೇ ಕಲ್ಯಾಣ ನಗರದ ಪ್ರಸಿದ್ಧ ವೇಶ್ಯೆಯೊಬ್ಬಾಕೆಯೂ ಭವ್ಯ ವಸ್ತ್ರಧಾರಿಯಾಗಿ ಕುಳಿತಿದ್ದಳು. ಅವಳ ಮುಖಮುದ್ರೆ ಮನೋಹರವೂ ಪ್ರತಿಭಾಯುಕ್ತವೂ ಆಗಿತ್ತು. ತತ್ತ್ವಜ್ಞಾನ ಮತ್ತು ಪ್ರೇಮಗಳನ್ನು ಕುರಿತು ಅವರಿಬ್ಬರೂ ಚರ್ಚಿಸುತ್ತಿದ್ದ ಹಾಗೆ ತೋರುತ್ತಿತ್ತು. ಸುಡುಸುಡುವ ಅಗ್ನಿ ವೃಷ್ಟಿಯೂ ಅವರಿಗೆ ಸುಗಂಧಿತ ವಾಯುವಿನಂತೆ ಶೀತಲವಾಗಿ ಭಾಸವಾಗು ತ್ತಿತ್ತು. ಸಿದ್ಧನಾಥ ಆ ದೃಶ್ಯವನ್ನು ನೋಡಿ ಕ್ರೋಧದಿಂದ ಕೆರಳಿ ಕೂಗಿಕೊಂಡ: "ಪರಮಾತ್ಮಾ, ಇವರ ಮೇಲೆ ವಜ್ರದ ಗದೆ ಬೀಸು. ಈತ ಮಹಾಪಾಪಿ ಮಾಧವರಸ. ಈಕೆ ಅವನ ಪಾಪದಲ್ಲಿ ಪಾಲುಗಾರ್ತಿ. ಈತನನ್ನು ಕಠೋರವಾಗಿ ಪೀಡಿಸು; ಗಡಗಡ ನಡುಗುವಂತೆ, ಹಲ್ಲು ಕಿರಿಯು ವಂತೆ ಪೀಡಿಸು. ಮುಕ್ತಾದೇವಿಯ ಜೊತೆಗೂ ಈತ ಪಾಪಾಚಾರ ನಡೆಸಿ ದ್ದಾನೆ, ಅವಳನ್ನು ಭ್ರಷ್ಟಗೊಳಿಸಿದ್ದಾನೆ."

ಸಿದ್ಧನಾಥ ಹಾಗೆ ಕೂಗುತ್ತಿದ್ದಂತೆಯೆ ಕನಸು ಒಡೆದು ಅವನಿಗೆಚ್ಚರವಾ ಯಿತು. ಸ್ವಪ್ನದಲ್ಲಿ ಕಾಣಿಸಿದ ಸಂಗತಿಗಳ ಬಗೆಗೇ ಯೋಚಿಸುತ್ತ ಆತ ಅಲ್ಲಿಂದೆದ್ದು ನಡೆದ. "ಇದೆಂಥ ದುಃಸ್ವಪ್ನ! ನರಕದಲ್ಲಿ ಯಾವ ತೊಂದರೆಯೂ ಇಲ್ಲವೆಂದು ಭಾವಿಸುವುದೆಂದರೆ ಪರಮಾತ್ಮನ ಶಕ್ತಿಯನ್ನೇ ಅಲ್ಲಗಳೆದ ಹಾಗೆ. ಇದು ಮಾಯೆಯ ಪ್ರಭಾವದಿಂದಲೇ ಬಿದ್ದ ಸ್ವಪ್ನವೆಂಬುದು ಖಂಡಿತ."

ಹಾಗೆ ತರ್ಕ–ವಿತರ್ಕಗಳಲ್ಲಿ ಮಗ್ನನಾಗಿ ಆತ ಮುಂದೆ ನಡೆದ. ಸಾಧು ಗಳಿಗೆ ಇಂಥ ವಿವೇಚನೆ ಲಾಭದಾಯಕವಾಗಿರುವುದೆಂದೇ ಸಿದ್ಧನಾಥ ನಂಬಿ ಕೊಂಡಿದ್ದ. ಪ್ರೇತಗಳು ಸದಾಕಾಲವೂ ಸಾಧುಗಳ ಸುತ್ತಲೂ ಸುಳಿದಾಡುತ್ತಿ ರುತ್ತವೆಂದು ಆತ ಭಾವಿಸಿದ್ದ. ಮನುಷ್ಯರಿಂದ ತಾವು ದೂರವಿದ್ದರೂ ಪ್ರೇತ ಗಳ ಸಹವಾಸವನ್ನು ತಪ್ಪಿಸಿಕೊಳ್ಳುವುದು ಬಹಳ ಕಷ್ಟ. ಮಾಯೆಯ ಪರಿ ವಾರಕ್ಕೆ ಸೇರಿದ ಪಿಶಾಚಗಳಂತೂ ಎಲ್ಲೆಲ್ಲೂ ಹಾರಾಡುತ್ತಿರುತ್ತವೆ. ಪೂಜ್ಯ ಪಾದ ಗುರುಮಹಾರಾಜರ ಕುಟೀರದಲ್ಲೂ ಎಷ್ಟೋ ಬಾರಿ ಪ್ರೇತಗಳು ಪ್ರವೇಶಿ ಸಿದ್ದುದಿತ್ತು.

"ಭಗವಂತಾ, ನನ್ನನ್ನು ಪಿಶಾಚಗಳ ಕ್ರೂರ ದವಡೆಗೆ ಬಿಸುಟಬೇಡ. ಇಂದಿನಂಥ ದುಃಸ್ವಪ್ನ ಇನ್ನೆಂದೂ ನನಗೆ ಬೀಳದಿರಲಿ" ಎಂದು ಮನದಲ್ಲಿಯೇ ಪ್ರಾರ್ಥಿಸುತ್ತ ಆತ ಬೀದಿಯಲ್ಲಿ ಬರುತ್ತಿದ್ದ ಹಾಗೇ ಸಾವಿರಾರು ಜನ ನಾಗರಿಕರು ಗುಂಪುಗುಂಪಾಗಿ ಎತ್ತಲೋ ನಡೆದಿದ್ದುದು ಕಂಡುಬಂದಿತು.

"ಇವರೆಲ್ಲಾ ಎತ್ತ ಹೊರಟಿದ್ದಾರಯ್ಯಾ ?" ಎಂದು ಒಬ್ಬ ನಾಗರಿಕನನ್ನು ಆತ ವಿಚಾರಿಸಿದ.

"ಎಲಾ, ನಿನಗೆ ಗೊತ್ತಿಲ್ಲವೇ ?"

"ಇಲ್ಲ, ಏನು ನಡೆದಿದೆ ?"

"ನೀನು ನಮ್ಮ ನಗರದವನೆಂದು ಕಾಣುವುದಿಲ್ಲ. ಅರಮನೆಯ ಅಂಗಳದಲ್ಲಿ ಶಾಕುಂತಲ ನಾಟಕ ನಡೆಯುವುದಿದೆ. ನಾವೆಲ್ಲಾ ಅದನ್ನು ನೋಡುವುದಕ್ಕೆ ಹೊರಟಿದ್ದೇವೆ."

"ಶಾಕುಂತಲ ? ಯಾರು ಅಭಿನಯಿಸುತ್ತಾರೆ ?"

"ಮತ್ತ್ಯಾರು ? ಶಕುಂತಲೆಯ ಪಾತ್ರ ಅಭಿನಯಿಸುವವಳೆಂದರೆ ಒಬ್ಬಳೇ ಒಬ್ಬಳು ಈ ದೇಶದಲ್ಲಿ. ಅವಳೇ ಮುಕ್ತಾ....ಮುಕ್ತಾದೇವಿ...."

"ಮುಕ್ತಾದೇವಿ ?"

"ಹೌದು, ಹೌದು. ನೀನೆಂದೂ ಅವಳ ಅಭಿನಯವನ್ನು ನೋಡಿದಹಾಗೆ ಕಾಣುವುದಿಲ್ಲ. ಇಂಥ ಸುವರ್ಣಸಂಧಿಯನ್ನೇಕೆ ಕಳೆದುಕೊಳ್ಳುತ್ತೀಯೆ ? ನಡೆ ನನ್ನ ಜೊತೆಗೆ. ನೀನು ಜೀವಿಸಿದ್ದು ಸಾರ್ಥಕವಾದೀತು."

ನಾಟಕಾಭಿನಯ ಮುಗಿದ ತರುವಾಯ ಮುಕ್ತಾದೇವಿಯನ್ನು ಅಲ್ಲಿಯೇ ಸಂಧಿಸುವುದು ತನ್ನ ಕಾರ್ಯಕ್ರಮಕ್ಕೆ ಅನುಕೂಲವಾಗಬಹುದೆಂದು ಬಗೆದು ಸಿದ್ಧನಾಥ ಆ ಅಪರಿಚಿತನ ಜೊತೆಗೆ ಹೊರಟ.

## ೪

ಅರಮನೆಯ ವಿಶಾಲವಾದ ಅಂಗಳದಲ್ಲಿ ಎತ್ತರಿಸಿ ಸಿದ್ಧಗೊಳಿಸಿದ ರಂಗ ಮಂಚದ ಮೇಲೆ ಹೊಳೆಹೊಳೆಯುವ ಪರದೆಗಳು ತೂಗುಬಿದ್ದಿದ್ದುವು. ರಾಜ ಮನೆತನದವರಿಗಾಗಿ ಓಲಗಶಾಲೆಯ ಮೇಲ್ಭಾಗದಲ್ಲಿ ಆಸನಗಳನ್ನು ಹಾಕಿ ಸಜ್ಜುಗೊಳಿಸಲಾಗಿತ್ತು. ಮಂತ್ರಿಗಳು, ದಂಡನಾಯಕರು, ಇನ್ನಿತರ ಚಿಕ್ಕ ಪುಟ್ಟ ಅಧಿಕಾರಿಗಳಿಗಾಗಿ ಓಲಗಶಾಲೆಯ ಕೆಳಗೆ ಆಸನಗಳಿರಿಸಲ್ಪಟ್ಟಿದ್ದುವು. ಅಂಗಳದಲ್ಲಿ ಸ್ವಲ್ಪವೂ ಸ್ಥಳ ಉಳಿಯದಂತೆ ನಾಗರಿಕರು ಕಿಕ್ಕಿರಿದು ನೆರೆದಿದ್ದರು.

ಅಪರಿಚಿತ ನಾಗರಿಕನ ಜೊತೆಗೆ ಸಿದ್ಧನಾಥನೂ ಜನಜಂಗುಳಿಯಲ್ಲಿ ನುಗ್ಗಿ ರಂಗಮಂಚದ ಹತ್ತಿರದಲ್ಲಿಯೆ ಸ್ಥಳ ಹುಡುಕಿ ಕುಳಿತುಕೊಂಡ. ರಂಗಮಂಚ ಇನ್ನೂ ಬರಿಯದಾಗಿತ್ತು. ಪ್ರತಿಯೊಬ್ಬ ಪ್ರೇಕ್ಷಕನೂ ಉತ್ಸುಕತೆಯಿಂದ ರಂಗದೆಡೆಗೇ ದಿಟ್ಟಿಸುತ್ತಿದ್ದ.

ಸಿದ್ಧನಾಥ ಮನಸ್ಸಿನಲ್ಲಿಯೆ ಪರಮಾತ್ಮನನ್ನು ಧೇನಿಸುತ್ತ ಕುಳಿತಿದ್ದ. ಆದರೆ ಅವನ ಹತ್ತಿರವೇ ಕುಳಿತಿದ್ದ ಅಪರಿಚಿತ ನಾಗರಿಕ ಸುಮ್ಮನಿರದೆ ನಾಟಕ ಕಲೆಯ ಅವನತಿಯನ್ನು ಕುರಿತು ಚರ್ಚೆಗಾರಂಭಿಸಿದ.

"ಮೊದಲು ನಮ್ಮ ದೇಶದಲ್ಲಿ ದೇವರು ಧರ್ಮಗಳಿಗಿಂತ ಹೆಚ್ಚು ಮಹತ್ವ ಕಲೆಗಿತ್ತು. ರಾಜ ಮಹಾರಾಜರು ನಾಟಕ-ಸಂಗೀತಗಳನ್ನು ಉದಾರವಾಗಿ ಪ್ರೋತ್ಸಾಹಿಸುತ್ತಿದ್ದರು. ಅಭಿನೇತೃಗಳಿಗೆ ಬಹುಮಾನವೀಯುವ ರಸಿಕ ಶ್ರೀಮಂತರಿಗೂ ಕೊರತೆಯಿರಲಿಲ್ಲ. ಇತ್ತಿತ್ತಲಾಗಿ ಎಲ್ಲರೂ ಹಣ ಗಳಿಸುವ ಹುಚ್ಚಿಗೇ ಬಿದ್ದು ಕಲೆಗಳನ್ನು ಮರೆತುಬಿಟ್ಟಿದ್ದಾರೆ. ಮಹಾರಾಜರೂ ಅಷ್ಟೆ. ದೇಶಗಳನ್ನು ಗೆಲ್ಲುವ ಹುಚ್ಚಿನಲ್ಲಿ ಅವರಿಗೆ ಬೇರಾವುದೂ ಕಾಣುವುದಿಲ್ಲ. ಮೊದಲು ಹಬ್ಬ ಹುಣ್ಣಿವೆ ಬಂದಾಗಲೆಲ್ಲಾ ನಾಟಕ ಪ್ರದರ್ಶನಗಳಾಗುತ್ತಿದ್ದುವು. ಈಗ ವರ್ಷಕ್ಕೊಮ್ಮೆ ಒಂದು ನಾಟಕವಾದರೆ ಬಹಳವಾಯಿತು. ಛೆ, ಛೆ, ಮೊದಲಿನ ಸ್ವಾರಸ್ಯವುಳಿಯಲಿಲ್ಲ, ಉಳಿಯಲಿಲ್ಲ."

"ನೀನು ಹೇಳುವ ಸ್ವಾರಸ್ಯವಾದರೂ ಎಂಥಾದ್ದು ?" ಎಂದು ಸಿದ್ಧನಾಥ ಕೇಳಿದ.

"ಎಲಾ! ನೀನೇನೋ ಅರಸಿಕನಂತೆ ಮಾತಾಡುತ್ತೀಯಲ್ಲ! ಕಲೆಯ ಸ್ವಾರಸ್ಯವೇನೆಂಬುದು ನಿನಗೆ ತಿಳಿಯದೇ ? ಅದನ್ನೂ ವಿವರಿಸುವ ಅಗತ್ಯ ವಿದೆಯೇ ?"

"ಪರಮಾತ್ಮನ ಸೇವೆಯೆದುರಿಗೆ ಇನ್ನುಳಿದುದೆಲ್ಲಾ ತುಚ್ಛವೆಂದು ನಾನು ಭಾವಿಸುತ್ತೇನೆ."

"ಓಹ್ಹೊ ! ನೀನೊಬ್ಬ ಭಕ್ತಶಿರೋಮಣಿಯಿರಬೇಕು ಹಾಗಾದರೆ. ಯಾವ ಪಂಥಕ್ಕೆ ಸೇರಿದವನು ನೀನು ? ನಿನ್ನ ಉದ್ಯೋಗವಾದರೂ ಯಾವುದು? ನೀನು ಇಲ್ಲಿಯವನು ಹೌದೋ ಅಲ್ಲವೋ ?"

"ಪರಮಾತ್ಮನ ಸೇವಕರಿಗೆ ಎಲ್ಲ ಊರುಗಳೂ ತಮ್ಮ ಊರುಗಳೇ."

"ಸರಿ, ಸರಿ. ಗೊತ್ತಾಯಿತು. ನೀನೊಬ್ಬ ಸಂನ್ಯಾಸಿಯೋ ಏನು ?"

ಸಿದ್ಧನಾಥ ತನ್ನ ವೇಷವನ್ನು ನೋಡಿಕೊಂಡು ಸುಮ್ಮನಾದ. ರೇಶಿಮೆಯ ನಿಲುವಂಗಿ ಧರಿಸಿರುತ್ತ ತಾನು ಸಂನ್ಯಾಸಿಯೆಂದು ಹೇಳಿದರೆ ಯಾರೂ ನಂಬಲಾರರು.

"ನಿನಗೆ ನಾಟಕ ನೋಡುವ ಅಪೇಕ್ಷೆಯಾದರೂ ಇದೆಯೋ ಇಲ್ಲವೋ?"

ಆಗ ಮಾತ್ರ ಸಿದ್ಧನಾಥ ಸುಮ್ಮನಿರಲಾರದೆ ಹೇಳಿದ:

"ಇಲ್ಲ ಮಿತ್ರಾ, ಸ್ವಲ್ಪವೂ ಇಲ್ಲ. ಆದರೂ ದೇವರು ನನ್ನನ್ನು ಇಲ್ಲಿಗೆ ಕಳಿಸಿದ್ದಾನೆ."

"ದೇವರು ಕಳಿಸಿದನೇ !" ಎಂದು ನಗುನಗುತ್ತ ಪ್ರಶ್ನಿಸಿ ನಾಗರಿಕನೆಂದ: "ನಿನ್ನ ಸಂಗಡ ದೇವರೂ ಬಂದಿರಬಹುದಲ್ಲಾ ?"

"ಆ ದೇವಾಧಿದೇವನಿಲ್ಲದ ಸ್ಥಳವಾದರೂ ಎಲ್ಲಿದೆ ?"

"ನಿನ್ನನ್ನಿಲ್ಲಿಗೆ ಕಳಿಸುವುದರಲ್ಲಿ ಆತನ ಉದ್ದೇಶವೇನು ? ಮುಕ್ತಾ ದೇವಿಯ ಅಭಿನಯ ನೋಡುವ ಆಸೆಯೇನೋ ನಿನ್ನ ದೇವರಿಗೆ ?"

"ಈ ಅಭಿನಯವೆನ್ನುವುದು ನರಕದ ದಾರಿ. ಈ ನಟಿಯರೂ ವೇಶ್ಯೆಯರೂ ಸ್ವರ್ಗದ ಪರಮ ಶತ್ರುಗಳು. ಸ್ತ್ರೀಯರಿಂದ ದೊರೆಯುವ ಆನಂದಕ್ಕೆ ಮರುಳಾಗಿ ಜನರು ಸ್ವರ್ಗದಿಂದ ವಂಚಿತರಾಗುತ್ತಿದ್ದಾರೆ."

ಅಪರಿಚಿತನ ಮುಖ ಏಕೋ ಗಂಭೀರವಾಯಿತು. ಆತ ಹೇಳಿದ:

"ಸ್ವರ್ಗ ನರಕಗಳ ಮಾತಿರಲಿ. ಅವುಗಳ ವಿಚಾರ ನನಗೆ ತಿಳಿಯದು. ಆದರೆ ಸ್ತ್ರೀಯರಿಂದ ಆನಂದ ದೊರೆಯುತ್ತದೆಂದು ನೀನು ಹೇಳುವುದು ಮಾತ್ರ ಪೂರ್ಣ ಸತ್ಯವಲ್ಲವೆಂದು ನಾನು ಬಲ್ಲೆ. ಆನಂದದ ಬದಲು ದುಃಖ ಕಷ್ಟ ಚಿಂತೆಗಳೇ ದೊರೆಯುತ್ತವೆ ಸ್ತ್ರೀಯಿಂದ. ಪ್ರೇಮವೇ ನಮ್ಮೆಲ್ಲ ಮಹಾ ದುಃಖಗಳ ಮೂಲ ಕಾರಣ. ನಾನಿನ್ನೂ ಯುವಕನಾಗಿದ್ದಾಗ ಕಾಂಚೀ ಪಟ್ಟಣಕ್ಕೆ ಹೋಗಿದ್ದೆ. ಅಲ್ಲಿನ ಗಿಡವೊಂದರ ಕೆಳಗೆ ವಿರಮಿಸುತ್ತ ಕುಳಿತಿದ್ದಾಗ ಅದರ ಎಲೆಗಳಿಗೆಲ್ಲಾ ಛಿದ್ರಗಳಾಗಿದ್ದುದನ್ನು ಕಂಡು ವಿಸ್ಮಿತನಾಗಿ ಅದಕ್ಕೆ ಕಾರಣವೇನೆಂದು ವಿಚಾರಿಸಿದೆ. ಆಗ ಕಾಂಚೀಪುರವಾಸಿಗಳು ಹೇಳಿದ ಕಥೆ ಅತ್ಯಂತ ವಿಚಿತ್ರವಾದದ್ದು. ಆ ಪಟ್ಟಣದ ರಾಣಿ, ಸಮೀಪದ ಪಟ್ಟಣದ ರಾಜಕುಮಾರನನ್ನು ಪ್ರೀತಿಸುತ್ತಿದ್ದು ಅವನಿಗಾಗಿ ಈ ಗಿಡದ ಕೆಳಗೆ ಕಾದು ಕುಳಿತಿರುತ್ತಿದ್ದಳಂತೆ. ವಿರಹದಿಂದ ವ್ಯಥಿತಳಾಗಿ ವೇಳೆ ಕಳೆಯುವುದಕ್ಕಾಗಿ ಗಿಡವೆಲೆಗಳಲ್ಲಿ ತೂತು ಕೊರೆಯುತ್ತಿದ್ದಳಂತೆ. ಈ ರೀತಿಯಾಗಿ ಆ ಗಿಡದ ಎಲ್ಲಾ ಎಲೆಗಳಿಗೂ ತೂತುಬಿದ್ದುವು. ತನ್ನ ಪ್ರಿಯಕರನ ಸರ್ವಸ್ವವನ್ನು ನಾಶ ಮಾಡಿದ ಬಳಿಕ ಆ ಪತಿತ ಸ್ತ್ರೀ ತಾನೂ ನರಳಿ ನರಳಿ ಸತ್ತುಹೋದಳು. ನಾನು ಆ ಗಿಡದ ಒಂದು ಎಲೆಯನ್ನು ಹರಿದು ತಂದು ನನ್ನ ಕೋಣೆಯಲ್ಲಿ ಮಂಚದ ಕೆಳಗೆ ಇಟ್ಟುಕೊಂಡಿದ್ದೇನೆ. ಪ್ರೇಮದ ಭಯಂಕರತೆಯನ್ನು ಸದಾಕಾಲವೂ ನನ್ನ ನೆನಪಿಗೆ ತರುತ್ತದೆ ಆ ಎಲೆ...."

"ಪ್ರೇಮವೆಂದರೆ ಇಷ್ಟು ಜುಗುಪ್ಸೆಗೊಳ್ಳುವ ನೀನು ಅಂಥಾ ತುಚ್ಛ ಪ್ರೇಮದಿಂದಲೇ ತುಂಬಿರುವ ಈ ನಾಟಕ ನೋಡಲು ಇಷ್ಟು ಆತುರನಾಗಿರುವುದೇಕೆ ?"

"ಆಹಾ ! ಇದರ ಮಾತೇ ಬೇರೆ. ಇದು ನಾಟಕ............ಇದು ಕಲೆ........"

"ವಾಸ್ತವ ಜೀವನದ ಛಾಯೆಯೇ ಇರುವುದಲ್ಲವೇ ನಾಟಕವಲ್ಲಿ ? ನೀನು ಈಗ ತಾನೆ ಹೇಳಿದ ಕಾಂಚೀಪುರದ ರಾಣಿಯಂಥಾಕೆಯೆ ಶಾಕುಂತಲದಲ್ಲೂ ನಾಯಿಕೆ. ಅವಳನ್ನು ಪ್ರೀತಿಸುವುದಾಗಿ ನಟನೆ ಮಾಡಿ ಅವಳ ಸರ್ವಸ್ವವನ್ನು ನಾಶ ಮಾಡಿ ಅವಳನ್ನೂ ಅವಳ ಮಗುವನ್ನೂ ಕಾಡಿಗಟ್ಟಿದ ಆ ನರಾ

ಧಮ ದುಷ್ಯಂತ....ಋಷ್ಯಾಶ್ರಮದ ಪವಿತ್ರ ವಾತಾವರಣವನ್ನೂ ತನ್ನ ತುಚ್ಛ ಕಾಮಲಾಲಸೆಯಿಂದ ಹೊಲೆಗೆಡಿಸಿದ ಆ ಪರಮ ನೀಚ........ಇದು ನಾಟಕ ! ಇದು ಕಲೆ!....ಇದರಲ್ಲಿ ಎಂಥ ಸ್ವಾರಸ್ಯ ಕಾಣುವೆ ನೀನು ?"

"ಅದು ವರ್ಣನೆಗೆ ನಿಲುಕುವ ಮಾತಲ್ಲ. ಅದನ್ನು ಯಾರೂ ವಿವರಿಸಿ ಹೇಳಲಾರರು."

"ನಾನು ಹೇಳಲೇ? ನೀವೆಲ್ಲಾ ಶುದ್ಧ ಡಾಂಭಿಕರು. ಒಂದು ಉಸುರಿನಲ್ಲಿ ಸ್ತ್ರೀಯರನ್ನು ದೂಷಿಸುತ್ತೀರಿ, ಪ್ರೇಮವನ್ನು ಹಳಿಯುತ್ತೀರಿ. ಮತ್ತೊಂದು ಉಸುರಿನಲ್ಲಿ ಅದೇ ಪ್ರೇಮವನ್ನು ಪ್ರಶಂಸಿಸುತ್ತೀರಿ, ಅದೇ ಸ್ತ್ರೀಯರನ್ನು ತಲೆಯ ಮೇಲೆ ಹೊತ್ತು ಕುಣಿಯುತ್ತೀರಿ. ನಿಮ್ಮ ಒಂದು ಉಸುರಿಗೆ ಜೀವನವೆನ್ನುತ್ತಾರೆ, ಇನ್ನೊಂದು ಉಸುರಿಗೆ ಕಲೆಯೆನ್ನುತ್ತಾರೆ...."

"ನಿನ್ನ ತಿಳಿವಳಿಕೆ ಪೂರಾ ತಪ್ಪು. ಜೀವನದಿಂದ ದೊರೆಯುವ ಆನಂದಕ್ಕಿಂತ ಕಲೆಯಿಂದ ದೊರೆಯುವ ಆನಂದ ಭಿನ್ನ ರೀತಿಯದು. ಕಲೆ ನಮ್ಮನ್ನು ಯೋಚನೆಗಳಿಗೆ ತೊಡಗಿಸುತ್ತದೆ, ನಮ್ಮ ಮನಸ್ಸನ್ನು ಎತ್ತರಕ್ಕೊಯ್ಯುತ್ತದೆ. "

"ಆ ಎತ್ತರದ ಅರ್ಥವಾದರೂ ಏನು ನಿಮ್ಮ ದೃಷ್ಟಿಯಲ್ಲಿ ?"

"ಅದನ್ನು ನಾನು ಹೇಳಲಾರೆ, ಇಷ್ಟು ಮಾತ್ರ ನಿಜ. ಚಿಂತನೆಯಲ್ಲಿ ನನಗೆ ಮನಃಶಾಂತಿ ದೊರೆಯುತ್ತದೆ. ಅಷ್ಟೇ ಸಾಕು ನನಗೆ."

"ಸತ್ಯವನ್ನು ಕುರಿತು ಚಿಂತಿಸು. ಪರಮಾತ್ಮನ ಸೇವೆಯ ವ್ರತ ಸ್ವೀಕರಿಸು. ಆಗ ನಿಜವಾದ ಆನಂದ ದೊರೆಯುವುದು." ಎಂದು ಸಿದ್ಧನಾಥ ಹೇಳುತ್ತಿದ್ದ ಹಾಗೆಯೆ ರಂಗಮಂಚದ ಮೇಲೆ ಚಟುವಟಿಕೆಗಳಿಗಾರಂಭವಾಯಿತು. ಸೂತ್ರಧಾರ ಬಂದು ನಿಂತು ನಾಂದೀಪದ್ಯ ಹೇಳತೊಡಗಿದ. ಪ್ರೇಕ್ಷಕರೆಲ್ಲರೂ ಆ ಕಡೆಗೇ ಕತ್ತು ತಿರುಗಿಸಿ ನಟಿಯ ಆಗಮನವನ್ನೇ ಎದುರು ನೋಡತೊಡಗಿದರು. ನಟಿ ಪ್ರವೇಶಿಸುತ್ತಲೂ ಅವಳ ಮೇಲೆ ಪುಷ್ಪವೃಷ್ಟಿಯಾಯಿತು. ಪ್ರೇಕ್ಷಕರ ಸಮೂಹದಿಂದ ಹರ್ಷಚೀತ್ಕಾರಗಳು ಕೇಳಬಂದುವು.

"ಎಲಾ ಮೂರ್ಖ ಮಾನವರೇ ! ಹೆಣ್ಣು ಕಾಣಿಸಿದರಾಯಿತು, ಹೇಗೆ ಹುಚ್ಚರಂತೆ ವರ್ತಿಸುತ್ತಾರೆ !" ಎಂದು ಮನಸ್ಸಿನಲ್ಲಿಯೇ ಹೇಳಿಕೊಂಡು ಸಿದನಾಥ ಕಣ್ಣುಮುಚ್ಚಿ ಪರಮಾತ್ಮನನ್ನೆ ಧ್ಯಾನಿಸತೊಡಗಿದ.

ಮೊದಲ ಅಂಕಕ್ಕಾರಂಭವಾಯಿತು. ಬಿಲ್ಲಿಗೆ ಬಾಣ ಹೂಡಿದ ದುಷ್ಯಂತ ರಾಜ ಸಾರಥಿಯೊಡನೆ ಪ್ರವೇಶಿಸಿದ. ಅನಸೂಯಾ ಪ್ರಿಯಂವದೆ ಶಕುಂತಲೆಯರ ಆಗಮನವೂ ಆಯಿತು. ಶಕುಂತಲೆಯ ವೇಷದಲ್ಲಿ ಮುಕ್ತಾದೇವಿಯನ್ನು ಕಂಡೊಡನೆಯೆ ಮತ್ತೊಮ್ಮೆ ಪ್ರೇಕ್ಷಕರ ನೆರವಿನಿಂದ ಹರ್ಷಧ್ವನಿ ಕೇಳಬಂದಿತು. ರಂಗದ ಸಮೀಪದಲ್ಲಿಯೆ ಕುಳಿತಿದ್ದ ರಸಿಕರು ಕೆಲವರು ಮೇಲೆದ್ದು ನಿಂತು ಅವಳ ಮೇಲೆ ಹೂವುಗಳನ್ನೆರಚಿ ತಮ್ಮ ಪ್ರೇಮವನ್ನು ಪ್ರದರ್ಶಿಸಿದರು. ಹತ್ತು ವರ್ಷಗಳ ತರುವಾಯ ಮೊದಲಬಾರಿ ಸಿದ್ಧನಾಥನೂ ಅವಳನ್ನು ನೋಡುತ್ತಿದ್ದ. ಮುಕ್ತಾದೇವಿಯ ರೂಪಿನಲ್ಲಿ ಕೊಂಚವೂ ಬದಲಾವಣೆಯಾದಂತೆ ಕಾಣುತ್ತಿರಲಿಲ್ಲ. ಅದೇ ನೀಳವಾದ ದೇಹಾಕೃತಿ, ಅದೇ ಭಾವಭಂಗಿ, ಅದೇ ಮೋಹಕ ನಗು....ಎಲ್ಲವೂ ಅದೇ....

ರಂಗದ ಮೇಲೆ ನಾಟಕ ಮುಂದುವರಿಯುತ್ತಿತ್ತು. ತನ್ನ ಕುಪ್ಪುಸ ಬಿಗಿಯಾಯಿತೆಂದು ಶಕುಂತಲೆ ಗೊಣಗುಟ್ಟಿದಾಗ "ನಿನ್ನ ಪಯೋಧರಗಳು ವಿಸ್ತೃತವಾಗಲು ನಿನ್ನ ಯೌವನವೇ ಕಾರಣವಲ್ಲದೆ ಇನ್ನೇನೂ ಅಲ್ಲ." ಎಂದು ಪ್ರಿಯಂವದೆ ಹೇಳುವಳು. ದುಷ್ಯಂತ ಗಿಡದ ಮರೆಯಲ್ಲಿ ನಿಂತು ಶಕುಂತಲೆಯನ್ನು ತಿಂದುಬಿಡುವಂತೆ ನೋಡುತ್ತಾ ಹೇಳುವನು:

"ಸರಸಿಜಮನುವಿದ್ಧಂ ಶೈವಲೇನಾಪಿ ರಮ್ಯಂ
ಮಲಿನಮಪಿ ಹಿಮಾಂಶೋರ್ಲಕ್ಷ್ಮ ಲಕ್ಷ್ಮೀಂ ತನೋತಿ
ಇಯಮಧಿಕಮನೋಜ್ಞಾ ವಲ್ಕಲೇನಾಪಿ ತನ್ವೀ
ಕಿಮಿವ ಹಿ ಮಧುರಾಣಾಂ ಮಂಡನಂ ನಾಕೃತೀನಾಂ"

ಸಿದ್ಧನಾಥ ಪರಮಾತ್ಮನ ಧ್ಯಾನದಲ್ಲಿಯೆ ಮಗ್ನನಾಗಿದ್ದರೂ ಈ ಶ್ಲೋಕ ಅವನ ಚಿತ್ತವನ್ನು ಕದಡದಿರಲಿಲ್ಲ. ಆ ಶೃಂಗಾರರಸಭರಿತ ನಾಟಕವನ್ನು ನೋಡುತ್ತಾ ತಾನು ಅಲ್ಲಿ ಕುಳಿತಿರುವುದು ಸೂಕ್ತವಲ್ಲವೆಂದೂ ಅವನಿಗನ್ನಿಸಿತು. ಪ್ರೇಕ್ಷಕರಾರಿಗೂ ಗೊತ್ತಾಗದಂತೆ ಅಲ್ಲಿಂದೆದ್ದು ಹೋಗುವ ಬಗೆಯನ್ನು ಕುರಿತು ಆತ ಚಿಂತಿಸತೊಡಗಿದ. ದೃಷ್ಟಿ ಹರಿಸಿದಷ್ಟು ದೂರದ ವರೆಗೂ ಜನಸಂದಣಿ ಸಾಗರದಂತೆ ಹಬ್ಬಿತ್ತು. ನಾಟಕ ನಡೆಯುತ್ತಿರುವ ಸಮಯದಲ್ಲಿ ತಾನು ಎದ್ದು ಹೊರಟರೆ ಹಾದಿ ಸಿಕ್ಕುವುದೂ ದುಸ್ತರವೇ. ಹೀಗಾಗಬಹುದೆಂದು

ಮೊದಲೇ ಊಹಿಸಿ ದೂರದಲ್ಲಿಯೆ ಇದ್ದುಬಿಟ್ಟದ್ದರೊಳ್ಳೆಯದಾಗುತ್ತಿತ್ತು. ಇನ್ನೇನು ಮಾಡುವುದು ? ನಾಟಕಾಂತ್ಯದ ವರೆಗೂ ಇಲ್ಲಿಯೆ ಕುಳ್ಳಿರದೆ ಬೇರೆ ಉಪಾಯವಿರಲಿಲ್ಲ. ಸಿದ್ಧನಾಥ ಅತ್ಯಂತ ಕಷ್ಟದಿಂದ ಮನಸ್ಸನ್ನು ಬಿಗಿ ಹಿಡಿದು ಅಂತರ್ದೃಷ್ಟಿಯೆದುರು ಗೌರೀಶಂಕರನಮೂರ್ತಿಯನ್ನು ಕಲ್ಪಿಸಿಕೊಂಡು ಸಮಾಧಿಸ್ಥನಾಗಲು ಯತ್ನಿಸತೊಡಗಿದ.

ಆತ ಮತ್ತೆ ಕಣ್ತೆರೆದಾಗ ರಂಗಮಂಟಪದ ಮೇಲೆ ದುಃಖಪೂರಿತ ಮುಖ ಮುದ್ರೆಯಿಂದ ನಿಂತ ಮುಕ್ತಾ ಕಾಣಿಸಿದಳು. ಯಾವ ಅಂಕ ನಡೆದಿದ್ದಿತೆಂಬುದೂ ಸಿದ್ಧನಾಥನಿಗೆ ತಿಳಿಯಲಿಲ್ಲ.

"ಆಹಾ ! ಎಂಥ ಅಭಿನಯ ! ಏನು ಕೌಶಲ್ಯ ! ಭಾವಗಳ ಏರಿಳಿತ ಗಳಿಗೆ ಸರಿಯಾಗಿ ಬದಲಾಗುವ ಇವಳ ಮುಖವೊ ! ಮುಕ್ತಾದೇವಿಯೆಂದರೆ ಅಭಿನಯ ಸಾಮ್ರಾಜ್ಞಿ " ಎಂದು ಜನ ಆಕೆಯನ್ನು ಪ್ರಶಂಸಿಸುತ್ತಿದ್ದರು.

"ಈ ಅಭಿನಯ ಸಾಮ್ರಾಜ್ಞಿ ಇನ್ನು ಕೆಲವೇ ದಿನಗಳಲ್ಲಿ ವೀರ ವಿರಾಗಿಣಿ ಯಾಗುವಳು " ಎಂದು ಮನಸ್ಸಿನಲ್ಲಿಯೇ ಹೇಳಿಕೊಂಡು ಪ್ರಸನ್ನನಾದ ಸಿದ್ಧ ನಾಥ.

ನಾಟಕಾಂತ್ಯ ಸಮೀಪಿಸುತ್ತಿತ್ತು. ದುಷ್ಯಂತ ಶಕುಂತಲೆಯರ ಪುನ ರ್ಮಿಲನದ ದೃಶ್ಯ ನಡೆದಿರುವಾಗಲೇ ಪ್ರೇಕ್ಷಕರು ಎದ್ದು ನಿಂತರು. ಮುಕ್ತಾ ಯದ ವೇಳೆಗೆ ಜನಸಂದಣಿಯಲ್ಲಿ ನೂಕುನುಗ್ಗಲಿಗಾರಂಭವಾಯಿತು. ಸಿದ್ಧ ನಾಥನೂ ಆ ಗದ್ದಲದಲ್ಲಿ ಸಿಲುಕಿಕೊಂಡು ರಂಗಸ್ಥಳದಿಂದ ದೂರ ದೂರ ಹೋದವನು ಮತ್ತೆ ಹೊರಳಿ ಮುಕ್ತಾದೇವಿಯ ಸಮೀಪದಲ್ಲಿ ಬರಲು ಸಾಧ್ಯ ವಾಗಲಿಲ್ಲ. ಅವಳನ್ನು ಅವಳ ಮಂದಿರದಲ್ಲಿಯೆ ಭೆಟ್ಟಿಯಾಗುವುದೆಂದು ನಿರ್ಧ ರಿಸಿ ಆತ ಅತ್ತ ನಡೆದ.

ನಗರದ ಒಂದು ಕೊನೆಯಲ್ಲಿ ಜನನಿಬಿಡವಾದ ತಾಣದಲ್ಲಿ ಧನಿಕರೂ ರಾಜ್ಯಾಧಿಕಾರಿಗಳೂ ವಾಸಿಸುತ್ತಿದ್ದ ವಿಭಾಗದಲ್ಲಿ ಮುಕ್ತಾದೇವಿಯ ಮನೆ ಯಿತ್ತು. ಸುತ್ತಲೂ ವಿಸ್ತಾರವಾದ ಉದ್ಯಾನವನ. ಆ ಉದ್ಯಾನದಲ್ಲಿ ಕೃತ್ರಿಮ ಗುಡ್ಡಗಳನ್ನೂ ಹಳ್ಳಗಳನ್ನೂ ಕೆರೆಗಳನ್ನೂ ನಿರ್ಮಿಸಲಾಗಿತ್ತು. ಬಗೆಬಗೆಯ ಗಿಡ ಮರಗಳೂ ಬಳ್ಳಿಗಳೂ ಹೂ ಕಾಯಿ ಹಣ್ಣುಗಳಿಂದ ತುಂಬಿ ಶೋಭಿಸುತ್ತಿದ್ದುವು. ಕಾರಂಜಿಯಿಂದೊಡಗೂಡಿದ ಅತ್ಯಂತ ಮನೋಹರವಾದುದೊಂದು ಕುಂಜ

ವನವೂ ಅಲ್ಲಿತ್ತು. ಬೇಸಗೆಯ ರಾತ್ರಿಗಳಲ್ಲಿ ಮುಕ್ತಾದೇವಿ ಆ ಕುಂಜವನದಲ್ಲಿಯೆ ಮಲಗಿಕೊಳ್ಳುವ ವಾಡಿಕೆಯಿತ್ತು.

ಸಿದ್ಧನಾಥ ಅಲ್ಲಿಗೆ ಬಂದು ಸೇವಕನೊಬ್ಬನನ್ನು ಕೇಳಿದ:

"ಮುಕ್ತಾದೇವಿ ನಾಟಕದಿಂದ ಬಂದಳೇ ?"

"ಆಗಲೇ ಬಂದಳಲ್ಲ."

"ನಾನು ಆಕೆಯನ್ನು ನೋಡಬೇಕಾಗಿದೆ."

"ಕುಂಜವನದಲ್ಲಿ ಆಯಾಸ ಪರಿಹರಿಸಿಕೊಳ್ಳುತ್ತಿದ್ದಾಳೆ. ಬನ್ನಿ. ಅಲ್ಲಿಗೇ ನಿಮ್ಮನ್ನು ಕರೆದೊಯ್ಯುತ್ತೇನೆ."

೫

ತನ್ನ ರೂಪ ಲಾವಣ್ಯಗಳಿಂದಲೂ ಕಲಾವಂತಿಕೆಯಿಂದಲೂ ರಾಜ್ಯದಲ್ಲೆಲ್ಲ ಜನಪ್ರಿಯತೆ ಪಡೆದ, ಸಾಕಷ್ಟು ಸಂಪತ್ತನ್ನು ಗಳಿಸಿ ವೈಭವಪೂರಿತವಾದ ವಿಲಾಸಜೀವನ ನಡಸುತ್ತಿದ್ದ ಮುಕ್ತಾದೇವಿ ಬಾಲ್ಯದಲ್ಲಿ ತುಂಬಾ ಕಷ್ಟಪಟ್ಟಿದ್ದಳು. ಅವಳ ತಂದೆ ಚಿಕ್ಕದೊಂದು ಭೋಜನಾಲಯವನ್ನು ನಡಸುತ್ತ ಅದರಿಂದ ಬಂದುದರಲ್ಲಿಯೇ ಚರಿತಾರ್ಥ ಸಾಗಿಸುತ್ತಿದ್ದ. ಚಿಕ್ಕ ವಯಸ್ಸಿನ ಅನೇಕ ನೆನಪುಗಳು ಮುಕ್ತಾದೇವಿಯ ಮೆದುಳಿನಲ್ಲಿ ಈಗಲೂ ಸುರಕ್ಷಿತವಾಗಿದ್ದುವು. ಆವಳ ತಂದೆ ಗಂಭೀರ ಸ್ವಭಾವದ ಭಾರಿ ದೇಹಾಕೃತಿಯ ಆಸಾಮಿ. ಅವನನ್ನು ಕಂಡರೆ ಯಾರಿಗಾದರೂ ಕೊಂಚ ಭಯವೇ ಆನಿಸುತ್ತಿತ್ತು. ಒಲೆಯ ಬಳಿಯಲ್ಲಿ, ಕಾಲ ಮೇಲೆ ಕಾಲು ಹಾಕಿಕೊಂಡು ಕುಳಿತು ಗಿರಾಕಿಗಳಿಗಾಗಿ ಆಹಾರ ಪದಾರ್ಥಗಳನ್ನು ತಯಾರಿಸುವ ತಂದೆಯ ರೂಪು ಈಗಲೂ ಅವಳ ಸ್ಮೃತಿಪಟಲದ ಮೇಲೆ ಅಚ್ಚಳಿಯದಂತಿತ್ತು.

ದುರ್ಬಲ ದೇಹದ, ಉದಾಸಮುದ್ರೆಯ ತನ್ನ ತಾಯಿಯ ನೆನಪೂ ಅವಳಿಗಿತ್ತು. ಹಸಿದ ಬೆಕ್ಕಿನಂತೆ ಮನೆಯಲ್ಲೆಲ್ಲ ತಿರುಗುತ್ತಿದ್ದಳಾಕೆ. ಅವಳ ತೀಕ್ಷ್ಣ ಸ್ವರವೂ ಉದ್ದೀಪಕ ದೃಷ್ಟಿಯೂ ಎಂದೆಂದೂ ಮರೆಯಲಾರದಂಥವು. ದಾರಿದ್ರ್ಯದಲ್ಲಿಯೆ ಬೆಳೆದು ಬಾಳುತ್ತಿದ್ದುದರಿಂದಲೋ ಏನೋ, ಆಕೆಗೆ ಹಣವೆಂದರೆ ಅಪಾರ ಆಸೆಯಿತ್ತು. ಪ್ರತಿದಿನವೂ ಭೋಜನಾಲಯದ ಬಾಗಿಲು ಮುಚ್ಚಿದ ಬಳಿಕ ಅಂದು ಪ್ರಾಪ್ತವಾದ ಹಣವನ್ನೆಣಿಸುತ್ತ ಮಧ್ಯರಾತ್ರಿಯ ವರೆಗೂ ಆಕೆ ಕುಳಿತಿರುತ್ತಿದ್ದುದಿತ್ತು. ಸೋಮಾರಿಯಾದ ತಂದೆ; ಜಿಪುಣಳಾದ ತಾಯಿ. ಯಾವ ನಿಯಮ ನಿರ್ಬಂಧಗಳೂ ಇಲ್ಲದೆ ಸ್ವೇಚ್ಛೆಯಿಂದ ಬೆಳೆದಳು ಮುಕ್ತಾ. ಊಟ ಮುಗಿಸಿ ಸುರಾಪಾನ ಮಾಡಿ ಮೈಮರೆತ ಪ್ರವಾಸಿಕರ ಸೊಂಟದಿಂದ ಹಣವನ್ನು ಹಾರಿಸುವುದರಲ್ಲೂ, ತನಗೂ ಅರ್ಥವಾಗದ ಆಶ್ಲೀಲ ಹಾಡುಗಳಿಂದ ಅವರನ್ನು ರಂಜಿಸುವುದರಲ್ಲೂ ಅವಳು ನಿಪುಣಳಾದಳು. ಹಾಗೆ ಆಚರಿಸುವುದು ಸರಿಯಲ್ಲವೆಂದು ಯಾರೂ ಅವಳಿಗೆ ಹೇಳಲಿಲ್ಲ. ಪ್ರವಾಸಿಕರ ಹಣ

ಕದ್ದು ಅವಳು ಹೊರಕ್ಕೋಡಿ ಹೋಗಿ ಬೀದಿಯ ಮೇಲಿದ್ದ ಒಬ್ಬ ಮುದುಕಿಯ ಅಂಗಡಿಯಲ್ಲಿ ಮಿಠಾಯಿ ಕೊಂಡು ತಿನ್ನುವಳು. ದಿನವೂ ಅದೇ ಕ್ರಮ ನಡೆಯುವುದು. ಪ್ರವಾಸಿಕರು ಊಟ ಮಾಡುತ್ತಿದ್ದ ಹಾಗೇ ತಮ್ಮ ಪ್ರವಾಸ ಕಾಲದಲ್ಲಿ ನಡೆದ ಗಂಡಾಂತರಕಾರಿ ಘಟನೆಗಳನ್ನು ಕಥೆ ಮಾಡಿ ಹೇಳುವರು. ಅವುಗಳನ್ನಾಲಿಸುತ್ತಿದ್ದ ಹಾಗೇ ಮುಕ್ತಾಗೆ ನಿದ್ದೆ ಬರುವುದು.

ಬಾಲ್ಯದಲ್ಲಿ ಅವಳು ಕಂಡ ಒಬ್ಬನೇ ಒಬ್ಬ ಸಭ್ಯ ಗೃಹಸ್ಥನೆಂದರೆ ಕಾಪಾಲಿ. ಅವರ ಭೋಜನಾಲಯದಲ್ಲಿ ಕೆಲಸಕ್ಕಿದ್ದ ಕಾಪಾಲಿ ಮುಕ್ತಾದೇವಿಯನ್ನು ತನ್ನ ಪ್ರಾಣಕ್ಕೂ ಹೆಚ್ಚಾಗಿ ಪ್ರೀತಿಸುತ್ತಿದ್ದ. ಕೆಲಸ ಮುಗಿದ ಬಳಿಕ ಆ ಬಾಲೆಯನ್ನು ತನ್ನ ತೊಡೆಯ ಮೇಲೆ ಕೂಡಿಸಿಕೊಂಡು ಪುರಾಣ ಕಾಲದ ರಾಜ-ರಾಣಿಯರ ಕಥೆಗಳನ್ನಾತ ಹೇಳುತ್ತಿದ್ದ. ರಾಜಕುಮಾರಿಯರ ಪ್ರೇಮ ಸಂಪಾದನೆ ಮಾಡಿ ಅವರನ್ನು ಮದುವೆಯಾಗುತ್ತಿದ್ದ ಕುಶಾಗ್ರಬುದ್ಧಿಯ ಕಳ್ಳರ ಚರಿತ್ರೆಗಳನ್ನು ಆತ ರಸವತ್ತಾಗಿ ಬಣ್ಣಿಸುತ್ತಿದ್ದ. ಪುಟ್ಟ ಬಾಲೆ ಮುಕ್ತಾ ಕಾಪಾಲಿಯನ್ನು ಬಹಳವಾಗಿ ಮೆಚ್ಚಿಕೊಂಡಿದ್ದಳು. ತಂದೆ ತಾಯಂದಿರ ಪ್ರೀತಿಯಿಂದ ವಂಚಿತಳಾಗಿದ್ದ ಆ ಬಾಲಿಕೆಗೆ ಕಾಪಾಲಿಯೇ ತಂದೆ ತಾಯಿ ಅಣ್ಣ ತಮ್ಮ ಎಲ್ಲವೂ ಆಗಿದ್ದ. ಸಾಮಾನುಗಳನ್ನು ಹೊತ್ತುಕೊಂಡು ಬರಲೆಂದು ಆತ ಪೇಟೆಗೆ ಹೋದಾಗಲೆಲ್ಲ ಮುಕ್ತಾ ಅವನನ್ನು ಹಿಂಬಾಲಿಸಿಕೊಂಡು ಹೋಗುವಳು. ಅವನ ಕೆಲಸದಲ್ಲಿ ನೆರವಾಗುವಳು. ರಾತ್ರೆ ನಿದ್ದೆಯನ್ನು ಮರೆತು, ಮುಕ್ತಾದೇವಿಗಾಗಿ ಆಟಿಗೆಗಳನ್ನು ತಯಾರಿಸುತ್ತಿದ್ದ ಕಾಪಾಲಿ.

ಅವಳ ತಂದೆ ಕಾಪಾಲಿಯನ್ನು ಸರಿಯಾದ ರೀತಿಯಲ್ಲಿ ನಡಸಿಕೊಳ್ಳುತ್ತಿರಲಿಲ್ಲ. ಆತನ ಚಿಕ್ಕ ಪುಟ್ಟ ತಪ್ಪುಗಳಿಗೂ ಕೂಡಾ ಘೋರವಾದ ಶಿಕ್ಷೆಯೊದಗುತ್ತಿತ್ತು. ಕೈಗೆ ಸಿಕ್ಕಿದ ವಸ್ತುವನ್ನು ಎತ್ತಿಕೊಂಡು ಕಾಪಾಲಿಯ ಕಡೆ ಎಸೆಯುವುದು ಮುಕ್ತಾದೇವಿಯ ತಂದೆಯದೊಂದು ಚಟವೇ ಆಗಿದ್ದಿತೆಂದೂ ಹೇಳಬಹುದು. ಒಂದು ಬಾರಿ ಆತ ಹರಿತವಾದುದೊಂದು ಚೂರಿಯನ್ನೇ ಎಸೆದುದರ ಪರಿಣಾಮವಾಗಿ ಕಾಪಾಲಿಯ ಕಿವಿಯೊಂದು ಕೊಯ್ದು ಹೋಗಿತ್ತು. ಮುಖದ ಮೇಲೂ ಎಷ್ಟೋ ಹೊಡೆತ ಬಿದ್ದಿದ್ದುವು. ಈ ಅತ್ಯಾಚಾರವನ್ನೆಲ್ಲ ಸಹಿಸಿಕೊಂಡು ಕಾಪಾಲಿ ಅಲ್ಲಿಯೇ ಇದ್ದುಬಿಟ್ಟಿದ್ದ. ಅವನ ಮುಖದ ಮೇಲಿನ ಕಾಂತಿಯೂ ಪ್ರಸನ್ನತೆಯೂ ಎಂಥ ಸಂದರ್ಭದಲ್ಲೂ ಮಾಯವಾಗುತ್ತಿರಲಿಲ್ಲ.

"ನಿನ್ನ ಸ್ವಭಾವ ಇಷ್ಟು ಶಾಂತವಾಗಲು ಕಾರಣವೇನು ಕಾಪಾಲಿ ?" ಎಂದು ಯಾರೋ ಒಬ್ಬರು ಅವನನ್ನು ಕೇಳಿದಾಗ ಆತ ಮುಗುಳ್ನಗುತ್ತಾ ಹೇಳಿದ್ದ:

"ಪರಮಾತ್ಮನ ಕೃಪೆಯಿದ್ದರೆ ನಿನಗೂ ಶಾಂತಿ ಸಿಕ್ಕೀತು ತಮ್ಮಾ."

ಕಾಪಾಲಿಯ ಸರಳ ನಡವಳಿಕೆಯನ್ನು ಕಂಡರೆ ಎಂಥವರಿಗಾದರೂ ಅವನ ಬಗೆಗೆ ಮೆಚ್ಚುಗೆಯೆನಿಸುತ್ತಿತ್ತು. ಮುಕ್ತಾದೇವಿಯ ತಂದೆಗೆ ಮಾತ್ರ ಅವನನ್ನು ಕಂಡರಾಗುತ್ತಿರಲಿಲ್ಲ. ಅದಕ್ಕೇನು ಕಾರಣವಿರಬಹುದೋ ಎಂದು ಮುಕ್ತಾ ಅನೇಕ ಬಾರಿ ಯೋಚಿಸಿದ್ದರೂ ಸಮರ್ಪಕವಾದ ಕಾರಣ ಹೊಳೆದಿರಲಿಲ್ಲ.

ತನ್ನ ಕೆಲಸದಲ್ಲಿ ನಿರತನಾಗಿದ್ದ ಹಾಗೇ ಕಾಪಾಲಿ ಕರ್ಕಶ ಸ್ವರದಲ್ಲಿ ಭಜನೆ ಮಾಡುತ್ತಿದ್ದುದಿತ್ತು. ಆಗ ಮುಕ್ತಾದೇವಿಗೆ ಆ ಭಜನೆಯ ಅರ್ಥ ತಿಳಿಯುತ್ತಿರಲಿಲ್ಲ. ಅವನ ಧ್ವನಿ ಕಿವಿಗೆ ಬೀಳುತ್ತಲೂ ಅವಳಿಗೊಂದು ಬಗೆಯ ಭೀತಿಯೂ ಉಂಟಾಗುತ್ತಿತ್ತು. ರಾತ್ರಿ ಕನಸಿನಲ್ಲೂ ಅವಳಿಗೆ ಆ ಕರ್ಕಶ ಸ್ವರವೇ ಕೇಳಿಸಿದ ಹಾಗಾಗುತ್ತಿತ್ತು.

ಕಾಪಾಲಿ ಶೈವಪಂಥೀಯನಾಗಿದ್ದ. ಅವನಿಗೆ ದೀಕ್ಷೆಯೂ ಆಗಿದ್ದಿತಂತೆ. ಶೈವಪಂಥೀಯರ ಉತ್ಸವಗಳಲ್ಲೂ ಆತ ಭಾಗ ವಹಿಸುತ್ತಿದ್ದುದಿತ್ತು. ಇರುಳಿನಲ್ಲಿ ಯಾರಿಗೂ ಗೊತ್ತಾಗದಂತೆ ಆತ ಆ ಉತ್ಸವಗಳಿಗೆ ಹೋಗುತ್ತಿದ್ದ.

ಅದು ಶೈವಧರ್ಮದ ಪರೀಕ್ಷಾಕಾಲವಾಗಿತ್ತು. ಚಕ್ರವರ್ತಿಯ ಆಜ್ಞೆಯಂತೆ ಶೈವಪಂಥೀಯರ ದೇವಾಲಯಗಳನ್ನೆಲ್ಲ ನಾಶಗೊಳಿಸಲಾಗಿತ್ತು, ಅವರ ಧರ್ಮಗ್ರಂಥಗಳನ್ನು ಸುಟ್ಟು ಹಾಕಲಾಗಿತ್ತು. ಅವರ ಉತ್ಸವಗಳಿಗೂ ಭಜನಾಕೂಟಗಳಿಗೂ ನಿರ್ಬಂಧವಿಧಿಸಲಾಗಿತ್ತು. ಚಕ್ರವರ್ತಿಯ ರಾಜ್ಯದಲ್ಲಿ ಶೈವರಿಗೆ ಕೊಂಚವೂ ಮರ್ಯಾದೆಯುಳಿದಿರಲಿಲ್ಲ. ನಿರ್ಬಂಧಕಾಜ್ಞೆಗಳನ್ನು ಮುರಿದವರನ್ನು ಕ್ರೂರವಾದ ರೀತಿಯಲ್ಲಿ ದಂಡಿಸಲಾಗುತ್ತಿತ್ತು. ಶಿವಭಜನೆ ಮಾಡಿದ ಅಪರಾಧಕ್ಕಾಗಿ ಅನೇಕರು ಪ್ರಾಣ ಕಳೆದುಕೊಂಡಿದ್ದರು. ಜನರಿಗೆ ದೀಕ್ಷೆ ಕೊಟ್ಟ ತಪ್ಪಿಗಾಗಿ ಧರ್ಮಗುರುಗಳನೇಕರನ್ನು ಶೂಲಕ್ಕೇರಿಸಲಾಗಿತ್ತು. ರಾಜ್ಯದ ಕೋಟೆಗಳಲ್ಲಿದ್ದ ಸೆರೆಮನೆಗಳು ಶೈವಪಂಥೀಯರಿಂದ ತುಂಬಿಹೋಗಿದ್ದುವು.

ಅದೇ ಸಮಯದಲ್ಲಿ ಪೂಜ್ಯಪಾದ ಮಹಾಗುರು ತನ್ನ ತಪೋಭೂಮಿಯನ್ನು ತ್ಯಜಿಸಿ ಧರ್ಮಬಾಂಧವರ ರಕ್ಷಣೆಗೆಂದು ಕಲ್ಯಾಣನಗರಕ್ಕೆ ಬಂದಿಳಿದ. ಆತ ಬೀದಿಬೀದಿಗಳನ್ನು ಸುತ್ತಿ ಶೈವಪಂಥೀಯರನ್ನೆಲ್ಲ ರಹಸ್ಯವಾಗಿ ಕಂಡು ತನ್ನ ಧರ್ಮೋನ್ಮಾದದಿಂದ ಎಲ್ಲರನ್ನೂ ಜಾಗೃತಗೊಳಿಸಿದ. ಅವನನ್ನು ಬಂಧಿಸಬೇಕೆಂದು ಸೈನಿಕರು ಪ್ರಯತ್ನಪಟ್ಟುದೆಲ್ಲ ವ್ಯರ್ಥವಾಯಿತು. ಆತ ಭಕ್ತರ ಮನೆಗಳಲ್ಲಿ ಅವಿತುಕೊಂಡಿದ್ದು ಅಲ್ಲಿ ಇಲ್ಲಿ ಗುಟ್ಟಾಗಿ ಸೇರುತ್ತಿದ್ದ ಶೈವಪಂಥೀಯರ ಸಭೆಗಳಿಗೆ ಉಪಸ್ಥಿತನಾಗಿ ಅವರಿಗೆ ಶಕ್ತಿಯನ್ನೂ ಚೇತನವನ್ನೂ ಪ್ರೇರಣೆಯನ್ನೂ ಒದಗಿಸುತ್ತಿದ್ದ.

ಶೈವಪಂಥದ ಸಮಾನತೆಯ ತತ್ತ್ವವನ್ನು ಮೆಚ್ಚಿ ಆ ಮತವನ್ನಪ್ಪಿಕೊಂಡಿದ್ದ ಸಮಾಜದ ಕೆಳವರ್ಗದ ಜನರ ಮೇಲೆ ರಾಜ್ಯಾಧಿಕಾರಿಗಳು ಹೆಚ್ಚಾಗಿ ಅತ್ಯಾಚಾರ ನಡಸುತ್ತಿದ್ದರು. ಅದರಿಂದಾಗಿ ಅನೇಕರು ಶೈವಮತವನ್ನು ತ್ಯಜಿಸಿ ಪ್ರಾಣವುಳಿಸಿಕೊಳ್ಳಲು ಹಾತೊರೆದಿದ್ದರು. ಇನ್ನೂ ಅನೇಕರು ನಗರಗಳನ್ನೇ ತ್ಯಜಿಸಿ ಕಾಡು ಬೆಟ್ಟ ಸೇರಿಕೊಂಡು ಸಂದರ್ಭ ಸಿಕ್ಕಿದಾಗಲೆಲ್ಲ ಅಧಿಕಾರರನ್ನು ಹಿಡಿದು ಕೊಳ್ಳೆಹೊಡೆಯುತ್ತ ಜೀವನ ಸಾಗಿಸಿದ್ದರು.

ಕಾಪಾಲಿ ಮಾತ್ರ ಯಾವ ದಬ್ಬಾಳಿಕೆಗೂ ಸೊಪ್ಪುಹಾಕದೆ, ಶೈವಧರ್ಮದಲ್ಲಿ ಅಚಲವಾದ ಶ್ರದ್ಧೆಯಿರಿಸಿಕೊಂಡು ಬಂದಿದ್ದುದಲ್ಲದೆ ಸೈನಿಕರ ಅತ್ಯಾಚಾರಗಳಿಂದ ತೊಂದರೆಗೊಳಗಾಗಿ ಬಳಲುತ್ತಿದ್ದ ಧರ್ಮಬಾಂಧವರಿಗೆ ಸಾಧ್ಯವಿದ್ದಮಟ್ಟಿಗೂ ಸಹಾಯ ಸಲ್ಲಿಸಲು ಹೆಣಗುತ್ತ ಬಂದಿದ್ದ. ರಾತ್ರೆಯಿಡೀ ಜಾಗರಣೆ ಮಾಡಿ, ಮನೆಮನೆ ತಿರುಗಿ ಶೈವರನ್ನೆಲ್ಲಾ ಒಂದೆಡೆ ಸೇರಿಸಿ ಸಭೆ ಕೂಡಿಸುವುದು, ಸಭೆಯ ಹತ್ತಿರ ಕಾವಲುಗಾರನಂತೆ ಕಾದಿದ್ದು ಸೈನಿಕರ ಸುಳುವು ದೊರೆಯುತ್ತಲೂ ಎಚ್ಚರಿಕೆ ಕೊಟ್ಟು ಸಭೆಯನ್ನು ಸಕಾಲದಲ್ಲಿಯೆ ಚದರಿಸುವುದು, ಗೂಢಚಾರರ ದೃಷ್ಟಿಯಿಂದ ಪೂಜ್ಯಪಾದನನ್ನು ದೂರವಿರಿಸಲು ಯತ್ನಿಸುವುದು, ಹುತಾತ್ಮರ ಸಮಾಧಿಗಳನ್ನೇರ್ಪಡಿಸುವುದು, ಗುಡ್ಡ ಬೆಟ್ಟಗಳಲ್ಲಿ ಅವಿತುಕೊಂಡಿದ್ದವರಿಗೆ ಆಹಾರ ಪದಾರ್ಥಗಳನ್ನೊದಗಿಸುವುದು—ಇವೇ ಮೊದಲಾದ ಹಲವಾರು ಸೇವಾಕಾರ್ಯಗಳನ್ನು ಆತ ಉತ್ಸಾಹದಿಂದ ಜರುಗಿಸುತ್ತಿದ್ದ. ಕಲ್ಯಾಣ ಪಟ್ಟಣದಿಂದ ಹಿಂದಿರುಗುವ ಮುನ್ನ ಪೂಜ್ಯಪಾದ ಮಹಾಗುರು ಕಾಪಾಲಿಯನ್ನು ಪ್ರೀತಿಯಿಂದ ಹತ್ತಿರ ಕರೆದು ತಬ್ಬಿಕೊಂಡು ತಲೆಯ ಮೇಲೆ

ಕೈಯಿಟ್ಟು ಆಶೀರ್ವಾದ ಮಾಡಿದ್ದ.

ಮುಕ್ತಾಗೆ ಏಳೆಂಟು ವರ್ಷ ವಯಸ್ಸಿರಬಹುದು. ಒಂದು ರಾತ್ರಿ ರಾಜ-ರಾಣಿಯರ ಕಥೆ ಹೇಳುವುದನ್ನು ಬಿಟ್ಟು ಭಗವಂತನ ವಿಷಯವಾಗಿ ಹೇಳತೊಡಗಿದ್ದ ಕಾಪಾಲಿ.

"ನನ್ನನ್ನು, ನಿನ್ನನ್ನು, ನಿನ್ನ ತಂದೆ ತಾಯಿಗಳನ್ನು, ಎಲ್ಲರನ್ನೂ ಹುಟ್ಟಿಸಿದವರಾರು ಗೊತ್ತೇ ಮುಕ್ತಾ?"

"ಯಾರು ಅಜ್ಜಾ ?" ಬಾಲಸಹಜವಾದ ಉತ್ಸುಕತೆಯಿಂದ ಕೇಳಿದ್ದಳು ಮುಕ್ತಾ.

"ಅವನೇ ದೇವರು. ಅವನೇ ಎಲ್ಲರಿಗೂ ತಂದೆ, ಅವನೇ ತಾಯಿ. ಜಗತ್ತಿನಲ್ಲಿಯ ಎಲ್ಲಾ ಜೀವಿಗಳನ್ನು ಅವನೇ ಹುಟ್ಟಿಸಿದವನು. ಬ್ರಹ್ಮ ವಿಷ್ಣು ಮೊದಲಾದ ದೇವತೆಗಳನ್ನು ಕೂಡಾ ಅವನೇ ಸೃಷ್ಟಿಸಿದವನು. ಆ ಮಹಾ ಸೃಷ್ಟಿಕರ್ತನಿಗೇ ಪರಮೇಶ್ವರ ಅನ್ನುತ್ತೇವೆ. ಅವನೇ ಗೌರೀಶಂಕರ. ಜೈ ನಮಃ ಪಾರ್ವತೀಪತೇ ಹರಹರ ಮಹಾದೇವ್."



"ಹರಹರಾ ಅಂದರೇನಜ್ಜಾ ?"

"ಹರ ಅಂದರೇ ದೇವರು. ಅದೂ ಅವನ ಇನ್ನೊಂದು ಹೆಸರು"

"ಅಬ್ಬ ! ಎಷ್ಟು ಹೆಸರಿವೆಯಪ್ಪಾ ಈ ದೇವರಿಗೆ !"

"ಅವನ ಹೆಸರು ಸಾವಿರಾರು. ಆದರೂ ಅವನು ಒಬ್ಬನೇ, ಅವನನ್ನು ಮೀರಿಸುವ ದೇವತೆಗಳಾರೂ ಇಲ್ಲ."

"ಈ ಹರಹರಾ ಎಲ್ಲಿರುತ್ತಾನೆ ಅಜ್ಜಾ ?"

"ಕೈಲಾಸ ಪರ್ವತದಲ್ಲಿ ಅವನಿದ್ದಾನೆ. ಅದಕ್ಕೆ ಸ್ವರ್ಗ ಎಂದು ಇನ್ನೊಂದು ಹೆಸರೂ ಇದೆ. ಶಿವಶಂಕರನಿರುವ ಈ ಮಹಾ ಮನೆ ಬಹಳ ಹಳೆಯದು. ಅವನಲ್ಲಿ ನಂಬಿಕೆಯಿಟ್ಟು ಏಕನಿಷ್ಠೆಯಿಂದ ಅವನನ್ನೇ ಪೂಜಿಸಿದರೆ ನಾವು ಅವನ ಹತ್ತಿರವೇ ಹೋಗುತ್ತೇವೆ. ನಮ್ಮ ಶೈವ ಧರ್ಮ ಅವನಿಂದಲೇ ಸ್ಥಾಪಿತವಾದದ್ದು. ಆ ಧರ್ಮದ ತತ್ತ್ವಗಳಂತೆ ನಡೆದುಕೊಳ್ಳುವವರಿಗೆ ಕೊನೆಗೆ ಸ್ವರ್ಗಸುಖ ಪ್ರಾಪ್ತವಾಗುತ್ತದೆ."

"ಅಂದರೇನು ಅಜ್ಜಾ ?"

"ಅಂಪರೆ........ಸ್ವರ್ಗದಲ್ಲಿ ನಾವು ಬೇಡಿದುದೆಲ್ಲಾ ಸಿಗುತ್ತದೆ. ಬೇಕಾದಂಥ ಪಕ್ವಾನ್ನ ಉಣ್ಣಬಹುದು. ಹಾಡಬಹುದು, ಕುಣಿಯಬಹುದು, ನಿದ್ರಿಸಬಹುದು, ವಿಹರಿಸಬಹುದು. ಅದಕ್ಕೆ ಕೊನೆಯೆಂಬುದೇ ಇಲ್ಲ. ಪರಮಾತ್ಮ ತನ್ನ ಭಕ್ತರನ್ನು ತನಗಿಂತಲೂ ಹೆಚ್ಚಾಗಿ ಪ್ರೀತಿಸುತ್ತಾನೆ."

ಮುಕ್ತಾದೇವಿ ದೊಡ್ಡವಳಾಗುತ್ತಾ ಬಂದ ಹಾಗೆಲ್ಲ ಕಾಪಾಲಿಯ ಮಾತುಗಳ ಅರ್ಥವೂ ಆವಳಿಗಾಗತೊಡಗಿತ್ತು. ಅವನ ಪ್ರಭಾವಕ್ಕೊಳಗಾಗಿ ಅವಳೂ ಶೈವ ಧರ್ಮವನ್ನು ಪ್ರೀತಿಸತೊಡಗಿದ್ದಳು. ಒಂದು ದಿನ ಅವಳು ಕೇಳಿದಳು:

"ನಾನೂ ಕೈಲಾಸಕ್ಕೆ ಹೋಗಬಲ್ಲೆನೇ ಅಜ್ಜಾ ?"

"ಪರಶಿವನಲ್ಲಿ ಗಾಢ ವಿಶ್ವಾಸವಿಟ್ಟು ಅವನನ್ನೇ ಪೂಜಿಸುತ್ತಿದ್ದರೆ ಖಂಡಿತವಾಗಿಯೂ ನಿನಗೆ ಕೈಲಾಸ ಸಿಕ್ಕುವುದು."

"ನನಗೆ ಶಿವನಲ್ಲೇ ನಂಬಿಕೆಯಿದೆ ಅಜ್ಜಾ."

"ಮೊದಲು ಗುರೂಪದೇಶವಾಗಬೇಕು. ಅನಂತರ ನೀನು ಸಾಧನೆ ಮಾಡುವಿಯಂತೆ." ಎಂದ ಕಾಪಾಲಿ.

ಮುಕ್ತಾದೇವಿಯ ತಾಯಿ ತಂದೆಗಳು ಅವಳನ್ನು ಪರಿಪರಿಯಾಗಿ ಪೀಡಿಸುತ್ತಿದ್ದರು. ಶಾಂತವಾಗಿ ಮಲಗಿ ನಿದ್ರಿಸುವುದಕ್ಕೂ ಆಸ್ಪದವಿರಲಿಲ್ಲ ಆ ಮನೆಯಲ್ಲಿ. ದನಗಳ ಕೊಟ್ಟಿಗೆಯಲ್ಲೊಂದು ಕಡೆ ಬಿದ್ದುಕೊಂಡು ಅವಳು ಇರುಳು ಕಳೆಯಬೇಕಾಗುತ್ತಿತ್ತು. ವೃದ್ಧ ಕಾಪಾಲಿ ಯಾರಿಗೂ ಗೊತ್ತಾಗದಂತೆ ಕದ್ದು ಬಂದು ಅವಳ ಹತ್ತಿರ ಕೂಡುತ್ತಿದ್ದ. ಅವನ ಕಪ್ಪು ದೇಹವೂ ಮುಖವೂ ಕತ್ತಲೆಯಲ್ಲಿ ಮರೆಯಾಗುತ್ತಿದ್ದುವು. ಬಾಗಿಲಿಗಿರುವ ಛಿದ್ರಗಳ ಮೂಲಕ ಕಿರಣಗಳು ಕಾಣಿಸುವಂತೆ ಅವನ ವಿಶಾಲ ನೇತ್ರಗಳಿಂದ ಪ್ರಕಾಶ ಹೊರಚಿಮ್ಮುತ್ತಿತ್ತು. ಸಂಗೀತದ ಕರುಣರಾಗಪೂರಿತವಾದ ಉದಾಸೀನ ಮಧುರಸ್ವರದಲ್ಲಿ ಆತ ಮಾತನಾಡಲಾರಂಭಿಸುತ್ತಿದ್ದ. ಧಾರ್ಮಿಕ ತತ್ವಗಳನ್ನು ಹೇಳುತ್ತಿದ್ದ ಹಾಗೆ ಮುಕ್ತಾ ಪ್ರಪಂಚವನ್ನೆಲ್ಲ ಮರೆತು ಆಲಿಸುತ್ತಿದ್ದಳು. ಕತ್ತಲೆಯ ಆಳದಿಂದ ಕಾಪಾಲಿಯ ಧ್ವನಿ ಸ್ಫೂರ್ತಿ, ಶಾಂತಿ, ಆಸೆ, ವಿಶ್ವಾಸಗಳನ್ನು ತುಂಬಿಕೊಂಡು ಹೊರಬೀಳುತ್ತಿತ್ತು. ಅವನ ಕೈಯಲ್ಲೊಂದು ಕೈಸೇರಿಸಿದ್ದ

ಹಾಗೆ ಮುಕ್ತಾ ಅವನ ಕಲ್ಪನಾಮೂರ್ತಿಗಳೊಡನೆ ಆಟವಾಡುತ್ತ ಪ್ರಸನ್ನ ಚಿತ್ತಳಾಗಿ ನಿದ್ರಿಸುತ್ತಿದ್ದಳು.

ಎಷ್ಟೋ ವರ್ಷಗಳ ವರೆಗೆ ಅದೇ ಕ್ರಮ ಮುಂದುವರೆಯಿತು. ಒಂದು ಬಾರಿ ಶೈವಪಂಥೀಯರ ಉತ್ಸವಕಾಲಕ್ಕಾರಂಭವಾದಾಗ ಕಾಪಾಲಿ ಮುಕ್ತಾ ದೇವಿಯನ್ನು ತನ್ನ ಜೊತೆಗೆ ಕರೆದೊಯ್ದ. ಅವನ ನೇತ್ರಗಳು ನವೀನ ಪ್ರಕಾಶ ದಿಂದ ಥಳಥಳಿಸುತ್ತಿದ್ದುವು. ಎಂದಿನಂತೆ ಆತ ಆ ದಿನ ಹರಕಲು ಬಟ್ಟೆ ಹಾಕಿ ಕೊಳ್ಳದೆ ಹೊಸದೊಂದು ನಿಲುವಂಗಿ ಧರಿಸಿಕೊಂಡಿದ್ದ. ಮುಕ್ತಾದೇವಿಯನ್ನು ಆ ನಿಲುವಂಗಿಯಲ್ಲಿ ಅಡಗಿಸುತ್ತಾ ಆತನೆಂದ:

"ನಡೆ ನನ್ನ ಮಗಳೇ, ನನ್ನ ಕಣ್ಣುಗೊಂಬೆಯೆ, ಉತ್ಸವಕ್ಕೆ ಹೋಗೋಣ."

ಬಾಲಿಕೆಯನ್ನು ತನ್ನ ಎದೆಯ ಬಳಿ ಹಿಡಿದೆತ್ತಿಕೊಂಡು ಆತ ಹೊರ ಹೊರಟ. ಕಾಪಾಲಿಯ ಕೊರಳಿನ ಸುತ್ತ ಕೈಗಳನ್ನು ಸೇರಿಸಿ ಮುಕ್ತಾ ಉತ್ಸು ಕತೆಯಿಂದ ಕಾಯತೊಡಗಿದಳು. ಕತ್ತಲು ತುಂಬಿದ ಗಲ್ಲಿಗಳಲ್ಲಿ ಹಾದು, ವೈಷ್ಣವರ ಕೇರಿಗಳನ್ನು ದಾಟಿ ಅವರು ನಗರದ ಹೊರಭಾಗದಲ್ಲಿದ್ದ ಪಾಳು ದೇವಾಲಯವೊಂದರ ಬಳಿ ಬಂದರು. ಆ ದೇವಾಲಯದ ನೆಲಮನೆಯಲ್ಲಿಯೆ ಉತ್ಸವ ನಡೆಯುವ ಏರ್ಪಾಡಾಗಿತ್ತು. ಊದಿನಕಡ್ಡಿಗಳ ಸುಗಂಧ ವಾಸನೆ ನೆಲಮನೆಯಿಂದ ತೂರಿ ಬಂದು ದೇವಾಲಯದ ಆವರಣದಲ್ಲೆಲ್ಲ ತುಂಬಿ ಕೊಂಡಿತ್ತು. ಗೋಡೆಗಳ ಮೇಲಿದ್ದ ದೇವದೇವತೆಯರ ಮೂರ್ತಿಗಳು ಮಬ್ಬು ಬೆಳಕಿನಲ್ಲಿ ಅಸ್ಪಷ್ಟವಾಗಿ ಗೋಚರವಾಗುತ್ತಿದ್ದುವು.

ಮುಕ್ತಾದೇವಿಯ ಕೈಹಿಡಿದು ತುಂಬಾ ಜಾಗರೂಕತೆಯಿಂದ ಅವಳನ್ನು ನೆಲಮನೆಯಲ್ಲಿಳಿಸಿದ ಕಾಪಾಲಿ. ಅಲ್ಲಿ ನೂರಾರು ಜನ ಸ್ತ್ರೀಪುರುಷರ ನೆರವಿ ಸೇರಿತ್ತು. ಅವರ ನಟ್ಟನಡುವೆ ಧರ್ಮಗುರುವೊಬ್ಬ ನಿಂತುಕೊಂಡು ಮೆಲು ದನಿಯಲ್ಲಿ ಉಪದೇಶ ಮಾಡುತ್ತಿದ್ದ. ಬಿಳಿಯ ಗಡ್ಡಮೀಸೆಗಳಿಂದೊಡಗೂಡಿದ ಆತನ ಮುಖ ಸೌಮ್ಯವಾಗಿತ್ತು, ಶಾಂತವಾಗಿತ್ತು.

ಮುಕ್ತಾದೇವಿಯನ್ನು ಕೆಳಗಿಳಿಸಿ ಕಾಪಾಲಿ ಹೇಳಿದ:

"ಗುರು ಮಹಾರಾಜ್, ಈ ಬಾಲಿಕೆಯನ್ನು ನಾನು ಪ್ರಾಣಕ್ಕಿಂತಲೂ ಹೆಚ್ಚಾಗಿ ಪ್ರೀತಿಸುತ್ತೇನೆ. ಗೌರೀಶಂಕರನಲ್ಲಿ ಇವಳಿಗೂ ಭಕ್ತಿಯಿದೆ. ದಯ

ವಿಟ್ಟು ನೀವು ಇವಳನ್ನು ಆಶೀರ್ವದಿಸಬೇಕು."

ಧರ್ಮಗುರು ತನ್ನ ದೀರ್ಘ ಬಾಹುಗಳನ್ನು ಚಾಚಿ ಬಾಲಿಕೆಯನ್ನು ಆಶೀರ್ವದಿಸಿದ. ಏಕೋ ಏನೋ ತಿಳಿಯದು. ಅವನನ್ನು ಕಂಡೊಡನೆ ಮುಕ್ತಾಗೆ ಕೊಂಚ ಭಯವಾಗದಿರಲಿಲ್ಲ. ಅವಳು ದೂರ ಸರಿದು ಕಾಪಾಲಿಯ ನಿಲುವಂಗಿಯಲ್ಲಿ ಅವಿತುಕೊಳ್ಳಲೆತ್ನಿಸಿದಳು.

ಧರ್ಮಗುರು ವಾತ್ಸಲ್ಯಪೂರಿತ ಶಾಂತಸ್ವರದಲ್ಲಿ ಹೇಳಿದ:

"ಅಂಜಬೇಡ ಮಗಳೇ, ಕಾಪಾಲಿ ನಿನ್ನ ತಂದೆಯಂತಿದ್ದಾನೆ. ನಾನು ನಿನ್ನ ಅಜ್ಜನಂತೆ. ಅಂಜಲು ಕಾರಣವೇನೂ ಇಲ್ಲ. ನಾವೆಲ್ಲಾ ಶಿವನ ಭಕ್ತರು. ನೀನೂ ಅವನ ಭಕ್ತಳಷ್ಟೆ?"

ಮುಕ್ತಾ ಅಳುಕುತ್ತ ಅಳುಕುತ್ತಲೇ ಹೇಳಿದಳು:

"ಹೌದು ಮಹಾರಾಜ್."

"ಇಷ್ಟು ಚಿಕ್ಕ ವಯಸ್ಸಿನಲ್ಲಿಯೆ ನಿನಗೆ ಸತ್ಯಧರ್ಮದ ಅರಿವಾದದ್ದು ಬಹಳ ಸಂತೋಷದ ವಿಚಾರವಾಗಿದೆ. ಪರಶಿವಮೂರ್ತಿ ತನ್ನ ಭಕ್ತರನ್ನು ಎಂದೂ ಮರೆಯುವದಿಲ್ಲ. ಕೊನೆಗೆ ಅವರನ್ನಾತ ಕೈಲಾಸಕ್ಕೇ ಕರೆದೊಯ್ಯುತ್ತಾನೆ. ಶಿವಧರ್ಮವನ್ನು ಎಂದೆಂದೂ ಕೈಬಿಡಬೇಡ ಮಗಳೇ."

"ಆಗಲಿ ಮಹಾರಾಜ್," ಎಂದಳು ಮುಕ್ತಾ.

"ಗುರುಮಹಾರಾಜರಿಗೆ ನಮಸ್ಕಾರ ಮಾಡು." ಎಂದು ಅವಳನ್ನು ಮುಂದೆ ನೂಕಿದ ಕಾಪಾಲಿ. ಧರ್ಮಗುರು ಮತ್ತೊಂದು ಬಾರಿ ಬಾಲಿಕೆಯನ್ನು ಹರಸಿ ಅವಳಿಗೆ ಪತ್ರಪುಷ್ಪಗಳನ್ನಿತ್ತ.

ಅನಂತರ ಸಾಮೂಹಿಕ ಭಜನೆಗಾರಂಭವಾಯಿತು.

ಭಜನೆ ಮುಗಿಯುತ್ತ ಬಂದು ಸಭೆ ಚದರಿದಾಗ ಬೆಳಕು ಹರಿಯುತ್ತಿತ್ತು.

ದಿನದಿಂದ ದಿನಕ್ಕೆ ಮೈ ಕೈ ತುಂಬಿಕೊಂಡು ಬೆಳೆದು ದೊಡ್ಡವಳಾದಳು ಮುಕ್ತಾ. ಮನೋರಂಜಕವಾದ ಆಟ ಪಾಟ, ಸಂಗೀತ, ಗಾಯನ, ನರ್ತನಗಳಲ್ಲಿ ಅವಳಿಗೆ ಆಸಕ್ತಿಯುಂಟಾಯಿತು. ಓಣಿಯ ಹುಡುಗಿಯರ ಜೊತೆ ಸೇರಿ ಅವಳು ದಿನವಿಡೀ ಆಡುತ್ತ ಹಾಡುತ್ತ ನರ್ತಿಸುತ್ತಿದ್ದು ರಾತ್ರಿಯಾಗುತ್ತಲೂ ಮನೆಗೆ ಬಂದು ಅಲ್ಲಿಯೂ ಹಾಡುತ್ತಲೇ ಇರುತ್ತಿದ್ದಳು.

ಶಾಂತ ಸ್ವಭಾವದ ಕಾಪಾಲಿಗಿಂತ ಅವಳಿಗೆ ಹುಡುಗ ಹುಡುಗಿಯರ ಸಹ ವಾಸವೇ ಹೆಚ್ಚು ಪ್ರಿಯವಾಗತೊಡಗಿತು. ಶೈವಧರ್ಮೀಯರ ಮೇಲೆ ನಡೆಯುತ್ತಿದ್ದ ಅತ್ಯಾಚಾರ ನಿದಾನವಾಗಿ ಕಡಿಮೆಯಾಗುತ್ತಿತ್ತು. ಅವರ ಕೂಟಗಳೂ ಉತ್ಸವಗಳೂ ಹಗಲಿನ ಬೆಳಕಿನಲ್ಲಿಯೇ ನಡೆಯತೊಡಗಿದ್ದುವು. ಶೈವಧರ್ಮವನ್ನು ದ್ವೇಷಿಸುತ್ತಿದ್ದ ಚಕ್ರವರ್ತಿ ತೀರಿಕೊಂಡು ಅವನ ಬದಲು ಉದಾರಹೃದಯಿಯಾದ ಅರಸನೊಬ್ಬ ಪಟ್ಟವೇರಿದ್ದುದರಿಂದ ರಾಜ್ಯದಲ್ಲಿ ಮಹತ್ತರವಾದ ಬದಲಾವಣೆಗಳಾಗಿದ್ದುವು. ಕಾಪಾಲಿ ಅತ್ಯುತ್ಸಾಹದಿಂದ ಧಾರ್ಮಿಕ ಸಭೆಗಳಲ್ಲಿ ಭಾಗವಹಿಸತೊಡಗಿದ್ದ. ಆಗಾಗ ಅವನ ಮುಖದಿಂದ ರಹಸ್ಯಪೂರಿತ ವಾಕ್ಯಗಳು ಹೊರಹೊರಡುತ್ತಿದ್ದವು. "ಇನ್ನು ಮುಂದೆ ಶ್ರೀಮಂತರು ಶ್ರೀಮಂತರಾಗಿ ಉಳಿಯುವುದಿಲ್ಲ. ಬಡವರು ಬಡವರಾಗಿ ಉಳಿಯುವುದಿಲ್ಲ." ಎಂದು ಆತ ಹೇಳುತ್ತಿದ್ದ.

"ಅಂದರೇನು ಅಜ್ಜಾ ?" ಎಂದು ಪ್ರಶ್ನಿಸಿದಳು ಮುಕ್ತಾ.

"ಪರಶಿವನ ರಾಜ್ಯದಲ್ಲಿ ಎಲ್ಲರೂ ಸಮಾನರು. ಹೆಚ್ಚುಕಡಿಮೆ, ಮೇಲು ಕೀಳು ಮೊದಲಾದ ಭಾವನೆಗಳಿಗೆ ಅವಕಾಶವಿಲ್ಲ, ಇಷ್ಟು ದಿವಸ ನಡೆದ ಹಾಗೆ ಇನ್ನು ಬಡವರ ಮೇಲೆ ಉಳ್ಳವರ ಅತ್ಯಾಚಾರ ನಡೆಯಲಾರದು."

"ಅಂದರೆ ? ಬಡವರೇ ರಾಜ್ಯ ನಡಸುವರೋ ಏನು ?"

"ಸಾಕ್ಷಾತ್ ಪರಶಿವನೇ ಎಲ್ಲ ಸಂಪತ್ತನ್ನೂ ತ್ಯಜಿಸಿದ ಸಂನ್ಯಾಸಿ. ಬಡವರೆಂದರೆ ಅವನ ಪ್ರೀತಿಯ ಮಕ್ಕಳು. ಶಿವಧರ್ಮೀಯರ ರಾಜ್ಯದಲ್ಲಿ ಬಡವರ ಕೈಯೇ ಮೇಲಾಗುವದು."

ಶೈವಪಂಥೀಯರ ಕೂಟಗಳಲ್ಲಿ ಆತ ಇದೇ ಬಗೆಯ ಮಾತುಗಳನ್ನಾಡ ತೊಡಗಿದ.

"ಗೌರೀಶಂಕರನ ರಾಜ್ಯದಲ್ಲಿ ಎಲ್ಲರೂ ಸಮಾನರು. ಇಷ್ಟು ದಿವಸ ಶ್ರೀಮಂತರು ತಮ್ಮ ಆಳುಕಾಳುಗಳ ಮೇಲೆ ಅತ್ಯಾಚಾರ ನಡಸಿದಂತೆ ಇನ್ನು ನಡಸಲಾರರು. ದಲಿತರೆಲ್ಲಾ ಶೈವಧರ್ಮದ ಧ್ವಜದಡಿಯಲ್ಲಿ ಒಂದುಗೂಡಬೇಕು. ಅತ್ಯಾಚಾರಿಗಳನ್ನು ಹಾದಿಗೆ ತರಬೇಕು."

ಅವನ ಈ ಮಾತುಗಳು ನಗರದಲ್ಲೆಲ್ಲ ಪ್ರಸಾರಗೊಂಡುವು. ಆಳುಕಾಳುಗಳನ್ನಿಟ್ಟುಕೊಂಡು ಅವರನ್ನು ಪಶುಗಳಂತೆ ದುಡಿಸುತ್ತ ಹಣಸಂಪಾದನೆ

ಮಾಡುತ್ತಿದ್ದ ಶ್ರೀಮಂತರಿಗೆಲ್ಲಾ ಯೋಚನೆಗಿಟ್ಟುಕೊಂಡಿತು. ಆಳುಗಳನ್ನು ತಮ್ಮ ವಿರುದ್ಧ ಬಂಡೇಳುವಂತೆ ಕಾಪಾಲಿ ಪ್ರೇರೇಪಿಸುತ್ತಿರಬಹುದೋ ಏನೋ.

ಮುಕ್ತಾದೇವಿಯ ತಂದೆಯ ಕಿವಿಗೂ ಈ ವಾರ್ತೆ ಬೀಳದಿರಲಿಲ್ಲ. ಮೊದಲಿನಂತೆಯೇ ಆತ ಈಗಲೂ ಕಾಪಾಲಿಯನ್ನು ತಿರಸ್ಕಾರದಿಂದಲೇ ಕಾಣುತ್ತಿದ್ದ. ಆದರೆ ಇತ್ತೀಚೆಗೆ, ಕಾಪಾಲಿಯನ್ನು ಹೊಡೆಯುವುದನ್ನು ಮಾತ್ರ ಆತ ನಿಲ್ಲಿಸಿದ್ದ.

ಒಂದು ದಿನ ಭೋಜನಾಲಯದಲ್ಲಿದ್ದ ಬೆಳ್ಳಿಯ ದೇವಮೂರ್ತಿಯೊಂದು ಕಳವಾಗಿ ಹೋಯಿತು. ಅದು ವೈಷ್ಣವ ಧರ್ಮೀಯರ ಮೂರ್ತಿಯಾದುದರಿಂದ ಶೈವ ಧರ್ಮಾಭಿಮಾನಿಯಾದ ಕಾಪಾಲಿಯೇ ಅದನ್ನು ಕದ್ದು ನಷ್ಟಗೊಳಿಸಿರಬೇಕೆಂದು ಆರೋಪವಿಟ್ಟು ಅವನನ್ನು ನ್ಯಾಯಾಲಯಕ್ಕೆಳೆಯಲಾಯಿತು. ಆ ಆರೋಪವನ್ನು ಕಾಪಾಲಿ ಅಲ್ಲಗಳೆದರೂ ಪ್ರಯೋಜನವಾಗಲಿಲ್ಲ. ವೈಷ್ಣವ ಧರ್ಮಾಭಿಮಾನಿಯೂ ಆಡಳಿತಗಾರರ ಕೈಗೊಂಬೆಯೂ ಆಗಿದ್ದ ನ್ಯಾಯಾಧೀಶ ಕಾಪಾಲಿಗೆ ದೇಹಾಂತ ಶಿಕ್ಷೆ ವಿಧಿಸಿದ.

ಕಾಪಾಲಿ ಧೈರ್ಯದಿಂದಲೇ ಶಿಕ್ಷೆಯ ನಿರ್ಣಯವನ್ನಾಲಿಸಿ ನ್ಯಾಯಾಧೀಶನಿಗೆ ಆದರದಿಂದ ವಂದಿಸಿದ. ಅನಂತರ ಅವನನ್ನು ಸೆರೆಮನೆಗೆ ಸಾಗಿಸಲಾಯಿತು. ಮೂರು ದಿನಗಳ ವರೆಗೂ ಆತನನ್ನು ಅಲ್ಲಿಯೇ ಇಡಲಾಗಿತ್ತು. ಆ ಅವಧಿಯನ್ನು ಆತ ವ್ಯರ್ಥಗೊಳಿಸದೆ ಅಲ್ಲಿದ್ದ ಇತರ ಸೆರೆಯಾಳುಗಳಿಗೆ ಶೈವ ಧರ್ಮದ ಮಹತಿಯನ್ನು ಕುರಿತು ಉಪದೇಶಿಸುತ್ತಿದ್ದ.

ನಾಲ್ಕನೆಯ ದಿನ ಬೆಳಗು ಮುಂಜಾನೆ ಅವನನ್ನು ಶೂಲಕ್ಕೇರಿಸಲಾಯಿತು. ಕೊನೆಯುಸಿರು ಬಿಡುವಾಗಲೂ ಆತ ಶಿವನಾಮ ಸ್ಮರಣೆ ಮಾಡುತ್ತಲೇ ಇದ್ದ.

ಮೃತ್ಯುವಿನ ತರುವಾಯವೂ ಅವನ ಮುಖದ ಮೇಲೆ ಉಲ್ಲಾಸದ ಭಾವ ಎದ್ದು ಕಾಣುತ್ತಿತ್ತು. ಅವನನ್ನು ಶೂಲಕ್ಕೇರಿಸಲು ಬಂದಿದ್ದ ಅಧಿಕಾರಿಗಳು ಅದನ್ನು ಕಂಡು ವಿಸ್ಮಿತರಾಗದಿರಲಿಲ್ಲ.

ಶೈವ ಪಂಥೀಯ ಮಹಾಜನರು ಬಂದು ಅವನ ಶವವನ್ನು ಪಡೆದುಕೊಂಡು ಸನ್ಮಾನಪೂರ್ವಕವಾಗಿ ದಫನ ಮಾಡಿದರು. ಅವನ ಸಾವಿಗಾಗಿ ಶೋಕಿಸುತ್ತಿದ್ದ ಜನರ ಗುಂಪಿನಲ್ಲಿ ಮುಕ್ತಾದೇವಿಯೂ ಇದ್ದಳು.

ಆಗ ಮುಕ್ತಾಗೆ ಸುಮಾರು ಹದಿನಾಲ್ಕರ ಪ್ರಾಯ. ಕಾಪಾಲಿಗೊದಗಿದ ಘೋರ ಮೃತ್ಯುವಿನಿಂದಾಗಿ ಆವಳಿಗೆ ದುಃಖವೂ ನಿರಾಸೆಯೂ ಆಯಿತು. ಕಾಪಾಲಿಯ ಮೃತ್ಯು, ಅವನ ಜೀವನದ ಹಾಗೆಯೇ ಸಾರ್ಥಕವಾಗಿದ್ದಿತೆಂದು ಅರಿತುಕೊಳ್ಳುವ ವಯಸ್ಸು ಆವಳದಾಗಿರಲಿಲ್ಲ. ಭಯಂಕರವಾದ ಯಾತನೆಗಳನ್ನು ಸಹಿಸಲು ಸಿದ್ಧರಾಗಿರುವವರು ಮಾತ್ರವೇ ಈ ಪ್ರಪಂಚದಲ್ಲಿ ಶಿವಭಕ್ತರಾಗಿರಲು ಸಾಧ್ಯವೆಂದು ಆವಳಿಗನ್ನಿಸಿತು. ಲೌಕಿಕ ಸುಖಗಳನ್ನು ಪ್ರೀತಿಸಲಾರಂಭಿಸಿದ್ದ ಮುಕ್ತಾ ಈ ಕಷ್ಟದ ಹಾದಿ ತುಳಿಯಲು ಹೆದರಿದಳು.

ಅವಳು ಪೂರ್ಣ ವಯಸ್ಕಳಾಗುವ ಮೊದಲೇ ನಗರದ ತರುಣರನೇಕರು ಆವಳ ಪ್ರೇಮಿಗಳಾದರು. ಅವರಿಂದ ಹಣ ಕಿತ್ತುಕೊಳ್ಳುವ ಕಲೆಯೂ ಆವಳಿಗೆ ಸಹಜವಾಗಿಯೇ ಸಾಧಿಸಿತು. ಆ ಹಣವನ್ನು ಮನೆಗೆ ತೆಗೆದುಕೊಂಡು ಹೋಗದೆ ತನಗಾಗಿ ಬಟ್ಟೆಬರೆಗಳನ್ನೂ ಒಡವೆಗಳನ್ನೂ ಕೊಂಡುಕೊಂಡಳು.

"ಇದೆಲ್ಲಾ ಎಲ್ಲಿಂದ ಬಂತೇ ? ಯಾರು ಕೊಟ್ಟರೇ?" ಎಂದು ಅವಳ ತಾಯಿ ಕೇಳುತ್ತಿದ್ದಳು.

"ದೇವರು ಕೊಟ್ಟ " ಎನ್ನುತ್ತಿದ್ದಳು ಮುಕ್ತಾ.

"ನಿಜ ಹೇಳು. ಯಾರ ಗೆಳೆತನ ಮಾಡಿದ್ದೀಯೆ ? ಯಾರನ್ನು ಇಟ್ಟುಕೊಂಡಿದ್ದೀಯೆ ?"

"ಅದನ್ನೆಲ್ಲಾ ಕೇಳಲು ನಿನಗೇನು ಅಧಿಕಾರ ? ನೀನಂತೂ ಹಣ ಕೊಡುವುದಿಲ್ಲ. ಬೇರೆಯವರು ಕೊಟ್ಟರೆ ನಿನಗ್ಯಾಕೆ ಹೊಟ್ಟೆಕಿಚ್ಚು ?"

ತಾಯಿ ರೇಗಿ ಮಗಳನ್ನು ಹೊಡೆಯಲು ಯತ್ನಿಸಿದಾಗ ಮಗಳು ತಪ್ಪಿಸಿಕೊಂಡು ಓಡಿಹೋಗಿ ನಗರದ ಹೊರಭಾಗದಲ್ಲಿದ್ದ ಕೆರೆಯ ಬಳಿ ಬಂದು ಅಲ್ಲಿದ್ದ ದೇವಾಲಯದಲ್ಲಿ ಕುಳಿತು ಆಳುಕಾಳುಗಳಿಂದ ಸೇವೆ ಮಾಡಿಸಿಕೊಳ್ಳುತ್ತ ದೊಡ್ಡ ದೊಡ್ಡ ಭವನಗಳಲ್ಲಿ ಕಾಲ ಕಳೆಯುವ ಧನಿಕ ಸ್ತ್ರೀಯರ ಬಗೆಗೆ ಯೋಚಿಸುವಳು.

ಒಂದು ದಿನ ಅವಳು ತಾಯಿಯ ಕೈಯಲ್ಲಿ ಸಿಕ್ಕು ವಿಪರೀತ ಏಟು ತಿನ್ನಬೇಕಾಯಿತು. ಮೈನೋವಿನಿಂದ ನರಳುತ್ತ ಅವಳು ಮನೆಯಿಂದ ಹೊರಟು ಕೆರೆಯ ಬಳಿಯಿದ್ದ ದೇವಾಲಯದಲ್ಲಿ ಬಿದ್ದುಕೊಂಡಿದ್ದ ಹಾಗೆ ವೃದ್ಧ ಸ್ತ್ರೀಯೊಬ್ಬಾಕೆ ಅವಳ ಬಳಿ ಬಂದಳು. ಕೆಲವು ಕ್ಷಣ ಆಕೆಯನ್ನು ದಿಟ್ಟಿಸಿನೋಡುತ್ತಿದ್ದು

ಮುದುಕಿಯೆಂದಳು:

"ಯಾರು ತಾಯಿ ನೀನು ? ಇಲ್ಲ್ಯಾಕೆ ಹೀಗೆ ಬಿದ್ದುಕೊಂಡಿದ್ದೀ ?"

ಮುಕ್ತಾ ಉತ್ತರವೀಯಲಿಲ್ಲ. ಮುದುಕಿಯ ಕಡೆ ದೃಷ್ಟಿಯನ್ನೂ ತಿರುಗಿಸಲಿಲ್ಲ. ತನ್ನ ನೋವಿನ ದುಃಖದಲ್ಲಿಯೇ ಮುಳುಗಿ ಹಾಗೆಯೆ ಬಿದ್ದುಕೊಂಡಿದ್ದಳು.

ವೃದ್ಧೆ ಅವಳ ಬಳಿ ಕುಳಿತು ಪ್ರೀತಿಯಿಂದ ಅವಳ ಮೈಯನ್ನು ಸವರುತ್ತ ಹೇಳಿದಳು:

"ಯಾರಾದರೂ ಬಡೆದರೇನವ್ವಾ ನಿನಗೆ ? ನಿನ್ನಂಥಾ ಚೆಲುವೆಯನ್ನು ಯಾವ ಹೃದಯಹೀನರು ಹೊಡೆದರೋ....ನಿನ್ನ ಮುಖ ನೋಡಿದರೆ ಮಲ್ಲಿಗೆ ಹೂವು ನೋಡಿದಂತಾಗುತ್ತದೆ. ನಿನ್ನಂಥ ರೂಪವತಿಯನ್ನು ಹೆತ್ತ ತಾಯಿ ತಂದೆಗಳು ಧನ್ಯರು...."

"ಅವರೇಕೆ ಧನ್ಯರಾದಾರು ? ಅವರೇ ನನ್ನನ್ನು ಹೊಡೆಯುತ್ತಾರೆ." ಎಂದು ಬಿಕ್ಕುತ್ತಾ ಹೇಳಿದಳು ಮುಕ್ತಾ.

"ತಂದೆ ತಾಯಿಗಳೇ ನಿನ್ನನ್ನು ಹೊಡೆಯುತ್ತಾರೆಯೆ ! ಅವರೇನು ಮನುಷ್ಯರೋ ರಾಕ್ಷಸರೋ ? ನಿನ್ನಂಥ ಕೋಮಲ ಬಾಲೆಯ ಮೈಗೆ ಕೈ ಹಚ್ಚುವುದೂ ಅಪರಾಧ."

"ಆ ತಿಳಿವಳಿಕೆ ಅವರಿಗೆಲ್ಲಿಯದು ?" ಎಂದಳು ಮುಕ್ತಾ.

"ಯಾಕೆ ? ಅವರೇನು ಮೂರ್ಖರೇ ? ನೀನು ಅವರಿಗೆ ಬೇಡವಾಗಿದ್ದೀಯಾ ?"

"ನನ್ನ ತಂದೆ ಸೆರೆಗುಡುಕ. ತಾಯಿ ಮಹಾ ಜಿಪುಣಿ. ಮನೆಯಲ್ಲಿ ನಾನಿರುವುದೂ ಅವರಿಗಿಷ್ಟವಿಲ್ಲ."

ಯಾರಾದರೂ ತನ್ನನ್ನು ನೋಡುತ್ತಿರುವರೇನೋ ಎಂದು ನಾಲ್ಕೂ ಕಡೆಗೂ ದೃಷ್ಟಿ ಹೊರಳಿಸಿ, ಯಾರೂ ಇಲ್ಲದಿದ್ದುದನ್ನು ಕಂಡು ಸಮಾಧಾನ ಪಟ್ಟುಕೊಂಡು ವೃದ್ಧೆ ಹೇಳಿದಳು:

"ಮಗಳೇ, ನಿನ್ನ ಸ್ಥಿತಿಯನ್ನು ನೋಡಿ ನನಗೆ ಬಹಳ ದುಃಖವಾಗಿದೆ. ಪರದೇಶಿಯಂತೆ ನೀನಿಲ್ಲಿ ಬಿದ್ದುಕೊಂಡಿರುವಾಗ ನಿನ್ನನ್ನು ಹೀಗೇ ಬಿಟ್ಟು ಹೋಗಲು ನನ್ನ ಕಾಲು ಏಳುವುದಿಲ್ಲ. ಏಳು. ನನ್ನ ಸಂಗಡ ಬಾ."

"ಎಲ್ಲಿಗೆ ಅಜ್ಜಿ ?"

"ನನ್ನ ಮನೆಗೆ. ಅಲ್ಲಿ ನೀನು ಯಾವ ಚಿಂತೆಯೂ ಇಲ್ಲದೆ ಸುಖವಾಗಿರುವೆಯಂತೆ. ನಿನಗೆ ಬೇಕಾದ ತಿಂಡಿ ತಿನಿಸು ಬಟ್ಟೆಬರೆ ಎಲ್ಲಾ ನಾನು ಕೊಡುತ್ತೇನೆ. ನನ್ನ ಮಗ ನಿನ್ನನ್ನು ತನ್ನ ಕಣ್ಣುಗೊಂಬೆಯಂತೆ ನೋಡಿಕೊಳ್ಳುತ್ತಾನೆ. ಅವನೂ ಕೂಡಾ ನಿನ್ನ ಹಾಗೇ ಸುಂದರನಾಗಿದ್ದಾನೆ, ತರುಣನಾಗಿದ್ದಾನೆ. ನಿನಗೆ ಎಲ್ಲಾ ರೀತಿಯಿಂದಲೂ ಅನುರೂಪನಾಗಿದ್ದಾನೆ."

"ನಡೆ ಅಜ್ಜಿ, ನಾನು ಬರುತ್ತೇನೆ." ಎಂದಳು ಮುಕ್ತಾ.

ಆಕೆ ಮೇಲಕ್ಕೆದ್ದು ಮುದುಕಿಯ ಜೊತೆಯಲ್ಲಿ ಅವಳ ಮನೆಗೆ ನಡೆದಳು.

ರತ್ನಾವತಿಯೆಂದು ಹೆಸರು ಆ ಮುದುಕಿಗೆ. ಅನಾಥ ತರುಣಿಯರನ್ನು ಕೂಡಿಸಿ ಅವರಿಗೆ ಗಾಯನ ನರ್ತನಗಳನ್ನು ಕಲಿಸಿ ಧನಿಕರು ಮತ್ತು ಸರದಾರರ ಭವನಗಳಲ್ಲಿ ನಡೆಯುವ ಉತ್ಸವಗಳ ಕಾಲಕ್ಕೆ ಕಲಾಪ್ರದರ್ಶನ ಮಾಡಲು ಕಳಿಸುವುದೇ ಆ ಮುದುಕಿಯ ಉದ್ಯೋಗವಾಗಿತ್ತು.

ಮುಕ್ತಾ ಅತ್ಯಂತ ರೂಪವತಿಯಾದ ಯುವತಿಯಾಗುವಳೆಂಬುದನ್ನು ಗ್ರಹಿಸಿದ ರತ್ನಾವತಿ ಒಂದು ವರ್ಷದ ವರೆಗೂ ಶ್ರಮ ವಹಿಸಿ ಅವಳಿಗೆ ಸಂಗೀತ ನೃತ್ಯಗಳ ಶಿಕ್ಷಣ ಕೊಡಿಸಿದಳು. ಮೃದಂಗದ ತಾಳಕ್ಕೆ ಸರಿಯಾಗಿ ಮುಕ್ತಾ ಹೆಜ್ಜೆಯೆತ್ತಲು ಅಸಮರ್ಥಳಾದಾಗಲೆಲ್ಲ ರತ್ನಾವತಿ ಚರ್ಮದ ಚಬಕದಿಂದ ಅವಳ ಕಾಲುಗಳಿಗೆ ಏಟು ಹಾಕುವಳು. ರತ್ನಾವತಿಯ ಮಗ, ವಿಕೃತಾಕಾರದವನೂ ನಿರ್ಬಲನೂ ನಪುಂಸಕನೂ ಆಗಿದ್ದ. ಮುಕ್ತಾಗೆ ಅವನಿಂದಾದ ತೊಂದರೆ ಅಪರಿಮಿತವಾದುದು. ಸ್ತ್ರೀಜಾತಿಯ ಬಲೆಗೆ ತನಗಿದ್ದ ತಿರಸ್ಕಾರವನ್ನೆಲ್ಲಾ ಆತ ಮುಕ್ತಾದೇವಿಯ ಮೇಲೆ ಸುರಿಯುತ್ತಿದ್ದ. ಮೂಕಾಭಿನಯದ ಕಲೆಯನ್ನು ಆತ ಸಹಜವಾದ ರೀತಿಯಲ್ಲಿ ಅರಿತುಕೊಂಡಿದ್ದ. ಸಮಸ್ತ ಮಾನವೀಯ ಭಾವನೆಗಳನ್ನು, ವಿಶೇಷವಾಗಿ ರಾಗದ್ವೇಷಾದಿಗಳನ್ನು ಮುಖಭಾವದಿಂದ ವ್ಯಕ್ತಗೊಳಿಸುವ ವಿದ್ಯೆಯನ್ನಾತ ಮುಕ್ತಾಗೆ ಕಲಿಸಿದ. ತನ್ನ ಮನಸ್ಸಿನ ವಿರುದ್ಧವಾಗಿ ಆತ ಈ ಕಲೆಯನ್ನಾಕೆಗೆ ಕಲಿಸುತ್ತಿದ್ದನಾದರೂ ಅವಳ ಪ್ರಗತಿಯನ್ನು ಕಂಡು ಒಳಗೊಳಗೇ ತಳಮಳಿಸುತ್ತಿದ್ದ. ದುಷ್ಟ ಹುಡುಗರು ತಮ್ಮ ಜೊತೆಗಾರರನ್ನು ಪೀಡಿಸುವಂತೆ ಆತ ಮುಕ್ತಾದೇವಿಯನ್ನು ಪೀಡಿಸುತ್ತಿದ್ದ ಅವಳ ಕೆನ್ನೆ ಪರಚುವುದು, ಕೈಬೆರಳು ನೋಯಿಸುವುದು, ಬೆನ್ನಿನಲ್ಲಿ ಸೂಜಿ

ಚುಚ್ಚುವುದು ಇವೇ ಮೊದಲಾದವುಗಳು ಅವನ ಪರಮ ಪ್ರಿಯ ಆಟಗಳಾಗಿದ್ದುವು. ಪುರುಷರ ಮನೋರಂಜನೆಗಾಗಿಯೇ ಮುಕ್ತಾದೇವಿಯನ್ನು ದೇವರು ಸೃಷ್ಟಿಸಿರುವನೆಂದು ಆತ ದೃಢವಾಗಿ ನಂಬಿಕೊಂಡಿದ್ದ.

ಕೆಲವೇ ವರ್ಷಗಳ ಶಿಕ್ಷಣದಿಂದ ಕುಶಲಳಾದ ಗಾಯಕಿಯೂ ನರ್ತಕಿಯೂ ನಟಿಯೂ ಆದಳು ಮುಕ್ತಾ. ತನ್ನ ಒಡೆಯರ ಕಠೋರತೆಯಿಂದ ಅವಳಿಗೇನೂ ಆಶ್ಚರ್ಯವಾಗಿರಲಿಲ್ಲ. ಕಲೆಯನ್ನಭ್ಯಸಿಸಲು ಕಷ್ಟಪಡಬೇಕಾದುದು ಅವಶ್ಯಕವೆಂದೇ ಅವಳು ತಿಳಿದಿದ್ದಳು. ತಕ್ಕಮಟ್ಟಿಗೆ ಗಾಯನ ವಿದ್ಯೆಯಲ್ಲಿಯೂ ಪಾರಂಗತಳಾಗಿದ್ದ ರತ್ನಾವತಿಯ ಬಗೆಗೆ ಮುಕ್ತಾಗೆ ಅಲ್ಪಸ್ವಲ್ಪ ಆದರವೂ ಇರದಿರಲಿಲ್ಲ.

ಮುಕ್ತಾದೇವಿಯ ಶಿಕ್ಷಣ ಮುಂದುವರಿಯುತ್ತಿದ್ದಾಗಲೇ ಅವಳನ್ನು ದಂಡನಾಯಕರೊಬ್ಬರ ಮನೆಯ ಉತ್ಸವದಲ್ಲಿ ನರ್ತಿಸಲು ಕಳಿಸಲಾಯಿತು. ಅವಳ ನೃತ್ಯವನ್ನು ಕಂಡು ಅಲ್ಲಿ ನೆರೆದವರೆಲ್ಲರಿಗೂ ಹರ್ಷವಾಯಿತು. ನಗರದ ಧನಿಕರನೇಕರು ಅವಳ ಪರಿಚಯ ಮಾಡಿಕೊಂಡು ಅವಳನ್ನು ಉದ್ಯಾನಗಳಿಗೆ ಕರೆದೊಯ್ದು ವಿಹರಿಸಿದರು. ಪ್ರೇಮದ ಮೌಲ್ಯವೇನೆಂಬುದನ್ನರಿಯುವ ಮುನ್ನವೆ ಅವಳು ಎಷ್ಟೋ ಜನರಿಗೆ ತನ್ನನ್ನರ್ಪಿಸಿದಳು.

ಒಂದು ರಾತ್ರಿ ನಗರದ ಧನಾಢ್ಯ ಯುವಕರೆದುರು ಅವಳ ನರ್ತನ ನಡೆಯಿತು. ಪ್ರದರ್ಶನ ಮುಗಿದ ಬಳಿಕ ಮಂತ್ರಿಯೊಬ್ಬನ ಮಗ ಅವಳ ಬಳಿ ಬಂದು ಮಧುರಸ್ವರದಲ್ಲಿ ಹೇಳಿದ:

"ಮುಕ್ತಾ, ನಿನ್ನ ನೃತ್ಯವನ್ನು ಕಂಡು ನನಗೆಷ್ಟು ಆನಂದವಾಗಿದೆಯೆಂಬುದನ್ನು ಹೇಗೆ ವರ್ಣಿಸಲಿ ? ನಿನ್ನ ತಲೆಗೂದಲಿನ ಮೇಲಿನ ಚಿನ್ನದ ಸರಪಳಿಯೇ ನಾನಾಗಿದ್ದರೆ, ನಿನ್ನ ಮನೋಹರ ತನುವಿನ ಮೇಲಿನ ವಸ್ತ್ರವೇ ನಾನಾಗಿದ್ದರೆ, ನಿನ್ನ ಸುಂದರ ಚರಣಗಳಲ್ಲಿನ ಚಪ್ಪಲಿಯೇ ನಾನಾಗಿದ್ದರೆ ಎಷ್ಟು ಚೆನ್ನಾಗುತ್ತಿತ್ತು ! ನೀನು ಪಾದುಕೆಯಂತೆ ನನ್ನ ಶರೀರವನ್ನು ಚರಣಗಳಿಂದ ತುಳಿ. ನನ್ನ ಆಲಿಂಗನವೇ ನಿನ್ನ ವಸ್ತ್ರವಾಗಲಿ. ನಡೆ ಸುಂದರಿ, ನನ್ನ ಮನೆಗೆ ನಡೆ. ಇನ್ನುಳಿದುದನ್ನೆಲ್ಲಾ ಮರೆತುಬಿಡು."

ಕಾವ್ಯಮಯವಾದ ಅಂಥ ಭವ್ಯ ಭಾಷೆಯನ್ನು ಮುಕ್ತಾ ಆದುವರೆಗೂ ಕೇಳಿರಲಿಲ್ಲ. ಅವಳು ಚಕಿತಳಾಗಿ ಆ ಯುವಕನನ್ನೇ ನಿಟ್ಟಿಸಿ ನೋಡಿದಳು.

ಆತ ಸ್ಫುರದ್ರೂಪಿಯೆಂಬುದರಲ್ಲಿ ಸಂಶಯವಿರಲಿಲ್ಲ. ಇದ್ದಕ್ಕಿದ್ದಂತೆಯೆ ಅವಳ ಹಣೆಯ ಮೇಲೆ ಬೆವರೂರಿತು. ದೇಹಾದ್ಯಂತವೂ ಕಂಪಿಸಿತು. ಕಣ್ಣುಗಳೆದುರು ನೋಡ ಕವಿದಂತಾಯಿತು. ಇದೆಲ್ಲವೂ ಯಾವುದರ ಲಕ್ಷಣವೋ ? ಎಂದು ಕೊಳ್ಳುತ್ತಾ ಆಕೆ ಒಂದು ನಿಟ್ಟುಸಿರು ಬಿಟ್ಟು ಹೇಳಿದಳು:

"ನಾನು ನಿನ್ನ ಜೊತೆಗೆ ಬರಲಾರೆ ಯುವಕ !"

"ಯಾಕೆ ಸುಂದರೀ ? ಯಾಕೆ ಬರಲಾರೆ ?"

"ಯಾಕೋ. ಅಂತೂ ನನಗೆ ಮನಸ್ಸಿಲ್ಲ."

"ನನ್ನ ಮನೆಯೆಂದರೆ ಭೂಲೋಕದ ನಂದನವನದ ಹಾಗಿದೆ. ಸುಖ ಸಂಪತ್ತು ವಿಲಾಸ ವೈಭವ ಯಾವುದಕ್ಕೂ ಕೊರತೆಯಿಲ್ಲ. ನನ್ನ ತಂದೆಯವ ರಿಗೂ ನನ್ನ ಮೇಲೆ ಬಹಳ ಪ್ರೇಮ. ನನ್ನ ಸುಖಕ್ಕೆ ಅವರೂ ಅಡ್ಡ ಬರುವು ದಿಲ್ಲ. ಮುಕ್ತಾದೇವಿ, ಪ್ರಿಯೆ, ನನ್ನ ಜೊತೆಗೆ ಬಾ. ನಿನ್ನನ್ನು ಮುತ್ತುರತ್ನ ಗಳ ಮಂಚದಲ್ಲಿ ಮುಳುಗಿಸುತ್ತೇನೆ. ಕಾಮನಬಿಲ್ಲಿನ ಉಯ್ಯಾಲೆಯಲ್ಲಿ ನಿನ್ನನ್ನು ತೂಗುತ್ತೇನೆ. ನೀನು ರಾಣಿಯಂತೆ ಸುಖವಾಗಿ ಜೀವಿಸಬಹುದು. ರಾಜನಂತೆ ಅಧಿಕಾರ ನಡಸಬಹುದು."

"ಉಹೂಂ. ಅದಾವುದರಲ್ಲೂ ನನಗೆ ಮನಸ್ಸಿಲ್ಲ."

ಯುವಕನ ಕಾತರ, ಪ್ರೇಮಪೂರಿತ ಮಾತು ಎಲ್ಲ ವ್ಯರ್ಥವಾಯಿತು ಮೋಹವನ್ನು ಅಂಕೆಯಲ್ಲಿಟ್ಟುಕೊಳ್ಳಲಾರದೆ ಆತ ಮುಕ್ತಾದೇವಿಯನ್ನು ಬಲ ವಂತದಿಂದ ಆಲಿಂಗಿಸಿಕೊಂಡ. ಒಡನೆಯೇ ಆಕೆ ಕಠೋರವಾದ ರೀತಿಯಲ್ಲಿ ಆವನನ್ನು ದೂರಗೊಳಿಸಿಡಳು. ಮಂತ್ರಿಪುತ್ರ ಮೋಹಾಂಧನಾಗಿ ಕಂಬನಿ ಗರೆಯತೊಡಗಿದ. ಆದರಿಂದಲೂ ಮುಕ್ತಾ ವಿಚಲಿತಳಾಗಲಿಲ್ಲ. ಅವಳ ಹೃದಯದಲ್ಲಿ ನವೀನವಾದೊಂದು ಅಜ್ಞಾತಭಾವ ಜಾಗ್ರತವಾಗಿತ್ತು. ಅದೇ ನೆಂಬುದನ್ನು ಆವಳೇ ಅರಿಯದವಳಾಗಿದ್ದಳು.

ನರ್ತನ ಕೂಟಕ್ಕೆ ಆಗಮಿಸಿದ್ದ ಅನೇಕ ಅತಿಥಿಗಳಿಗೆ ಮುಕ್ತಾದೇವಿಯ ನಡವಳಿಕೆಯೆ ಅರ್ಥವಾಗಲಿಲ್ಲ. "ಹೀಗೇಕೆ ಮಾಡುತ್ತಿದ್ದಾಳೆ ಈ ಹುಡುಗಿ ? ಮಂತ್ರಿಪುತ್ರನ ಕೃಪಾ ಕಟಾಕ್ಷಕ್ಕೆ ಪಾತ್ರಳಾಗುವದೆಂದರೇನು ಸಾಧಾರಣ ಮಾತೇ ? ಆತ ಧನಿಕ, ಯುವಕ, ಸುಂದರರೂಪಿ. ಇವಳಾದರೋ ಒಬ್ಬ ಸಾಮಾನ್ಯ ನರ್ತಕಿ. ಏನು ಇವಳ ಅಹಂಕಾರ !" ಎಂದು ಮುಂತಾಗಿ

ಅವರು ಆಡಿಕೊಂಡರು.

ಮಂತ್ರಿಪುತ್ರ ಶೋಕಿಸುತ್ತಾ ಮನೆಗೆ ಹೋದ. ರಾತ್ರೆಯಿಡೀ ಅವನಿಗೆ ನಿದ್ರೆ ಬರಲಿಲ್ಲ. ಬೆಳಗಾಗುತ್ತಲೂ ಆತ ಮುಕ್ತಾದೇವಿಯ ನಿವಾಸಸ್ಥಾನಕ್ಕೆ ಹೋಗಿ, ಕೆಲಹೊತ್ತು ಕುಳಿತಿದ್ದು ಅವಳನ್ನು ಕಾಣಲು ಯತ್ನಿಸಿ ನಿರಾಶನಾಗಿ ಹಿಂದಿರುಗಿದ. ವ್ಯಸನಾಕ್ರಾಂತಳೂ ಭಯಭೀತಳೂ ಆಗಿದ್ದ ಮುಕ್ತಾ ಅವನಿಂದ ದೂರದಲ್ಲಿಯೆ ಇದ್ದುಬಿಟ್ಟಳು. ಅವಳಿಗೂ ಸಂಕಟವಾಗುತ್ತಿತ್ತು. ಆ ಸಂಕಟದ ಕಾರಣ ಮಾತ್ರ ಅರ್ಥವಾಗಿರಲಿಲ್ಲ. ತಾನು ಹೀಗೆ ಬದಲಾಗಲು ಉದಾಸೀನಳಾಗಲು ಕಾರಣವೇನಿರಬಹುದೆಂದು ಅವಳು ತನ್ನನ್ನು ತಾನೇ ಕೇಳಿಕೊಂಡಳು. ತನ್ನೆಲ್ಲ ಪ್ರಿಯಕರರ ಬಗೆಗೂ ಅವಳಿಗೆ ಹೇಸಿಕೆಯೆನಿಸತೊಡಗಿತ್ತು. ಬೆಳಕಿನಲ್ಲಿ ಕಾಣಿಸಿಕೊಳ್ಳುವುದೂ ಅವಳಿಗೆ ಬೇಡವಾಗಿತ್ತು. ಹಗಲೆಲ್ಲಾ ಅವಳು ತನ್ನ ಹಾಸುಗೆಯ ಮೇಲೆ ಬಿದ್ದುಕೊಂಡು ತಲೆದಿಂಬಿನಲ್ಲಿ ಮುಖ ಮುಚ್ಚಿ ರೋಧಿಸುತ್ತಿದ್ದಳು.

ರತ್ನಾವತಿ ಸಂತುಷ್ಟಳಾಗುವಷ್ಟು ಹಣ ಕೊಟ್ಟು ಅವಳನ್ನೊಲಿಸಿಕೊಂಡು ಮಂತ್ರಿಪುತ್ರ ಮುಕ್ತಾದೇವಿಯ ಸಂಗಸುಖ ದೊರಕಿಸಲು ಯತ್ನಿಸಿದ. ರತ್ನಾವತಿಯೂ ನಯವಿನಯಗಳಿಂದ ಮುಕ್ತಾದೇವಿಯ ಮನಸ್ಸನ್ನು ಮಂತ್ರಿಪುತ್ರನತ್ತ ತಿರುಗಿಸಲು ಯತ್ನಿಸಿ ಹತಾಶಳಾದಳು. ಯಾರು ಎಷ್ಟು ಪ್ರಯತ್ನಪಟ್ಟರೂ ಮುಕ್ತಾ ತನ್ನ ಹಟ ತ್ಯಜಿಸಲಿಲ್ಲ.

"ಇಲ್ಲ, ಇಲ್ಲ. ನಾನು ಅವನ ಸಂಗ ಮಾಡುವುದಿಲ್ಲ." ಎಂಬುದೇ ಅವಳ ಪಲ್ಲವಿಯಾಯಿತು.

"ಯಾಕೆ ? ಅವನಿಗೇನಾಗಿದೆ ? ಬೀದಿಯ ಹುಡುಗರಿಗೆಲ್ಲಾ ದೇಹವೊಪ್ಪಿಸಿದ ನಾಯಿ ನೀನು. ಇಂಥಾ ಶ್ರೀಮಂತ ಮಂತ್ರಿಪುತ್ರ ತಾನಾಗಿ ಪ್ರೀತಿಯಿಂದ ಕರೆಯುತ್ತಿರುವಾಗ ನಿರಾಕರಿಸಿದ ಅರ್ಥವೇನು ? ಅವನನ್ನು ಕರೆದುಕೊಳ್ಳಲು ಒಪ್ಪಿದೆಯೇ ಒಳ್ಳೆಯದು. ಇಲ್ಲವಾದರೆ ನಿನ್ನನ್ನು ಚಾವಟಿಯಿಂದ ಹೊಡೆಯುತ್ತೇನೆ." ಎಂದು ರತ್ನಾವತಿ ಗದರಿಸಿದಳು.

ಆಗಲೂ ಮುಕ್ತಾದೇವಿ ತನ್ನ ಕೋಣೆಯನ್ನು ಬಿಟ್ಟೇಳಲಿಲ್ಲ. ಹದಿನೈದು ದಿನಗಳ ವರೆಗೆ ಹಾಗೆಯೇ ಬಿದ್ದುಕೊಂಡಿದ್ದ ಬಳಿಕ ತಾನು ಮಂತ್ರಿಪುತ್ರನಲ್ಲಿ ಅನುರಕ್ತಳಾಗಿರುವ ವಿಚಾರ ಅವಳಿಗರಿವಾಯಿತು. ಆ ದಿನ ಅವಳಾಗಿಯೇ

ಎದ್ದು ಮೈಗೆ ಸುಗಂಧ ದ್ರವ್ಯಗಳನ್ನು ಪೂಸಿಕೊಂಡು ಸ್ನಾನಮಾಡಿ ಸುಂದರ ವಸ್ತ್ರಗಳನ್ನು ಧರಿಸಿದಳು.

"ಈಗಲಾದರೂ ನಿನ್ನ ಹಟ ಬಿಟ್ಟು ನಿನ್ನ ಪ್ರಿಯಕರನಲ್ಲಿಗೆ ಹೋಗುವಿಯಾ ?" ಎಂದಳು ರತ್ನಾವತಿ.

"ಹೋಗುತ್ತೇನೆ ಅಜ್ಜಿ, ಅವರಿಗೆ ಹೇಳಿ ಕಳಿಸು."

ಮಂತ್ರಿಪುತ್ರ ತುಂಬಾ ಸಂಭ್ರಮದಿಂದ ರಥಗಾಡಿ ಹೂಡಿಕೊಂಡು ಬಂದು ಅವಳನ್ನು ತನ್ನ ಮನೆಗೆ ಕರೆದೊಯ್ದ. ಅಲ್ಲಿ ಅವಳ ಜೀವನ ಒಂದು ಸ್ವಪ್ನದಂತೆ ನಡೆಯತೊಡಗಿತು. ಅವರಿಬ್ಬರೂ ಇದಿರುಬದುರಾಗಿ ಕುಳಿತುಕೊಂಡು ಪರಸ್ಪರರನ್ನು ದಿಟ್ಟಿಸುತ್ತಾ ಎಳೆಯ ಮಕ್ಕಳಂತೆ ಹುಚ್ಚುಹುಚ್ಚಾಗಿ ಹರಟುತ್ತಾ ಆನಂದದಿಂದ ಕಾಲ ಕಳೆದರು. ಸಂಧ್ಯಾಕಾಲದ ಉಪವನಗಳಲ್ಲಿ ವಿಹರಿಸುತ್ತಾ ಸರೋವರದ ದೋಣಿಗಳಲ್ಲಿ ಕುಳಿತು ಸುಖಿಸುವರು. ಒಂದೊಂದು ದಿನ ಬೆಳಿಗ್ಗೆ ಬೇಗನೆದ್ದು ಹೂವುಗಳನ್ನು ಸಂಗ್ರಹಿಸಲೆಂದು ಗುಡ್ಡಗಳನ್ನೇರಿ ಹೋಗುವರು. ಒಂದೇ ತಳಿಗೆಯಲ್ಲಿ ಊಟ ಮಾಡುವರು. ಒಂದೇ ಬಟ್ಟಲಿನಿಂದ ನೀರು ಕುಡಿಯುವರು. ಆಗಾಗ ಮೋಜಿಗೆಂದು ಮುಕ್ತಾ ಹಣ್ಣುಗಳನ್ನು ತನ್ನ ತುಟಿಗಳ ಮಧ್ಯೆ ಇರಿಸಿಕೊಳ್ಳುವಳು. ಮಂತ್ರಿಪುತ್ರ ತನ್ನ ತುಟಿಗಳಿಂದ ಅವುಗಳನ್ನೆತ್ತಿಕೊಳ್ಳುವನು.

ತಿಂಗಳು ಕಳೆಯಿತು, ಎರಡು ತಿಂಗಳು ಕಳೆದುವು. ಮುಕ್ತಾ ಹಿಂದಿರುಗಿ ಬರಲಿಲ್ಲವೆಂದು ಕೋಪಿಸಿಕೊಂಡ ರತ್ನಾವತಿ ಮಂತ್ರಿಪುತ್ರನ ಮನೆಗೆ ಬಂದು ಹೇಳಿದಳು:

"ಒಂದೆರಡು ದಿನಗಳ ಮಟ್ಟಿಗೆಂದು ನನ್ನ ಮಗಳನ್ನು ಕಳಿಸಿಕೊಟ್ಟರೆ ನೀನು ಇವಳನ್ನು ಮದುವೆಯ ಹೆಂಡತಿಯಂತೆ ಇಲ್ಲೇ ಇಟ್ಟುಕೊಂಡು ಬಿಟ್ಟಿರುವಿಯಲ್ಲಾ ?"

ಮಂತ್ರಿಪುತ್ರ ನಗುನಗುತ್ತ ಹೇಳಿದ:

"ಮದುವೆಯ ಹೆಂಡತಿಗಿಂತಲೂ ಹೆಚ್ಚಿನವಳು ಮುಕ್ತಾ. ಇವಳನ್ನು ಬಿಟ್ಟು ನಾನು ಬದುಕಿರುವದೇ ಸಾಧ್ಯವಿಲ್ಲ."

"ಇವಳು ನಿನ್ನ ಹತ್ತಿರವೇ ಇದ್ದರೆ ನಾನು ಬದುಕುವುದು ಹೇಗೆ? ಗಾಯನ ನರ್ತನ ಮಾಡಿ ಇವಳು ಗಳಿಸಿ ತರುತ್ತಿದ್ದುದೆಲ್ಲಾ ನಿಂತುಹೋಗಿದೆ."

ಎರಡು ಸಾವಿರ ಮುದ್ರೆಗಳನ್ನು ಕೊಟ್ಟು ಮುದುಕಿಯನ್ನಟ್ಟಿದ ಮಂತ್ರಿ ಪುತ್ರ. ಒಂದು ವಾರ ಸುಮ್ಮನಿದ್ದು ಅವಳು ಮತ್ತೆ ಬಂದು ಹಣಕ್ಕಾಗಿ ಪೀಡಿಸ ಹತ್ತಿದಳು.

"ಇವಳನ್ನು ಹೆತ್ತು ಹೊತ್ತು ಸಾಕಿ ಸಲಹಿ ಸಾವಿರಾರು ಹಣ ಖರ್ಚು ಮಾಡಿ ಕಲಾವಿದಳನ್ನಾಗಿ ಮಾಡಿದ್ದೇನೆ. ನನ್ನ ಮಗಳನ್ನು ನೀನು ಅಪಹರಿಸ ಬಾರದು."

"ಇವಳು ನಿನ್ನ ಮಗಳೆಂದಾದರೂ ಹೇಗೆ ಹೇಳುವದು ?"

"ಅಯ್ಯೋ ದೇವರೆ! ನಾನೇನು ಸುಳ್ಳು ಹೇಳುತ್ತೇನೆಯೆ ? ಮುಕ್ತಾ ನನ್ನ ಹೊಟ್ಟೆಯಲ್ಲೇ ಜನಿಸಿದ ಕಂದ. ನನ್ನ ಪ್ರೇಮದ ಪುತ್ಥಳಿ. ನನ್ನ ಕಣ್ಣ ಗೊಂಬೆ."

"ಹೌದೇನೇ ಮುಕ್ತಾ, ನೀನು ಇವಳ ಮಗಳೇನು ?"

"ಹೊಟ್ಟೆಯಿಂದ ಹುಟ್ಟಿದ ಮಗಳಲ್ಲವಾದರೂ ಸಾಕುಮಗಳು ಅನ್ನುವ ದೇನೋ ನಿಜ. ನನ್ನ ತಂದೆ ತಾಯಿಗಳಿಗೆ ನಾನು ಬೇಡವಾಗಿದ್ದಾಗ ಈಕೆ ನನ್ನನ್ನು ಕರೆದೊಯ್ದು ವಿದ್ಯೆ ಕಲಿಸಿ ಉಪಕಾರ ಮಾಡಿದ್ದುಂಟು."

"ಆ ಉಪಕಾರಕ್ಕೆ ಪ್ರತಿಯಾಗಿ ಮುಕ್ತಾ ಇದುವರೆಗೆ ನಿನಗೆ ಬೇಕಾದಷ್ಟು ಪ್ರತ್ಯುಪಕಾರ ಮಾಡಿದ್ದಾಳೆ. ಇವಳು ಸಂಪಾದಿಸಿದ ಹಣದಿಂದಲೇ ನಿನ್ನ ಪೆಟ್ಟಿಗೆ ತುಂಬಿರಲು ಸಾಕು. ನಾನೂ ಕೂಡಾ ನಿನಗೆ ಅಳತೆಮೀರಿ ಕೊಟ್ಟಿ ದ್ದೇನೆ. ಇನ್ನೂ ಹೆಚ್ಚು ಆಶೆ ಮಾಡಬೇಡ. ಮುಕ್ತಾ ನನ್ನವಳು. ಅವಳು ನನ್ನ ಹತ್ತಿರವೇ ಇರುತ್ತಾಳೆ." ಎಂದ ಮಂತ್ರಿಪುತ್ರ.

"ಹೌದೇನೇ ಮುಕ್ತಾ ? ನೀನು ಇಲ್ಲೇ ಇರುತ್ತೀಯಾ ? ನಿನ್ನ ತಾಯಿ ಯಾದ ನನ್ನ ಮನೆಗೆ ಬರುವುದಿಲ್ಲವೆ ?"

"ಇಲ್ಲ." ಎಂದಳು ಮುಕ್ತಾ.

ರತ್ನಾವತಿ ಭಯಂಕರವಾಗಿ ಕೋಪಿಸಿಕೊಂಡು ಮಂತ್ರಿಪುತ್ರ ಮುಕ್ತಾ ಇಬ್ಬರನ್ನು ಅಶ್ಲೀಲವಾದ ರೀತಿಯಲ್ಲಿ ಬಯ್ಯತೊಡಗಿದಳು. ಸ್ವಭಾವತಃ ಸೌಮ್ಯವಾದಿ ಜೀವಿಯಾಗಿದ್ದ ಮಂತ್ರಿಪುತ್ರನಿಗೂ ಸಿಟ್ಟು ಬಂತು. ಅವಳನ್ನು ಬಂಧಿಸುವಂತೆ ಆತ ಆಜ್ಞೆ ವಿಧಿಸಿದ. ಆವಳ ಇತರ ಅಪರಾಧಗಳ ವಿವರವೂ ನ್ಯಾಯಾಧೀಶರಿಗೆ ತಿಳಿದುಬಂತು. ಅವರು ಅವಳಿಗೆ ದೇಹಾಂತ ಶಾಸನ

ವಿಧಿಸಿದರು. ಅವಳ ಶವವನ್ನು ಹಿಂಸ್ರ ಪಶುಗಳ ಮುಂದೆ ಬಿಸುಟಲಾಯಿತು.

ಪರಿಶುದ್ಧವಾದ ಅಂತಃಕರಣದಿಂದ ಮಂತ್ರಿಪುತ್ರನನ್ನು ಪ್ರೀತಿಸುತ್ತಿದ್ದಳು ಮುಕ್ತಾ.

"ನಾನು ಯಾವಾಗಲೂ ನಿನ್ನವಳೇ," ಎಂದು ಅವಳು ಬಾರಿಬಾರಿಗೂ ಹೇಳುತ್ತಿದ್ದಳು.

"ನಿನ್ನಂಥ ಇನ್ನೊಬ್ಬ ಸ್ತ್ರೀಯೇ ಇಲ್ಲ" ಎನ್ನುತ್ತಿದ್ದ ಮಂತ್ರಿಪುತ್ರ.

ಆರು ತಿಂಗಳುಗಳ ಕಾಲ ಬದುಕಿದ್ದ ಈ ಮೋಹ ಒಂದು ದಿನ ಹಠಾತ್ತನೆ ಸತ್ತುಬಿತ್ತು. ಅನ್ಯ ಸ್ತ್ರೀಯರಲ್ಲಿ ಆಸಕ್ತನಾಗಿ ಮಂತ್ರಿಪುತ್ರ ಮುಕ್ತಾ ದೇವಿಯನ್ನು ಕಡೆಗಣಿಸಿದ. ಮತ್ತೆ ಮುಕ್ತಾ ಏಕಾಂತಪ್ರೇಮಿಯಾದಳು. ಜಗತ್ತೆಲ್ಲವೂ ಶೂನ್ಯವಾಗಿ ತೋರಿತು ಅವಳ ಕಣ್ಣಿಗೆ. ಮಂತ್ರಿಪುತ್ರನ ನಡತೆಯೆ ಅವಳಿಗರ್ಥವಾಗಲಿಲ್ಲ.

"ಏನಾಯಿತು? ಇದ್ದಕ್ಕಿದ್ದ ಹಾಗೇ ಆತ ಬದಲಾದನಲ್ಲ! ಎಲ್ಲಾ ಗಂಡಸರ ಹಾದಿಯನ್ನೇ ಅವನೂ ಹಿಡಿದ. ಅವನ ಪ್ರೇಮ ಶಾಶ್ವತವಾಗಿ ಉಳಿಯಲಿಲ್ಲ."

ಅವಳು ಮಂತ್ರಿಪುತ್ರನ ಭವನವನ್ನು ತ್ಯಜಿಸಿ ಹೊರಟು ಬೇರೊಂದು ಮನೆ ಹಿಡಿದು ನೆಲಸಿದಳು. ಆಗಲೂ ಅವನನ್ನು ಮರೆಯುವುದು ಅಸಾಧ್ಯವೆಂದೇ ಅವಳಿಗನ್ನಿಸಿತು.

ಹಲವು ತಿಂಗಳುಗಳ ಕಾಲ ಅವನ ವಿರಹದಿಂದ ತಪಿಸುತ್ತಿದ್ದು ಅನಂತರ ನಿಧಾನವಾಗಿ ಚೇತರಿಸಿಕೊಂಡು ಅವಳು ತನ್ನ ಮೊದಲಿನ ಜೀವನಕ್ರಮವನ್ನೇ ಮುಂದುವರಿಸಿದಳು. ಯಾವ ಪುರುಷನಿಗೂ ತನ್ನ ದೇಹವನ್ನರ್ಪಿಸದೆ ಸಿಕ್ಕಿದಷ್ಟು ಸುಖವನ್ನು ಸೂರೆಗೊಳ್ಳುವುದೇ ಜಾಣತನವೆಂದು ಯೋಚಿಸಿ ಅವಳು ಬಲು ಎಚ್ಚರಿಕೆಯಿಂದ ವ್ಯವಹರಿಸತೊಡಗಿದಳು. ಕೆಲ ದಿನಗಳಲ್ಲಿಯೇ ಕಲ್ಯಾಣದ ವಿಲಾಸೀ ಪುರುಷರೆಲ್ಲ ಅವಳ ಸುತ್ತ ಭ್ರಮರಗಳಂತೆ ಸುಳಿಯತೊಡಗಿದರು. ಯಾರನ್ನೂ ಅಸಂತುಷ್ಟಗೊಳಿಸದೆ ಎಲ್ಲರನ್ನೂ ಏಕಪ್ರಕಾರವಾಗಿ ತೃಪ್ತಿಗೊಳಿಸುವುದರಲ್ಲಿ ಅವಳು ಪಳಗಿದಳು. ಧಾರ್ಮಿಕ ಉತ್ಸವಗಳ ಕಾಲಕ್ಕೆ ದೇವಸ್ಥಾನಗಳಲ್ಲಿ ನರ್ತಿಸುತ್ತಿದ್ದ ನರ್ತಕಿಯರ ಗುಂಪಿನಲ್ಲೂ ಅವಳು ಸೇರಿಕೊಂಡಳು. ಪ್ರಿಯಕರರ ಜೊತೆಗೆ ದೋಣಿಯಲ್ಲಿ ನಗ್ನರಾಗಿ ಕುಳಿತು ವಿಹರಿ

ಸುತ್ತಿದ್ದ ವೇಶ್ಯೆಯರ ಪಂಕ್ತಿಯಲ್ಲೂ ಅವಳಿಗೆ ಹೆಸರಾಯಿತು. ಆ ವಿಲಾಸೀ ಪಟ್ಟಣದ ಎಲ್ಲ ಆನಂದೋತ್ಸವಗಳಲ್ಲೂ ಅವಳು ಪ್ರಮುಖ ಭಾಗ ವಹಿಸ ತೊಡಗಿದಳು.

ಅವಳು ನಾಟಕಗಳಲ್ಲಿ ಪಾತ್ರ ವಹಿಸಿದರೆ ಅವಳ ಕೀರ್ತಿ ಇನ್ನೂ ಅಧಿಕ ವಾಗುವುದೆಂದು ಪ್ರಣಯಿಗಳು ಸೂಚಿಸಿದರು. ಮುಕ್ತಾದೇವಿ ಕೊಂಚವೂ ಹಿಂದುಮುಂದು ನೋಡದೆ ನಾಟಕಗಳಲ್ಲಿ, ವಿಶೇಷವಾಗಿ ದುಃಖಾಂತ ನಾಟಕ ಗಳಲ್ಲಿ ನಾಯಿಕೆಯಾಗಿ ಅಭಿನಯಿಸತೊಡಗಿದಳು. ಆರಂಭದಲ್ಲಿ ಆಕೆಗೆ ಅಷ್ಟೊಂದು ಸಫಲತೆ ದೊರೆಯಲಿಲ್ಲ. ಆ ಕ್ಷೇತ್ರದಲ್ಲಿ ಅವಳಿಗೆ ಅನುಭವವಿಲ್ಲ ದಿರುವುದೇ ಅದಕ್ಕೆ ಕಾರಣವಾಗಿತ್ತು. ಆದರೆ, ಒಂದೆರಡು ತಿಂಗಳು ಕಳೆಯು ವಷ್ಟರಲ್ಲಿಯೇ ಅವಳು ಆ ಕ್ಷೇತ್ರದಲ್ಲಿಯೂ ಅನುಭವ ಗಳಿಸಿಕೊಂಡು ಆಕಾಲದ ಎಲ್ಲ ನಟಿಯರನ್ನು ಹಿಂದೆ ಹಾಕುವಷ್ಟು ಮಟ್ಟಿಗೆ ಪ್ರಸಿದ್ಧಿಪಡೆದಳು. ಅವಳ ಮಾದಕ ಸೌಂದರ್ಯದಿಂದ ನಗರವೆಲ್ಲವೂ ಮುಗ್ಧವಾಯಿತು. ಅವಳ ಅಭಿ ನಯವನ್ನು ನೋಡುವುದಕ್ಕಾಗಿ ದೂರ ದೂರದ ನಗರಗಳಿಂದಲೂ ಹಳ್ಳಿಗಳಿಂ ದಲೂ ರಸಿಕರ ತಂಡಗಳು ಬರತೊಡಗಿದವು. ನಾಗರಿಕ ಜೀವನದಲ್ಲಿ ಮನ್ನ ಣೆಯ ಸ್ಥಾನ ಗಳಿಸಿದ್ದ ದೊಡ್ಡವರೆಲ್ಲರೂ ಅವಳ ಕಲಾಚಾತುರ್ಯವನ್ನು ಮುಕ್ತಕಂಠದಿಂದ ಪ್ರಶಂಸಿಸಿದರು. ಒಂದು ದಿನ ಮಹಾರಾಜನೆದುರಿಗೂ ಅವಳ ನಾಟಕ ಪ್ರದರ್ಶಿತವಾಯಿತು. ಮಂತ್ರಿಪುತ್ರನ ಹೃದಯವನ್ನು ಸೆರೆ ಹಿಡಿದಿದ್ದ ಮುಕ್ತಾ ಮಹಾರಾಜನ ರಸಿಕ ಮನಸ್ಸನ್ನೂ ಮರುಳುಗೊಳಿಸುವುದು ಕಷ್ಟವಾಗಲಿಲ್ಲ. ಧರ್ಮಭೀರುವಾಗಿದ್ದ ಮಹಾರಾಜ ಅವಳನ್ನು ಸಾರ್ವಜನಿಕ ರೀತಿಯಿಂದ ಅಂತಃಪುರಕ್ಕೆ ಬರಮಾಡಿಕೊಳ್ಳಲು ಹಿಂಜರಿದನಾದರೂ ರಾತ್ರಿ ಯಾರಿಗೂ ತಿಳಿಯದಂತೆ ವೇಷ ಬದಲಿಸಿಕೊಂಡು ಅವಳ ಮನೆಗೇ ಹೋಗಿ ಅವಳ ಸೌಂದರ್ಯದ ಸವಿಯನ್ನುಂಡು ಬರಲು ತಪ್ಪಲಿಲ್ಲ. ಆಸ್ಥಾನಕವಿಗಳ ನೇಕರು ಅವಳ ಬಗೆಗೆ ಕಾವ್ಯಗಳನ್ನು ರಚಿಸಿ ಅರಸನೆದುರು ಹಾಡಿ ಅವನ ಮೆಚ್ಚುಗೆ ಗಳಿಸಿಕೊಂಡರು.

ಆದರೆ ಶೈವ ಪಂಥೀಯರಿಗೆ ಮಾತ್ರ ಅವಳ ವರ್ತನೆ ತುಚ್ಛವಾಗಿ ತೋರಿತು. ಅವಳನ್ನು ನೋಡುತ್ತಲೂ ಅವರು ಜುಗುಪ್ಸೆಯಿಂದ ಮೊಗ ತಿರು ಗಿಸುತ್ತಿದ್ದರು. ದಾರ್ಶನಿಕರೂ ಅವಳನ್ನು ತಿರಸ್ಕಾರದಿಂದ ಕಾಣುತ್ತಿದ್ದರು.

ಮುಕ್ತಾ ಅದಾವುದನ್ನೂ ಗಮನಿಸದೆ ವಿಲಾಸ ವೈಭವಗಳ ಹಾದಿಯಲ್ಲಿಯೇ ಮುನ್ನಡೆದಳು. ಅತುಲ ಧನರಾಶಿ ಅವಳದಾಯಿತು. ಈ ಎಲ್ಲ ಪ್ರಶಂಸೆ ಮತ್ತು ಯಶಸ್ಸುಗಳಿಂದ ಮುಕ್ತಾದೇವಿಯ ಮನಸ್ಸಿನ ಮೇಲೂ ಪರಿಣಾಮ ವಾಗದಿರಲಿಲ್ಲ. ಲೌಕಿಕ ಕೀರ್ತಿ ಮತ್ತು ಸೌಖ್ಯಗಳೇ ಅವಳ ಸರ್ವಸ್ವವಾದಂ ತಾಯಿತು. ಅವಳು ತನ್ನನ್ನು ತಾನೇ ಪ್ರೀತಿಸತೊಡಗಿದಳು.

ಅವಳ ಹತ್ತಿರ ಬರುವವರಲ್ಲಿ ಮಾಧವರಸನೂ ಒಬ್ಬನಾಗಿದ್ದ. ತಾನು ದಾರ್ಶನಿಕನೆಂದು ಆತ ಜಂಬ ಕೊಚ್ಚಿಕೊಳ್ಳುತ್ತಿದ್ದನಾದರೂ ಮುಕ್ತಾದೇವಿಯ ಮೋಹಜಾಲದಿಂದ ತಪ್ಪಿಸಿಕೊಳ್ಳಲು ಮಾತ್ರ ಆತ ಸಮರ್ಥನಾಗಿರಲಿಲ್ಲ. ಅವನು ಸಿರಿವಂತನಾಗಿದ್ದ, ಸಿರಿವಂತನಾಗಿದ್ದರೂ ಬುದ್ಧಿವಂತನಾಗಿದ್ದ, ಬುದ್ಧಿ ವಂತನಾಗಿಯೂ ಸಭ್ಯನಾಗಿದ್ದ. ಅಷ್ಟು ಬುದ್ಧಿವಂತನಾಗಿದ್ದರೂ ಆತ ಮುಕ್ತಾದೇವಿಯನ್ನು ತನ್ನ ಕಡೆ ಆಕರ್ಷಿಸಿಕೊಳ್ಳಲು ಶಕ್ತನಾಗಲಿಲ್ಲ. ಮುಕ್ತಾ ಅವನನ್ನು ಪ್ರೀತಿಸಲಿಲ್ಲ. ಆವನ ಚತುರೋಕ್ತಿಗಳೆಂದರೆ ಅವಳಿಗೆ ಬೇಸರು ಬರುತ್ತಿತ್ತು. ಆತನಾದರೋ ತನ್ನ ವಾಗ್ಬಾಣಗಳಿಂದ ಮುಕ್ತಾದೇವಿಯ ಹೃದಯಕ್ಕೆ ಮತ್ತೆ ಮತ್ತೆ ಆಘಾತ ಮಾಡುತ್ತಿದ್ದ. ಅವನು ಯಾವ ವಸ್ತು ವನ್ನೂ ನಂಬುತ್ತಿರಲಿಲ್ಲ. ಮುಕ್ತಾ ಎಲ್ಲವನ್ನೂ ನಂಬುತ್ತಿದ್ದಳು. ಈಶ್ವರೀಯ ಶಕ್ತಿ, ಮಾಯೆಯ ಶಕ್ತಿ, ಭಾಗ್ಯದ ಶಕ್ತಿ, ತಂತ್ರ ಮಂತ್ರಗಳ ಶಕ್ತಿ, ದೇವರ ನ್ಯಾಯ ಇವುಗಳೆಲ್ಲವನ್ನೂ ಆವಳು ನಂಬುತ್ತಿದ್ದಳು. ಪರಮಾತ್ಮನಲ್ಲಿಯೂ ಆತನ ಹಿರಿಯ ಭಕ್ತರಾದ ಧರ್ಮಗುರುಗಳಲ್ಲಿಯೂ ಆವಳಿಗೆ ವಿಶ್ವಾಸವಿತ್ತು. ಕಪ್ಪು ಭೂತಗಳು ರಸ್ತೆಯಲ್ಲಿ ಹಾದು ಹೋಗುವಾಗ ನಾಯಿಗಳು ಬಗಳುತ್ತ ವೆಂಬ ಕಲ್ಪನೆಯಲ್ಲೂ ಅವಳಿಗೆ ವಿಶ್ವಾಸವಿತ್ತು. ಯಾವುದೋ ಅಜ್ಞಾತವಸ್ತು ವಿಗಾಗಿ ಅವಳು ಹಂಬಲಿಸುತ್ತಿದ್ದಳು. ಸಂಜ್ಞಾವಿಹೀನ ಜೀವಗಳ ಉಪಾಸನೆ ನಡಸುತ್ತಿದ್ದಳು. ಭವಿಷ್ಯದ ಬಗೆಗೆ ಅವಳು ಯಾವಾಗಲೂ ಭಯಪಡುತ್ತಿದ್ದು ಅದರ ಬಗೆಗೆ ಮೊದಲೇ ತಿಳಿದುಕೊಳ್ಳಲು ಹಾತೊರೆಯುತ್ತಿದ್ದಳು. ತಾಂತ್ರಿಕರು, ಮಾಂತ್ರಿಕರು, ಜ್ಯೋತಿಷಿಗಳನ್ನು ಮತ್ತೆ ಮತ್ತೆ ಬರಮಾಡಿಕೊಂಡು ನನ್ನ ಭಾವೀ ಜೀವನದ ವಿಚಾರವಾಗಿ ಅವರೊಡನೆ ಚರ್ಚಿಸುತ್ತಿದ್ದಳು. ಸಾವಿನ ಸ್ಮರಣೆ ಬರುತ್ತಲೂ ಅವಳ ಶರೀರ ಕಂಪಿಸುತ್ತಿತ್ತು. ಎಲ್ಲೆಡೆಯಲ್ಲೂ ಅವಳಿಗೆ ಮೃತ್ಯುವಿನ ಛಾಯೆಯೇ ಕಾಣುತ್ತಿತ್ತು. ಸಂತೋಷವನ್ನುಪಭೋಗಿಸುತ್ತಿದ್ದ

ಸಮಯದಲ್ಲೂ ಯಾವುದೋ ಶೀತಲ ಹಸ್ತವೊಂದು ತನ್ನ ಭುಜಗಳತ್ತ ಬರುತ್ತಿದ್ದ ಹಾಗೆ ಅವಳಿಗೆ ಭಾಸವಾಗುತ್ತಿತ್ತು. ಒಡನೆಯೇ ಅವಳ ಮುಖ ಕಳಾಹೀನವಾಗುತ್ತಿತ್ತು.

ಅಂಥ ಸಂದರ್ಭಗಳಲ್ಲಿ ಅವಳನ್ನು ಕಂಡಾಗಲೆಲ್ಲ ಮಾಧವರಸ ಹೇಳುತ್ತಿದ್ದ:

"ಮುಕ್ತಾ, ನೀನು ಅನಗತ್ಯವಾದ ಭೀತಿಯಿಂದ ಕಷ್ಟಪಡುತ್ತೀಯೆ. ನಾವು ಮುದುಕರಾಗಿ, ಬಿಳಿಯ ಕೂದಲು, ಬತ್ತಿದ ಕೆನ್ನೆಗಳಿಂದೊಡಗೂಡಿ ಮಹಾರಾತ್ರಿಯ ಮಡಿಲಲ್ಲಿ ನಿದ್ರಿಸಿದರೂ ಒಂದೇ, ಈ ಪ್ರಕಾಶಮಯ ಆಕಾಶದ ಕೆಳಗೆ ನಗುನಗುತ್ತ ಜೀವಿಸಿದರೂ ಒಂದೇ. ಎರಡಕ್ಕೂ ಒಂದೇ ಅರ್ಥ. ಉದಾಸೀನತೆಯನ್ನು ತೆಗೆದು ಹಾಕು. ಜೀವನದ ಮಧುವನ್ನು ನಾವು ಪಾನ ಮಾಡೋಣ. ಸದಾಕಾಲವೂ ಆನಂದಿತರಾಗಿದ್ದರೆ ನಾವು ಹೆಚ್ಚು ಸಮಯ ಜೀವಿಸಬಹುದು. ಇಂದ್ರಿಯಜನ್ಯ ಜ್ಞಾನವೇ ಎಲ್ಲಾ ಜ್ಞಾನಗಳಲ್ಲೂ ಹೆಚ್ಚಿನದು. ಪ್ರೇಮವೇ ಎಲ್ಲ ವಿದ್ಯೆಗಳಲ್ಲೂ ಮಹತ್ತಾದುದು. ಯಾವುದನ್ನು ನಾವು ಅರಿಯೆವೋ ಅದರ ಬಗ್ಗೆ ಚಿಂತಿಸುವುದು ವ್ಯರ್ಥ. ಅಜ್ಞಾತವಸ್ತುಗಳಿಗಾಗಿ ಅಳುತ್ತ ಕೂಡುವುದರಿಂದೇನು ಪ್ರಯೋಜನ?"

ಮುಕ್ತಾ ರೋಷದಿಂದ ಉತ್ತರವೀಯುತ್ತಿದ್ದಳು:

"ಯಾವುದರ ಆಸೆಯನ್ನೂ ಇಟ್ಟುಕೊಳ್ಳದ, ಯಾವುದರ ಬಗೆಗೂ ಭಯವಿಟ್ಟುಕೊಳ್ಳದ ನಿನ್ನಂಥ ಜನರೆಂದರೆ ನನಗಾಗದು. ನನಗೆ ಜ್ಞಾನ ಬೇಕು, ಬೆಳಕು ಬೇಕು."

ಜೀವನದ ರಹಸ್ಯಗಳನ್ನರಿತುಕೊಳ್ಳುವ ಅಪೇಕ್ಷೆಯಿಂದ ಅವಳು ದರ್ಶನ ಗ್ರಂಥಗಳನ್ನು ತರಿಸಿ ಓದತೊಡಗಿದಳು. ಆದರೆ, ಅವುಗಳಲ್ಲಿನ ಒಂದು ಪುಟವೂ ಅವಳಿಗರ್ಥವಾಗಲಿಲ್ಲ. ಬಾಲ್ಯಾವಸ್ಥೆಯಿಂದ ದೂರ ದೂರ ಬಂದ ಹಾಗೆಲ್ಲಾ ಅವಳು ತನ್ನ ಬಾಲ್ಯದ ಸವಿ ನೆನಪುಗಳಲ್ಲಿಯೆ ಮುಳುಗಿ ಹೋಗತೊಡಗಿದಳು. ಚಿತ್ರ ವಿಚಿತ್ರ ಬಟ್ಟೆ ಧರಿಸಿ ಗಲ್ಲಿಗಳಲ್ಲೂ ಉದ್ಯಾನಗಳಲ್ಲೂ ಸ್ವೇಚ್ಛೆಯಿಂದ ತಿರುಗುತ್ತಿದ್ದುದನ್ನು ನೆನೆದು ದುಃಖಿಸತೊಡಗಿದಳು. ಹಲವು ವರ್ಷಗಳ ಹಿಂದೆ ತೀರಿಕೊಂಡ ತನ್ನ ತಂದೆ ತಾಯಿಗಳ ಬಗೆಗೂ ಅವಳಿಗೆ ಖೇದವೆನಿಸುತ್ತಿತ್ತು. ಕಾಪಾಲಿಯ ಜೊತೆಯಲ್ಲಿ ಶೈವ ಪಂಥೀಯರ ಉತ್ಸವಗಳಲ್ಲಿ

ಭಾಗ ವಹಿಸಿದ ಕಾಲವನ್ನು ನೆನೆದಾಗಲೆಲ್ಲ ಅವಳ ಹೃದಯ ಉದ್ವಿಗ್ನವಾಗುತ್ತಿತ್ತು. ಧರ್ಮಗುರು ತನ್ನನ್ನು ಆಶೀರ್ವದಿಸಿದ್ದು, ಅದೇ ಧರ್ಮದ ದಾರಿಯಲ್ಲಿ ನಡೆಯುವುದಾಗಿ ತಾನು ವಚನವಿತ್ತಿದ್ದುದ್ದು........ ಮುಕ್ತಾ ಉದ್ವೇಗದಿಂದೆದ್ದು ನಗರದ ಹೊರಭಾಗದಲ್ಲಿದ್ದ ಆ ಪಾಳು ದೇವಾಲಯಕ್ಕೆ ಧಾವಿಸುವಳು. ಒಳಗಿನಿಂದ ಭಜನೆಯ ಧ್ವನಿ ಕೇಳಬರುವುದು. ನೂತನ ಚಕ್ರವರ್ತಿಯ ಆಳಿಕೆಯಲ್ಲಿ ಯಾರ ಹೆದರಿಕೆಯೂ ಇಲ್ಲದೆ ಶೈವರು ತಮ್ಮ ಧಾರ್ಮಿಕ ಉತ್ಸವ ನಡಸುತ್ತಿದ್ದರು.

ಆ ಭಜನೆಗಳಲ್ಲಿ ಭಾಗ ವಹಿಸುವುದರಿಂದಲಾದರೂ ತನ್ನ ಹೃದಯಕ್ಕೆ ಶಾಂತಿ ದೊರಕಬಹುದೆಂಬ ಆಶೆಯಿಂದ ಮುಕ್ತಾ ಒಂದು ಸಾಯಂಕಾಲ ಆ ದೇವಾಲಯದಲ್ಲಿ ಪ್ರವೇಶಿಸಿದಳು. ಚಂದ್ರಶಾಲೆಯಲ್ಲಿ ನೂರಾರು ಜನರು ನೆರೆದಿದ್ದರು. ಯಾವುದೋ ಒಂದು ವಿಶೇಷ ಉತ್ಸವ ನಡೆದ ಹಾಗೆ ತೋರುತ್ತಿತ್ತು. ದೇವಾಲಯದಲ್ಲಿ ದೀಪಗಳು ಝುಗಝುಗಿಸುತ್ತಿದ್ದುವು. ಜನರು ಹಾಡುತ್ತಿದ್ದ ಭಜನೆಯಿಂದ ದುಃಖದ ರಾಗ ಹೊರಹೊಮ್ಮುತ್ತಿತ್ತು. ಅದು ಕಿವಿಗೆ ಬೀಳುತ್ತಲೂ ಜೀವನದ ಆನಂದ ಮತ್ತು ಮೃತ್ಯುವಿನ ಭೀತಿ ಎರಡೂ ಅನುಭವವಾದ ಹಾಗಾಯಿತು ಮುಕ್ತಾಗೆ.

ಭಜನೆ ಕೊನೆಗೊಳ್ಳುತ್ತಲೂ ಅವಳು ನೆರೆದಿದ್ದ ಜನರಲ್ಲೊಬ್ಬನನ್ನು ಪ್ರಶ್ನಿಸಿದಳು:

"ಇವತ್ತು ಏನು ವಿಶೇಷ ನಡೆದಿದೆ ?"

ಆತ ಅವಳನ್ನು ಗುರುತಿಸಲಿಲ್ಲವೆಂದೇ ತೋರಿತು. ಎಂತಲೇ ಆತ ಹೇಳಿದ:

"ನಮ್ಮ ಧರ್ಮತತ್ವಗಳಿಗಾಗಿ ಹುತಾತ್ಮನಾದ ಕಾಪಾಲಿಯ ದಿನವನ್ನು ನಾವು ಆಚರಿಸುತ್ತಿದ್ದೇವೆ. ಆತ ಯಾವಾಗಲೂ ಪರಿಶುದ್ಧವಾಗಿ ಜೀವಿಸಿದ್ದ. ಸಾಯುವಾಗಲೂ ತನ್ನ ಶ್ರದ್ಧೆಯನ್ನು ತ್ಯಜಿಸಲಿಲ್ಲ."

ಮುಕ್ತಾ ಮೊಳಕಾಲೂರಿ ಕುಳಿತು ಮೊಗ ಬಾಗಿಸಿ ರೋದಿಸತೊಡಗಿದಳು. ಕಾಪಾಲಿಯ ಅರ್ಧ ವಿಸ್ಮೃತ ನೆನಹು ಅವಳ ಮನಸ್ಸಿನಲ್ಲಿ ಮರುಕಳಿಸಿತು. ಆ ಪವಿತ್ರ ಜೀವದ ನೆನಪಿಗಾಗಿ ಇಂದು ದೀಪಗಳು ಉರಿಯುತ್ತಿವೆ.... ಭಜನೆ ನಡೆಯುತ್ತಿದೆ....ಭಕ್ತರು ಆತನನ್ನು ಸ್ತುತಿಸುತ್ತಿದ್ದಾರೆ....

"ಕಾಪಾಲಿ ನಿಜವಾಗಿಯೂ ಪುಣ್ಯಾತ್ಮನಾಗಿದ್ದ. ಈಗ ಆತ ಮಹಾತ್ಮನಾಗಿದ್ದಾನೆ, ಪೂಜ್ಯನಾಗಿದ್ದಾನೆ. ಮನುಷ್ಯರಿಗಿಂತಲೂ ಎಷ್ಟು ಎತ್ತರಕ್ಕೇರಿತಲ್ಲ ಅವನ ಸ್ಮೃತಿ! ಸಂಪತ್ತು ಸಂತೋಷ ಸುಖಗಳಿಗಿಂತಲೂ ಹೆಚ್ಚಿನದಾಗಿರುವ ಆ ಅಜ್ಞಾತ ವಸ್ತುವಾದರೂ ಯಾವುದು ?" ಎಂದು ಯೋಚಿಸಿದಳು ಮುಕ್ತಾ.

ಅವಳು ಮನೆಗೆ ಹಿಂದಿರುಗಿ ಬಂದಾಗ ಮಾಧವರಸ ಅವಳ ಪ್ರತೀಕ್ಷೆ ಮಾಡುತ್ತ ಕುಳಿತಿದ್ದುದು ಕಾಣಿಸಿತು. ತನ್ನ ತಲೆಗೂದಲಿಗೆ ಸುಗಂಧ ತೈಲ ಪೂಸಿಕೊಂಡು ಬಹು ಮೂಲ್ಯ ನಿಲುವಂಗಿ ಧರಿಸಿಕೊಂಡು ಆತ ಅಲಂಕೃತನಾಗಿ ಬಂದಿದ್ದ. ವಿರಾಮಾಸನವೊಂದರಲ್ಲಿ ನಿಶ್ಚಿಂತೆಯಿಂದೊರಗಿಕೊಂಡು ನೀತಿವಿಷಯಕ ಕಾವ್ಯವೊಂದನ್ನು ಓದುತ್ತ ಕುಳಿತಿದ್ದ ಆತ ಮುಕ್ತಾದೇವಿಯನ್ನು ನೋಡುತ್ತಲೂ ಎದ್ದು ಅವಳನ್ನು ತಬ್ಬಿಕೊಳ್ಳಲು ಬಾಹುಗಳನ್ನು ಚಾಚುತ್ತ ಹೇಳಿದ:

"ನಿನ್ನ ಪ್ರತೀಕ್ಷೆ ಮಾಡುತ್ತಾ ಕುಳಿತಿದ್ದು, ಈ ಬೈರಾಗಿ ಬರೆದ ನೀತಿಯ ಕಾವ್ಯದಲ್ಲಿ ನಾನೇನನ್ನು ಓದುತ್ತಿದ್ದೆ ಗೊತ್ತೇ? ನೀತಿಯ ಉಪದೇಶವೋ? ಸದಾಚಾರಗಳ ಮಹತ್ವವೋ? ಅದಾವುದೂ ಇಲ್ಲ. ಈ ಮಹಾಗ್ರಂಥದ ಒಂದೊಂದು ಪುಟದಲ್ಲೂ ನಾನು ನಿನ್ನ ಮೂರ್ತಿಯನ್ನೇ ನೋಡುತ್ತಿದ್ದೆ. ನಿನ್ನ ಮೂರ್ತಿ ಕೈಬೆರಳಿನಷ್ಟೇ ಇದ್ದಿತಾದರೂ ಅದರ ಸೌಂದರ್ಯ ಅನಂತವಾಗಿತ್ತು. ಅದು ನಿನ್ನ ಜೀವಂತ ಮುಕ್ತಾದೇವಿಯ ಛಾಯೆಯೇ. ನಿನ್ನ ಮೂರ್ತಿಯ ನಗ್ನತೆಯಲ್ಲೂ ಸೌಂದರ್ಯವಿತ್ತು. ಅದರಿಂದ ನನ್ನ ವಾಸನೆ ಉದ್ರೇಕಿತವಾಗುತ್ತಿತ್ತು. ನಾನು ಪ್ರೇಮದ ಮೂರ್ತಿಯಾಗಿದ್ದೇನೆಂದು ಒಂದು ಮೂರ್ತಿ ಹೇಳಿದರೆ ನಾನು ಮೃತ್ಯುವಾಗಿದ್ದೇನೆಂದು ಇನ್ನೊಂದು ಮೂರ್ತಿ ಹೇಳುತ್ತಿತ್ತು."

ಹಾಗೆ ಹೇಳುತ್ತಾ ಆತ ಮುಕ್ತಾದೇವಿಯನ್ನು ಎದೆಗೊತ್ತಿಕೊಂಡ. ಅವಳ ಕಣ್ಣುಗಳಲ್ಲಿ ಎಂಥ ಅಗ್ನಿ ಉರಿಯುತ್ತಿದ್ದಿತೆಂಬುದನ್ನು ಆತ ಕಾಣಲಿಲ್ಲ. ಮತ್ತೆ ಮತ್ತೆ ಅವಳನ್ನು ತನ್ನೆದೆಗೆ ಅವಚಿಕೊಳ್ಳುತ್ತ ಆತ ಏನೇನನ್ನೋ ಆಡುತ್ತಲೇ ಇದ್ದ. ಮುಕ್ತಾದೇವಿಯ ಮನಸ್ಸಿನ ಮೇಲೆ ತನ್ನ ಮಾತುಗಳಿಂದ ಪರಿಣಾಮವಾಗುತ್ತಿದೆಯೊ ಇಲ್ಲವೊ ಎಂಬುದನ್ನು ಆತ ಗಮನಿಸಲಿಲ್ಲ.

"ವ್ಯಕ್ತಿಯ ಆತ್ಮಶಿಕ್ಷಣದ ಮಾರ್ಗದಲ್ಲಿ ಯಾವ ಕಂಟಕವೂ ಬರದಂತೆ ನೋಡಿಕೊಳ್ಳಬೇಕೆಂದು ಈ ಗ್ರಂಥದಲ್ಲಿ ಹೇಳಲಾಗಿದೆ. ಅದಕ್ಕೆ ನಾನು ಕೊಡುವ ಅರ್ಥವಿಷ್ಟೆ: ಮುಕ್ತಾದೇವಿಯ ಚುಂಬನ ಬೆಂಕಿಗಿಂತ ಹೆಚ್ಚು ಬಿಸಿಯಾಗಿಯೂ ಜೇನಿಗಿಂತ ಹೆಚ್ಚು ಸಿಹಿಯಾಗಿಯೂ ಇದೆ. ತತ್ವಜ್ಞಾನದ ಅರ್ಥವನ್ನು ಬದಲು ಮಾಡಬಲ್ಲ ಸಾಮರ್ಥ್ಯವುಂಟು ನಿನ್ನ ಚರಣಗಳಲ್ಲಿ."

ಮಾಧವರಸನ ಒಂದು ಮಾತೂ ಅವಳಿಗರ್ಥವಾಗಲಿಲ್ಲ. ಆಗ ತಾನೆ ಬಿಟ್ಟು ಬಂದ ಆ ದೇವಾಲಯದಲ್ಲಿಯೇ ಆಗಲೂ ವಿಹರಿಸುತ್ತಿತ್ತು ಅವಳ ಮನಸ್ಸು.

ಅವಳು ಉದಾಸೀನತೆಯಿಂದ ಉಸಿರು ಬಿಡುವುದನ್ನು ಕಂಡು ಮಾಧವರಸನೆಂದ:

"ನಿನಗೇನಾಗಿದೆ ಪ್ರಿಯೆ? ಯಾರು ಏನಾದರೂ ಅಂದರೇ? ನನ್ನ ಪಾರಿಜಾತ ಕುಸುಮವನ್ನು ಯಾರು ನೋಯಿಸಿದರು?"

ಆಗಲೂ ಅವಳು ಉತ್ತರವೀಯಲಿಲ್ಲ. ಮಾಧವರಸನೇ ಮತ್ತೆ ಹೇಳಿದ:

"ಉದಾಸೀನಳಾಗಬೇಡ ನನ್ನ ಮುದ್ದೇ! ಪ್ರಪಂಚವನ್ನೆಲ್ಲಾ ಮರೆತು ಬಿಟ್ಟರೇನೇ ನಿಜವಾದ ಸುಖ ಸಿಕ್ಕುತ್ತದೆ. ಬಾ, ನಾವು ಜೀವನವನ್ನು ಕೆಣಕೋಣ. ಕೆಣಕಿ ಕೆಣಕಿ ಸುಖ ಪಡೆಯೋಣ. ಬಾ ಸಖೀ, ನಾವಿಬ್ಬರೂ ಪ್ರೇಮದಾಟ ಆಡೋಣ."

ಆದರೆ ಮುಕ್ತಾ ಅವನನ್ನು ದೂರಗೊಳಿಸುತ್ತ ಹೇಳಿದಳು:

"ಪ್ರೇಮ! ನಿನ್ನಂಥವನ ಬಾಯಲ್ಲಿ ಪ್ರೇಮವೆಂಬ ಶಬ್ದ ಬರುವುದಾದರೂ ಹೇಗೆ? ನನಗೆ ಗೊತ್ತು, ನೀನು ಯಾರನ್ನೂ ಪ್ರೀತಿಸಿಲ್ಲ. ನಾನೂ ನಿನ್ನನ್ನು ಪ್ರೀತಿಸಲಾರೆ....ಪ್ರೀತಿಸಲಾರೆ. ನಾನು ನಿನ್ನನ್ನು ತಿರಸ್ಕರಿಸುತ್ತೇನೆ. ತೊಲಗಾಚೆ! ನಿನ್ನನ್ನು ಕಂಡರೆ ನನಗೆ ಅಸಹ್ಯವೆನಿಸುತ್ತದೆ. ಎಲ್ಲಾ ವಿಲಾಸಪ್ರೇಮಿಗಳನ್ನೂ ಧನಿಕರನ್ನೂ ನಾನು ದ್ವೇಷಿಸುತ್ತೇನೆ. ತೊಲಗು. ಬೇಗ ತೊಲಗು. ಈ ಜಗತ್ತಿನಲ್ಲಿ ನಿರ್ಭಾಗ್ಯರಾಗಿರುವವರಷ್ಟೇ ಒಳ್ಳೆಯವರು. ನಾನಿನ್ನೂ ಹುಡುಗಿಯಾಗಿದ್ದಾಗ ನಮ್ಮಲ್ಲಿ ಕೆಲಸ ಮಾಡುತ್ತಿದ್ದ ಮುದುಕ ಕಾಪಾಲಿಯನ್ನು ಪ್ರೀತಿಸುತ್ತಿದ್ದೆ. ಆತ ಒಳ್ಳೆಯವನಾಗಿದ್ದ. ಪರಿಶುದ್ಧ ನಡತೆ

ಯವನಾಗಿದ್ದ. ಅಂಥವನನ್ನೂ ಶೂಲಕ್ಕೇರಿಸಲಾಯಿತು. ಆತ ಸಭ್ಯನಾಗಿದ್ದ. ಅವನಲ್ಲಿ ಪ್ರೇಮರಸ ತುಂಬಿ ತುಂಬಿ ತುಳುಕುತ್ತಿತ್ತು. ಜೀವನದ ರಹಸ್ಯಗಳನ್ನೆಲ್ಲ ಆತ ತಿಳಿದುಕೊಂಡಿದ್ದ. ಅವನ ಚರಣಗಳನ್ನು ತೊಳೆಯಲು ಕೂಡಾ ಯೋಗ್ಯನಲ್ಲ ನೀನು. ತೊಲಗು. ನಿನ್ನ ಮೋರೆಯನ್ನು ಮತ್ತೊಮ್ಮೆ ನೋಡುವುದಕ್ಕೂ ಮನಸ್ಸಿಲ್ಲ ನನಗೆ. ”

ಅಷ್ಟು ಹೇಳಿ ಅವಳು ನೆಲದ ಮೇಲೆ ಬಿದ್ದುಕೊಂಡು ಅಳುತ್ತಳುತ್ತಾ ಇರುಳು ಕಳೆದಳು. ಇನ್ನುಮುಂದೆ ತಾನೂ ಕೂಡಾ ಕಾಪಾಲಿಯ ಹಾಗೆಯೇ ಬಡತನದ ಸಾದಾ ಜೀವನ ನಡಸುವುದೆಂದು ನಿಶ್ಚಯಿಸಿದಳು.

ಆದರೂ ಮರುದಿನವೆ ಅವಳು ತನ್ನ ನಿತ್ಯದ ಜೀವನಕ್ರಮವನ್ನು ಮುಂದುವರಿಸಿದಳು. ಹಲವು ವರ್ಷಗಳಿಂದ ಅಂಟಿಕೊಂಡಿದ್ದ ದುರಭ್ಯಾಸಗಳನ್ನು ಒಮ್ಮಿಂದೊಮ್ಮೆಲೆ ಬಿಟ್ಟುಬಿಡುವುದು ಅಸಾಧ್ಯವೆಂದೇ ಅವಳಿಗನ್ನಿಸಿತು. ತನ್ನ ಸೌಂದರ್ಯವೂ ಯೌವನವೂ ಶಾಶ್ವತವಾದುವುಗಳಲ್ಲವೆಂಬುದೇನೊ ಅವಳಿಗೆ ತಿಳಿದಿತ್ತು. ಆದರೂ ಅವುಗಳಿಂದ ಸಿಕ್ಕಿದಷ್ಟು ಸುಖವನ್ನೂ ಲಾಭವನ್ನೂ ಪಡೆಯಲು ಅವಳು ಕಾತರಿಸುತ್ತಿದ್ದಳು.

ನಾಟಕಗಳಲ್ಲೂ ಅವಳು ಹೆಚ್ಚು ಉತ್ಸಾಹದಿಂದ ಪಾತ್ರ ವಹಿಸತೊಡಗಿದಳು. ಶಿಲ್ಪಿಗಳ, ಚಿತ್ರಕಾರರ ಮತ್ತು ಕವಿಗಳ ಕಲ್ಪನೆಗಳಿಗೆ ಅವಳಿಂದಾಗಿ ಸಜೀವರೂಪ ಪ್ರಾಪ್ತವಾಗತೊಡಗಿತು. ಅಭಿನೇತ್ರಿ ಮುಕ್ತಾದೇವಿಯ ರೂಪ, ಅಂಗವಿನ್ಯಾಸ, ಮತ್ತು ಕಲಾವಂತಿಕೆಗಳಲ್ಲಿ ದಾರ್ಶನಿಕರು ಸ್ವರ್ಗೀಯ ಸಂಗೀತದ ಛಾಯೆಯನ್ನು ಕಂಡರು. “ಮುಕ್ತಾದೇವಿಯ ಪ್ರತಿಯೊಂದು ಹಾವಭಾವ ಗಣಿತದ ಸತ್ಯತೆಯಿದೆ ” ಯೆಂದು ಅವರು ಹೇಳಿದರು.

ಅಶಿಕ್ಷಿತರಿಗೂ ದೀನ ದರಿದ್ರರಿಗೂ ಮುಕ್ತ ಹಸ್ತದಿಂದ ನೆರವಾದಳು ಮುಕ್ತಾ. ಅವಳ ಅನುಪಮ ಔದಾರ್ಯ ಅವರನ್ನು ಮುಗ್ಧಗೊಳಿಸಿತು. “ವೇಶ್ಯೆಯಾದರೂ ಎಷ್ಟು ಉದಾರಿ! ಅವಳ ಹೃದಯವಾದರೂ ಎಷ್ಟು ವಿಶಾಲವಾದದ್ದು! ದೇವರು ಅವಳಿಗೆ ಸಕಲ ಸೌಭಾಗ್ಯವನ್ನೂ ಕೊಡಲಿ!” ಎಂದು ಅವರು ಹರಸಿದರು. ಇಷ್ಟೆಲ್ಲ ಹರಕೆ ಪ್ರಶಂಸೆ ಲಭಿಸಿದರೂ ಮುಕ್ತಾಗೆ ಮನಃಶಾಂತಿ ಮಾತ್ರ ಲಭಿಸಲಿಲ್ಲ. ಅವಳ ಮನಸ್ಸು ಯಾವಾಗಲೂ ಉದಾಸವಾಗಿಯೇ ಇರುತ್ತಿತ್ತು. ಮೊದಲಿಗಿಂತಲೂ ಅಧಿಕವಾಗಿ ಅವಳಿಗೆ ಸಾವಿನ

ಭೀತಿಯಾಗುತ್ತಿತ್ತು. ಯಾವ ವಸ್ತುವಿನಿಂದಲೂ ಅವಳ ಚಿಂತೆ ದೂರವಾಗುತ್ತಿರಲಿಲ್ಲ. ಸೌಂದರ್ಯಕ್ಕಾಗಿ ನಗರದಲ್ಲೆಲ್ಲ ಪ್ರಖ್ಯಾತಿ ಪಡೆದಿದ್ದ ತನ್ನ ಮನೆ ಮತ್ತು ಉದ್ಯಾನಗಳಲ್ಲೂ ಅವಳ ಚಿತ್ತ ರಮಿಸುತ್ತಿರಲಿಲ್ಲ.

ಎಷ್ಟೋ ಹಣ ಖರ್ಚು ಮಾಡಿ ಅವಳು ದೂರ ದೂರದಿಂದ ಬೇರೆ ಬೇರೆ ಜಾತಿಯ ಗಿಡಗಳನ್ನು ತರಿಸಿ ತನ್ನ ಉದ್ಯಾನವನದಲ್ಲಿ ಬೆಳೆಯಿಸಿದ್ದಳು. ಜಲಧಾರೆಯೊಂದು ಅವುಗಳಿಗೆ ನೀರುಣ್ಣಿಸುತ್ತಿತ್ತು. ಕುಶಲರಾದ ಶಿಲ್ಪಿಗಳು ನಿರ್ಮಿಸಿದ ಪ್ರತಿಮೆಗಳೂ ಕೃತ್ರಿಮ ಗುಡ್ಡಗಳೂ ಅಲ್ಲಿ ಶೋಭಿಸುತ್ತಿದ್ದುವು. ಉದ್ಯಾನದ ಮಧ್ಯೆ ಕುಂಜವನವಿತ್ತು. ಅಲ್ಲಿಯೇ, ಸ್ನಾನಕ್ಕೆಂದು ನಿರ್ಮಿಸಲ್ಪಟ್ಟ ಚಿಕ್ಕದೊಂದು ಕೊಳವಿತ್ತು. ಅದರ ದಂಡೆಗಳ ಮೇಲೆ ನಗ್ನ ಯುವತಿಯರ ಪ್ರತಿಮೆಗಳಿದ್ದುವು. ಅವುಗಳಲ್ಲೆಲ್ಲ ಮುಕ್ತಾದೇವಿಯ ಸೌಂದರ್ಯವೇ ಚಿತ್ರಿತವಾಗಿತ್ತು. ಅಲ್ಲಿ ಪ್ರತಿದಿನವೂ ಸಂಜೆ, ಹೂವುಗಳ ಮಧ್ಯೆ, ಜಲಧಾರೆಯ ಕಲಕಲ ನಾದವನ್ನಾಲಿಸುತ್ತ ಅವಳು ವಿರಮಿಸುತ್ತಿದ್ದಳು.

ಆ ದಿನವೂ, ನಾಟಕದಿಂದ ಹಿಂದಿರುಗಿದ ಬಳಿಕ ಅವಳು ಅಲ್ಲಿಯೇ ಕುಳಿತು ವಿಶ್ರಾಂತಿ ಪಡೆಯಲೆತ್ನಿಸುತ್ತಿದ್ದಳು. ತನ್ನ ಸೌಂದರ್ಯದ ಅವನತಿಯ ಚಿಹ್ನೆಗಳನ್ನು ಕನ್ನಡಿಯಲ್ಲಿ ನೋಡಿಕೊಳ್ಳುತ್ತ ಬಿಳಿಯ ಕೂದಲು ಮತ್ತು ಕಪ್ಪು ಗೆರೆಗಳ ಕಾಲ ಹತ್ತಿರ ಬರುತ್ತಿದೆಯೆಂದು ಅರಿತು ಅವಳು ಭಯಭೀತಳಾಗಿದ್ದಳು. ಮಂತ್ರ ತಂತ್ರಗಳಿಂದಾಗಲಿ ಔಷಧಿ ಮೂಲಿಕೆಗಳಿಂದಾಗಲಿ ತನ್ನ ತಾರುಣ್ಯದ ಹೊಸತನವನ್ನು ಮತ್ತೆ ಸಂಪಾದಿಸಬಹುದೆಂಬ ವಿಚಾರ ತಂದುಕೊಂಡು ತನ್ನ ಮನಸ್ಸನ್ನು ಸಂತೈಸಲು ಯತ್ನಿಸುತ್ತಿದ್ದಳು.

ಅಷ್ಟರಲ್ಲಿಯೆ ಸಮೀಪದಿಂದ ನಿರ್ದಯ ನಿಷ್ಠುರ ಧ್ವನಿಯೊಂದು ಕೇಳಿಸಿತು.

"ಮುಕ್ತಾ, ನಿನ್ನ ಅಂತ್ಯಕಾಲ ಬರುತ್ತಿದೆ. ನೀನು ಮುದುಕಿಯಾಗುತ್ತಿರುವೆ."

ಭೀತಿಯಿಂದಾಗಿ ಅವಳ ಹಣೆಯ ಮೇಲೆ ಬೆವರೂರಿತು. ಆಕೆ ಪುನಃ ಕನ್ನಡಿಯಲ್ಲಿ ತನ್ನ ಪ್ರತಿಬಿಂಬವನ್ನು ನೋಡಿಕೊಂಡಳು. ತಾನಿನ್ನೂ ಸುಂದರಿಯಾಗಿರುವುದನ್ನು ಮನವರಿಕೆ ಮಾಡಿಕೊಂಡು ಮನಸ್ಸಿನಲ್ಲಿಯೇ ಹೇಳಿಕೊಂಡಳು:

"ಶರೀರದ ಕೋಮಲತೆಯಲ್ಲಿ, ಬಾಹುಗಳ ನುಣುಪಿನಲ್ಲಿ, ರೂಪದ ಮಾದಕತೆಯಲ್ಲಿ ನನ್ನನ್ನು ಸರಿಗಟ್ಟುವ ಹೆಣ್ಣು ಈ ಕಲ್ಯಾಣನಗರದಲ್ಲಿಯೇ ಇನ್ನೊಬ್ಬಳಿಲ್ಲ. ನನ್ನೀ ಬಾಹುಗಳೆಂದರೆ ಪ್ರೇಮದ ಚೂರಿಗಳಂತಿವೆ."

ಹಾಗೆ ಹೇಳಿಕೊಳ್ಳುತ್ತಾ ಅವಳು ತನ್ನ ಅಸಮಾಧಾನವನ್ನು ಅಡಗಿಸುತ್ತಿದ್ದಂತೆಯೇ ಅಪರಿಚಿತನೊಬ್ಬ ತನ್ನೆದುರು ನಿಂತುಕೊಂಡಿದ್ದುದನ್ನು ಕಂಡಳು. ಅವನ ಕಣ್ಣುಗಳು ಉರಿಯುತ್ತಿದ್ದುವು, ಗಡ್ಡ ಕೆದರಿಕೊಂಡಿತ್ತು, ನಿಲುವಂಗಿ ಅಸ್ತವ್ಯಸ್ತವಾಗಿತ್ತು. ಮುಕ್ತಾದೇವಿಯ ಕೈಯಲ್ಲಿನ ಕನ್ನಡಿ ಕಳಚಿ ಬಿತ್ತು. ಅವಳು ಭಯಭೀತಳಾಗಿ ಕಿರಿಚಿಕೊಂಡಳು.

ಸಿದ್ಧನಾಥ ಸ್ಥಿರವಾಗಿ ನಿಂತುಕೊಂಡು, ಅವಳ ಸೌಂದರ್ಯವನ್ನು ವೀಕ್ಷಿಸುತ್ತಾ ಹೃತ್ಪೂರ್ವಕವಾಗಿ ಪ್ರಾರ್ಥಿಸಿದ: "ಭಗವಂತಾ, ಈ ನಾರಿಯ ಮುಖ ದರ್ಶನದಿಂದ ನನ್ನ ವಾಸನೆಗಳು ಜಾಗೃತವಾಗದಂತೆ ನನ್ನನ್ನು ಹರಸು. ನನ್ನ ಕಾರ್ಯದಲ್ಲಿ ಯಶಸ್ಸು ದೊರೆಯುವಂತೆ ಹರಸು!"

ಅನಂತರ ಆತ ಮುಕ್ತಾದೇವಿಯನ್ನು ಕುರಿತು ಹೇಳಿದ:

"ನಾನು ದೂರ ದೇಶದಲ್ಲಿರುವವನು. ನಿನ್ನ ಸೌಂದರ್ಯದ ಕೀರ್ತಿಯನ್ನಾಲಿಸಿ ನಿನ್ನ ಹತ್ತಿರ ಬಂದಿದ್ದೇನೆ. ನೀನು ನುರಿತ ಅಭಿನೇತ್ರಿಯೆಂದೂ ನಿನಗಿಂತಲೂ ಆಕರ್ಷಕಳಾದ ಸ್ತ್ರೀಯೇ ಇಲ್ಲವೆಂದೂ ಜನರು ಹೇಳುತ್ತಾರೆ. ನಿನ್ನ ಸಂಪತ್ತಿನ ಬಗ್ಗೆ, ನಿನ್ನ ಪ್ರೇಮದ ರಹಸ್ಯಗಳ ಬಗ್ಗೆ ಅದ್ಭುತವಾದ ಕಥೆಗಳು ಪ್ರಚಾರದಲ್ಲಿವೆ. ರಂಭೆ ಮೇನಕೆ ಊರ್ವಸಿಯರ ಕಥೆಗಳಂತೆಯೇ ನಿನ್ನ ಕಥೆಗಳೂ ರೋಮಾಂಚಕಾರಿಯಾಗಿವೆ. ಎಂತಲೇ ನಿನ್ನನ್ನು ಪ್ರತ್ಯಕ್ಷ ನೋಡುವ ಮನಸ್ಸಾಯಿತು. ನಾನು ಕೇಳಿದುದಕ್ಕಿಂತಲೂ ನಿನ್ನ ವ್ಯಕ್ತಿತ್ವ ಹೆಚ್ಚು ಉಜ್ವಲವಾದುದೆಂದು ಈಗ ಕಾಣುತ್ತಿದೆ. ಜನರು ಹೇಳುವುದಕ್ಕಿಂತಲೂ ಸಾವಿರ ಪಾಲು ಹೆಚ್ಚು ಚತುರೆಯೂ ಸುಂದರಿಯೂ ಆಗಿರುವೆ ನೀನು. ನಿನ್ನನ್ನು ನೋಡುತ್ತಲೂ ಮದಿರಾಸಕ್ತರಂತೆ ಮತ್ತರಾಗದಿರುವುದು ಅಸಂಭವವೆಂದೇ ಕಾಣುತ್ತಿದೆ."

ಈ ಮಾತುಗಳಲ್ಲಿ ಅಣಕ ತುಂಬಿತ್ತಾದರೂ ಸಿದ್ಧನಾಥ ಪವಿತ್ರ ಉತ್ಸಾಹದಿಂದಲೇ ಅವುಗಳನ್ನಾಡಿದ್ದ. ಮುಕ್ತಾ ಭೀತಿಯನ್ನು ಬಿಟ್ಟು ಈ ವಿಚಿತ್ರ ವ್ಯಕ್ತಿಯನ್ನು ಸಂತುಷ್ಟಳಾಗಿ ನೋಡಿದಳು. ಸಿದ್ಧನಾಥನ ನೀರಸ ಅಸಭ್ಯ ರೂಪವೂ

ಮಲಿನ ತೀಕ್ಷ್ಣದೃಷ್ಟಿಯೂ ಅವಳಿಗೆ ಆಶ್ಚರ್ಯವನ್ನುಂಟು ಮಾಡದಿರಲಿಲ್ಲ. ತನ್ನ ಪರಿಚಯದ ಎಲ್ಲ ವ್ಯಕ್ತಿಗಳಿಗಿಂತ ಭಿನ್ನವಾಗಿದ್ದ ಈ ವ್ಯಕ್ತಿಯ ಪೂರ್ವೋತ್ತರಗಳನ್ನರಿತುಕೊಳ್ಳುವ ಅಪೇಕ್ಷೆ ಅವಳಿಗುಂಟಾಯಿತು. ಅವಳು ವಿನಯದಿಂದ ನಗುನಗುತ್ತ ಹೇಳಿದಳು:

"ಪ್ರಶಂಸೆ ಮಾಡುವುದರಲ್ಲಿ ನೀವು ಬಹಳ ಚತುರರಿರುವಿರೆಂದು ಕಾಣುತ್ತದೆ. ಕೊಂಚ ಹುಷಾರಾಗಿಯೇ ಇರಿ. ನನ್ನ ನೋಟ ನಿಮ್ಮನ್ನು ಭೇದಿಸಿಕೊಂಡು ಹೋದೀತು. ನನ್ನನ್ನು ಪ್ರೀತಿಸುವುದೇ ಆದರೆ ಎಚ್ಚರಿಕೆಯಿಂದಲೇ ಪ್ರೀತಿಸಿರಿ."

ಸಿದ್ಧನಾಥ ಹೇಳಿದ:

"ಮುಕ್ತಾ, ನಿನ್ನನ್ನು ನಾನು ಪ್ರೀತಿಸುತ್ತೇನೆ. ನನ್ನ ಜೀವನ, ನನ್ನ ಆತ್ಮಗಳನ್ನು ಪ್ರೀತಿಸುವುದಕ್ಕಿಂತ ಹೆಚ್ಚಾಗಿ ನಿನ್ನನ್ನು ಪ್ರೀತಿಸುತ್ತೇನೆ. ಕೇವಲ ನಿನಗಾಗಿಯೇ ನನ್ನ ವನಜೀವನವನ್ನು ತ್ಯಜಿಸಿ ಬಂದೆ. ನಿನಗಾಗಿಯೇ ನನ್ನ ಮನೋವ್ರತವನ್ನೂ ತ್ಯಜಿಸಿದೆ. ನಿನಗೋಸ್ಕರವಾಗಿಯೆ ನನ್ನ ಮುಖದಿಂದ ಸಾಂಸಾರಿಕ ಮತ್ತು ಅಧಾರ್ಮಿಕ ಶಬ್ದಗಳು ಹೊರಹೊರಡುತ್ತಿವೆ. ನಿನಗಾಗಿಯೆ ನಾನು ನೋಡಬಾರದ್ದನ್ನೆಲ್ಲಾ ನೋಡುತ್ತಿದ್ದೇನೆ, ಕೇಳಬಾರದ್ದನ್ನೆಲ್ಲಾ ಕೇಳುತ್ತಿದ್ದೇನೆ. ನಿನಗಾಗಿ ನನ್ನ ಆತ್ಮ ಚಿಂತೆಗೊಳಗಾಗಿದೆ. ನನ್ನ ಹೃದಯ ತಳಮಳಿಸುತ್ತಿದೆ. ವಿಚಾರಧಾರೆಗಳು ಜಲಧಾರೆಯಂತೆ ಹೊರಚಿಮ್ಮುತ್ತಿವೆ. ಹಿಂಸ್ರಪಶುಗಳಿಂದಲೂ ಭೂತಗಳಿಂದಲೂ ತುಂಬಿದ ಅರಣ್ಯದಲ್ಲಿ ಹಗಲಿರುಳು ಪ್ರವಾಸ ಮಾಡಿ ನಾನು ಬಂದಿರುವುದು ನಿನಗಾಗಿಯೆ. ಹೌದು, ನಿನ್ನನ್ನು ಪ್ರೀತಿಸುತ್ತೇನೆ. ಆದರೆ, ಬೇರೆಯವರ ಹಾಗಲ್ಲ ನನ್ನ ಪ್ರೀತಿ. ಪಾಶವೀಯ ವಾಸನೆಗಳಿಂದ ಮದೋನ್ಮತ್ತರಾಗಿ ಹಸಿದ ತೋಳಗಳಂತೆ ನಿನ್ನ ಹತ್ತಿರ ಬರುವ ಕಾಮುಕರಂತೆ ನಾನಿಲ್ಲಿ ಬಂದಿಲ್ಲ. ಅವರು ಬಯಸುವುದು ನಿನ್ನ ಈ ದೇಹವನ್ನಷ್ಟೆ. ಅವರ ಪಾಶವೀಯ ಪ್ರೇಮ ನಿನ್ನ ಆತ್ಮವನ್ನು ನುಂಗಿಬಿಡುತ್ತದೆ. ಅದನ್ನುಳಿಸುವುದಕ್ಕೆಂದೇ ನಾನು ಬಂದಿದ್ದೇನೆ. ನಿನ್ನನ್ನು ಹೃದಯಪೂರ್ವಕವಾಗಿ ಸತ್ಯದ ಹೆಸರಲ್ಲಿ ಪರಮಾತ್ಮನ ಹೆಸರಲ್ಲಿ ನಾನು ಪ್ರೀತಿಸುತ್ತೇನೆ. ನನ್ನ ಹೃದಯದಲ್ಲಿ ನಿನ್ನ ಬಗೆಗಿರುವ ಭಾವನೆಗಳು ಸ್ವರ್ಗೀಯ ಔದಾರ್ಯದಿಂದ ಓತಪ್ರೋತವಾಗಿವೆ. ಮದ್ಯದ ಮಾದಕತೆಗಿಂತ, ರಾತ್ರಿಯ ಸುಖಸ್ವಪ್ನಗಳಿಗಿಂತ

ಹೆಚ್ಚಿನದಾದ ವಸ್ತುವೊಂದನ್ನು ಕೊಡಲು ನಾನು ಬಂದಿದ್ದೇನೆ. ಪವಿತ್ರ ಪ್ರೇಮೋತ್ಸವಗಳ ಅಮರ ಸಮ್ಮಿಲನಗಳ ಸುಖವನ್ನು ಕೊಡಲು ನಾನು ಬಂದಿದ್ದೇನೆ. ನಾನು ನಿನಗೆ ಕೊಡುವ ಪರಮಸುಖ ಅನಂತವಾದದ್ದು, ಕಲ್ಪನಾತೀತವಾದದ್ದು, ವರ್ಣನಾತೀತವಾದದ್ದು. ಈ ಪ್ರಪಂಚದ ಜಡಜೀವಿಗಳಲ್ಲಿ ಯಾರಾದರೊಬ್ಬರು ಆ ಅದ್ಭುತ ಸುಖದ ಛಾಯೆಯನ್ನು ಕಂಡರೂ ಕೂಡ ಆಶ್ಚರ್ಯದಿಂದ ಸತ್ತುಹೋಗಬಹುದು."

ಅವಿಶ್ವಾಸಿಗಳ ಹಾಗೆ ನಗುತ್ತ ಮುಕ್ತಾ ಹೇಳಿದಳು:

"ಅಪರಿಚಿತನೇ, ಈ ಅದ್ಭುತ ಪ್ರೇಮವನ್ನು ತೋರಿಸು, ಬೇಗ ತೋರಿಸು. ಉದ್ದುದ್ದ ಭಾಷಣಗಳಿಂದ ನನ್ನ ಸೌಂದರ್ಯಕ್ಕೆ ಪೆಟ್ಟು ಬೀಳುತ್ತದೆ. ಒಂದು ಗಳಿಗೆಯನ್ನೂ ವ್ಯರ್ಥಗೊಳಿಸದೆ ನಿನ್ನ ದಿವ್ಯ ಪ್ರೇಮವನ್ನು ಪ್ರದರ್ಶಿಸು. ನೀನು ವರ್ಣಿಸಿದ ಸುಖವನ್ನೂ ಶಾಂತಿಯನ್ನೂ ಹೊಂದಲು ನಾನು ಕಾತರಳಾಗಿದ್ದೇನೆ. ನಿಜ ಹೇಳಲೇ? ಅವುಗಳನ್ನು ನಾನೆಂದೂ ಪಡೆಯಲಾರೆನೆಂದೇ ನನಗನ್ನಿಸುತ್ತದೆ. ನಿನ್ನ ಶಬ್ದಗಳು ಬರೀ ಶಬ್ದಜಾಲಗಳಾಗಿ ಉಳಿಯಬಹುದೇನೊ. ಸುಖವನ್ನು ಕೊಡುವೆನೆಂದು ಹೇಳುವುದೇನೊ ಸುಲಭ, ಕೊಡುವುದು ಮಹಾ ಕಠಿಣ. ಪ್ರತಿಯೊಂದು ವ್ಯಕ್ತಿಯಲ್ಲೂ ಏನಾದರೊಂದು ಗುಣ ಇದ್ದೇ ಇರುತ್ತದಲ್ಲವೆ? ನೀನು ಯಾವುದೋ ಒಂದು ಕಲ್ಪನೆಯಲ್ಲಿ ಮುಳುಗಿರುವಿಯೆಂದು ನನಗನ್ನಿಸುತ್ತದೆ. ನೀನು ಹೇಳುವ ಆ ಅಜ್ಞಾತ ಪ್ರೇಮವೆಂಥಾದ್ದು? ಇಷ್ಟು ದಿನಗಳ ವರೆಗೂ ನಾನು ಚುಂಬನಾಲಿಂಗನಗಳನ್ನು ಅನುಭವಿಸಿ ಪ್ರೇಮವೆಂದರೇನೆಂದು ತಿಳಿದುಕೊಂಡಿದ್ದೇನೆ. ನನಗರಿಯದ ಪ್ರೇಮರಹಸ್ಯವಾವುದಾದರೂ ಇರುವುದಾದರೆ ಆಶ್ಚರ್ಯವೇ ಸರಿ. ಈ ಮುಕ್ತಾದೇವಿಯೆಂದರೆ ಯಾರೆಂದು ತಿಳಿದದ್ದೀಯ? ಪ್ರೇಮದೇವತೆಯ ಪ್ರಥಮ ಪೂಜಾರಿಣಿಯೇ ನಾನು. ನನಗಿಂತಲೂ ಹೆಚ್ಚು ಬಲ್ಲೆಯಾ ನೀನು?"

"ಮುಕ್ತಾ, ಚೇಷ್ಟೆ ಮಾಡಬೇಡ. ನಿಜವಾಗಿಯೂ ಈ ಅಜ್ಞಾತ ಪ್ರೇಮವನ್ನು ಕೊಡುವುದಕ್ಕಾಗಿಯೇ ನಾನು ಬಂದಿದ್ದೇನೆ."

"ಮಿತ್ರಾ, ನೀನು ಬಹಳ ತಡಮಾಡಿ ಬಂದೆ. ನಾನು ಈಗಾಗಲೆ ಪ್ರೇಮವನ್ನು ಪೂರ್ತಿಯಾಗಿ ಅರಿತುಕೊಂಡಿದ್ದೇನೆ. ಎಲ್ಲಾ ಬಗೆಯ ಪ್ರೇಮ

ವನ್ನೂ ಅನುಭವಿಸಿ ಮುಗಿಸಿದ್ದೇನೆ."

"ನಾನು ನಿನಗೆ ಕೊಡಲಿರುವ ಪ್ರೇಮ ಬಹಳ ಗೌರವಮಯವಾದದ್ದು. ನೀನು ತಿಳಿದಿರುವ ಪ್ರೇಮವಾದರೋ ನಾಚಿಕೆಗೇಡಿತನದ್ದು, ಅಸಹ್ಯವಾದದ್ದು."

ಕ್ರೋಧದಿಂದ ಮುಕ್ತಾ ಸಿದ್ಧನಾಥನನ್ನು ನೋಡಿದಳು. ಅವಳ ಹಣೆಯ ಮೇಲೆ ಗೆರೆ ಕಾಣಿಸಿಕೊಂಡುವು. ಅವಳೆಂದಳು:

"ಅಪರಿಚಿತನೇ, ನೀನು ಯಾವ ಧೈರ್ಯದಿಂದ ನನ್ನನ್ನು ಅಪಮಾನ ಗೊಳಿಸುತ್ತಿರುವೆ ? ನನ್ನನ್ನು ಸರಿಯಾಗಿ ನೋಡು, ಹೇಳು, ನಾನು ನಾಚಿಕೆ ಗೇಡಿಯಂತೆ ಕಾಣಿಸುವೆನೇ ? ಅಸಹ್ಯವಾಗಿ ಕಾಣಿಸುವೆನೇ ? ಇಲ್ಲ. ನನ್ನ ಜೀವನದ ಬಗ್ಗೆ ನನಗೇನೂ ಹೇಸಿಕೆಯಿಲ್ಲ. ನನ್ನಂತೆಯೇ ಇನ್ನೂ ಎಷ್ಟೋ ಸ್ತ್ರೀಯರಿದ್ದಾರೆ. ಅವರಿಗೂ ತಮ್ಮ ಜೀವನದ ಬಗ್ಗೆ ತಿರಸ್ಕಾರವಿಲ್ಲ. ನನ್ನಷ್ಟು ಹಣ ಅವರಲ್ಲಿಲ್ಲದಿರಬಹುದು. ಅವರು ನನ್ನಷ್ಟು ಸುಂದರಿಯರೂ ಆಗಿರದಿರ ಬಹುದು. ಆ ಮಾತು ಬೇರೆ. ನನ್ನ ಮಟ್ಟಿಗೆ ಹೇಳುವುದಾದರೆ ನನಗೆ ಯಾವುದರ ಕೊರತೆಯೂ ಇಲ್ಲ. ಸುಖವೆನ್ನುವುದು ನನ್ನ ಚರಣಗಳ ಮೇಲೆ ಉರುಳಾಡುತ್ತಿದೆ. ಇಡೀ ಜಗತ್ತಿಗೆಲ್ಲ ಈ ವಿಚಾರ ಗೊತ್ತಿದೆ. ಸಾಮ್ರಾಟರಿ ಗಿಂತ ಹೆಚ್ಚಿನದಾಗಿದೆ ನನ್ನ ಶಕ್ತಿ. ಈ ವಿಚಾರವೂ ಎಲ್ಲರಿಗೂ ಗೊತ್ತಿದೆ. ಚಕ್ರವರ್ತಿಗಳು ನನ್ನ ಪಾದಗಳನ್ನು ಚುಂಬಿಸುತ್ತಾರೆ. ನನ್ನದೊಂದು ಕೃಪಾ ಕಟಾಕ್ಷಕ್ಕಾಗಿ ಕಾದಿರುತ್ತಾರೆ. ನೋಡು, ಸ್ವಲ್ಪ ನನ್ನನ್ನು ನೋಡು. ನನ್ನೀ ಪುಟ್ಟ ಪುಟ್ಟ ಕಾಲುಗಳನ್ನು ನೋಡು. ಇವುಗಳನ್ನು ಚುಂಬಿಸುವ ಸೌಭಾಗ್ಯ ಪಡೆಯಲೆಂದು ಸಾವಿರಾರು ಜನರು ತಮ್ಮ ರಕ್ತ ಸುರಿಸಲೂ ಸಿದ್ಧರಾಗಬಹುದು. ನನಗೆ ಗೊತ್ತು—ನಾನಂಥ ಮಹಾ ವ್ಯಕ್ತಿಯೇನೂ ಅಲ್ಲ. ಲೋಕದಲ್ಲಿ ನನ್ನ ಸ್ಥಾನ ದೊಡ್ಡದಲ್ಲವೆನ್ನುವುದೂ ನನಗೆ ಗೊತ್ತು. ದೇವಾಲಯದ ಶಿಖರವ ನ್ನೇರಿ ಕುಳಿತವರ ದೃಷ್ಟಿಯಲ್ಲಿ, ಬೀದಿಯಲ್ಲಿ ಹೋಗುವ ನಾನು ಒಂದು ಕಣ ವಾಗಿ ಕಾಣಿಸಬಹುದು. ಆದರೆ ಇದೇ ಕಣವೇ ಎಷ್ಟು ಜನರ ಎದೆಗಳಲ್ಲಿ ನಿರಾಸೆಯ ಬೆಂಕಿಯನ್ನು ಹೊತ್ತಿಸಿದೆ! ಎಷ್ಟೋ ಅಪರಾಧಗಳನ್ನು ಮಾಡಿ ಸಿದೆ! ಎಷ್ಟೋ ಜನರನ್ನು ಹುಚ್ಚರನ್ನಾಗಿ ಮಾಡಿದೆ! ನನ್ನ ಸುತ್ತಲೂ ಯಶಸ್ಸು ಮತ್ತು ಕೀರ್ತಿಗಳ ಗಾನ ನಡೆದಿರುತ್ತ ನಾನು ನಾಚಿಕೆಪಟ್ಟುಕೊಳ್ಳು ವುದೇ ? ಹೇಸಿಕೆಪಟ್ಟುಕೊಳ್ಳುವುದೇ ? ಅದೆಂಥ ಹುಚ್ಚುತನ ?"

"ಮನುಷ್ಯ ಯಾವುದನ್ನು ಯಶಸ್ಸು ಎಂದು ತಿಳಿಯುವನೋ ಅದು ಭಗವಂತನ ದೃಷ್ಟಿಯಲ್ಲಿ ಪಾಪವಾಗಿದೆ. ಮುಕ್ತಾ, ನನ್ನ ಮತ್ತು ನಿನ್ನ ಜೀವನ ದೃಷ್ಟಿಗಳಲ್ಲಿ ಬಹಳ ವ್ಯತ್ಯಾಸವಿದೆ. ನಮ್ಮ ಭಾಷೆ, ನಮ್ಮ ವಿಚಾರ ಏಕವಾಗಿಲ್ಲ. ಇದರಲ್ಲೇನೂ ಆಶ್ಚರ್ಯವಿಲ್ಲ. ಆದರೆ ಈಶ್ವರನ ಸಾಕ್ಷಿಯಾಗಿ ಹೇಳುತ್ತೇನೆ, ನನ್ನ ನಿನ್ನ ವಿಚಾರಗಳನ್ನು ಏಕಗೊಳಿಸಲೆಂದೇ ನಾನಿಲ್ಲಿಗೆ ಬಂದಿದ್ದೇನೆ. ನಮ್ಮ ಭಾವನೆಗಳು ಒಂದುಗೂಡುವ ವರೆಗೂ ನಿನ್ನನ್ನು ನಾನು ಬಿಡುವುದಿಲ್ಲ. ನಿನ್ನನ್ನು ಮೇಣದಂತೆ ಕರಗಿಸಲು ಯಾರ ಜ್ವಲಂತ ವಾಣಿ ನನ್ನನ್ನು ಉತ್ಸಾಹಿತಗೊಳಿಸೀತೋ! ಪ್ರಾಣಪ್ರಿಯ ಮುಕ್ತಾ, ನನ್ನ ಪ್ರೇರಣೆ ನಿನಗೆ ನೂತನ ರೂಪವೀಯುವಂತೆ ಯಾವ ಶಕ್ತಿ ನಿನ್ನನ್ನು ನನಗರ್ಪಿಸಬಹುದೊ! ನಾನು ನಿನಗೆ ನವೀನ ಸೌಂದರ್ಯವೊಂದನ್ನು ತಂದುಕೊಡುವಂತೆ ಯಾವ ಚೈತನ್ಯ ನನಗೆ ಸ್ಫೂರ್ತಿ ನೀಡಬಹುದೊ! ಇಂದೇ, ಇಂದೇ ನನ್ನ ಪುನರ್ಜನ್ಮವಾಯಿತು!" ಎಂದು ನೀನು ಆನಂದದಿಂದ ಉದ್ಗಾರ ತೆಗೆಯುವ ಅಮೃತಗಳಿಗೆ ಎಂದು ಬರುವುದೋ! ನನ್ನ ಹೃದಯದ ನಿರ್ಮಲ ಸ್ರೋತದಲ್ಲಿ ಸ್ನಾನ ಮಾಡಿ ನೀನು ಪುನೀತಳಾಗುವ ದಿನ ಎಂದು ಬರುವುದೊ!"

ಮುಕ್ತಾದೇವಿಯ ಕ್ರೋಧ ಮಾಯವಾಗಿತ್ತು. ಅವಳೆಂದುಕೊಂಡಳು: "ಈ ಮನುಷ್ಯ ಅನಂತ ಜೀವನದ ಮಾತನಾಡುತ್ತಾನೆ. ಈತನಾಡುವ ಮಾತುಗಳಲ್ಲಿ ಗೂಢ ರಹಸ್ಯವೇನೋ ಇದ್ದ ಹಾಗಿದೆ. ಇವನೊಬ್ಬ ಮಂತ್ರವಾದಿಯೇ ಆಗಿದ್ದಾನು. ವೃದ್ಧಾಪ್ಯ ಮತ್ತು ಮೃತ್ಯುಗಳನ್ನು ತಡೆಗಟ್ಟುವ ಉಪಾಯವನ್ನು ಈತ ಕಂಡುಹಿಡಿದಿದ್ದಾನು."

ಈ ಅಪರಿಚಿತ ವ್ಯಕ್ತಿಗೆ ತನ್ನನ್ನು ಸಮರ್ಪಿತಗೊಳಿಸಲು ನಿಶ್ಚಯಿಸಿ ಅವಳು ಭೀತಿಯನ್ನು ತ್ಯಜಿಸಿ ಕೆಲ ಹೆಜ್ಜೆ ಹಿಂದೆ ಸರಿದು ಕುಂಜವನದ ನಡುವೆಯಿದ್ದ ಮಂಚದ ಮೂಲೆಯೊಂದರಲ್ಲಿ ಕುಳಿತಳು. ಜಾರಿದ ಸೆರಗನ್ನು ಜಾಣ್ಮೆಯಿಂದ ಹೊದೆದು, ವಕ್ಷಸ್ಥಳವನ್ನು ಅರೆತೆರೆದಿರಿಸಿ, ದೃಷ್ಟಿಯನ್ನು ನೆಲಕ್ಕೆ ತಿರುಗಿಸಿ ಮೌನವಾಗಿ ಪ್ರತೀಕ್ಷೆ ಮಾಡತೊಡಗಿದಳು. ಅವಳ ಕಪೋಲಗಳ ಮೇಲೆ ಗುಲಾಬಿಯ ಮಧುರ ಛಾಯೆ ಹರಡಿತು. ಮುಖಮುದ್ರೆಯಿಂದ ಲಜ್ಜೆ ಬಿಂದು ಬಿಂದುವಾಗಿ ಸುರಿಯುತ್ತಿತ್ತು. ಹಸ್ತಿದಂತದಿಂದ ಕೆತ್ತಿದಂತಿದ್ದ ಅವಳ ಕಾಲುಗಳು ಮಂಚದ ಕೆಳಗೆ ನೇತಾಡುತ್ತಿದ್ದುವು. ಆ ಭಂಗಿಯಲ್ಲಿ ಅವಳು ನದೀ

ತೀರದಲ್ಲಿ ಕುಳಿತ ಮುಗ್ಧ ಬಾಲಿಕೆಯಂತೆ ಕಾಣುತ್ತಿದ್ದಳು.

ಸಿದ್ಧನಾಥ ಅಲುಗಾಡದೆ ನಿಂತು ಅವಳನ್ನು ದಿಟ್ಟಿಸುತ್ತಿದ್ದ. ಅವನ ಕಾಲು ನಡಗುತ್ತಿದ್ದುವು. ನಾಲಗೆ ಒಣಗಿ ಹೋಗಿತ್ತು, ಮೆದುಳಿನಲ್ಲಿ ಭಯ ಸೂಚಕ ಸದ್ದು ನಡೆದಿತ್ತು, ಕಣ್ಣುಗಳೆದುರು ಕತ್ತಲು ಕವಿದಿತ್ತು, ಸುತ್ತಲೂ ಕಾರ್ಮೋಡ ಮುಸುಗಿದಂತೆ ತೋರುತ್ತಿತ್ತು. ಈ ರೀತಿಯಲ್ಲಿ, ತನ್ನ ಕಣ್ಣುಗಳೆದುರು ಕತ್ತಲೆ ಹರಡಿ ಸ್ವಯಂ ಭಗವಂತನೇ ಅವಳನ್ನು ಅಡಗಿಸುತ್ತಿರಬಹುದೆಂದು ಸಿದ್ಧನಾಥನಿಗನ್ನಿಸಿತು. ಪ್ರಭುವಿನ ಈ ಸಹಾಯದ ಭರವಸೆಯಿಂದ ಆತ ಚೇತರಿಸಿಕೊಂಡು ಸಾಧುಸಹಜ ಸ್ವರದಲ್ಲಿ ಹೇಳಿದ:

"ನೀನು ನನ್ನ ವಶಕ್ಕೆ ಬಂದರೆ ಪರಮಾತ್ಮನನ್ನೂ ಒಲಿಸಿಕೊಳ್ಳಲು ಸಾಧ್ಯವಾದೀತು."

ಕೊರಳು ಅಲುಗಾಡಿಸಿದಳು ಮುಕ್ತಾ. ಹೇಳಿದಳು: "ಪರಮಾತ್ಮ! ನರ್ತಕಿಯರ ಈ ಕುಂಜವನದ ಮೇಲೆ ಯಾವಾಗಲೂ ಒಂದು ಕಣ್ಣಿರಿಸಿಕೊಂಡಿರಬೇಕೆಂದು ಅವನಿಗೆ ಹೇಳಿದವರಾರು? ನಮ್ಮಿಂದ ಅವನಿಗೆ ತೊಂದರೆ ಆಗುತ್ತಿದ್ದರೆ ಅವನೇಕೆ ಇಲ್ಲಿಂದ ಹೊರಟುಹೋಗುವುದಿಲ್ಲ? ಅದಲ್ಲದೆ, ನಾವಾದರೂ ಅವನಿಗೇನು ತೊಂದರೆ ಕೊಟ್ಟಿದ್ದೇವೆ? ನಮ್ಮನ್ನು ಅವನೇ ಸೃಷ್ಟಿಸಿದ್ದಾನಲ್ಲವೇ? ಹಾಗಾದರೆ ನಮ್ಮ ಆಚರಣೆಯಿಂದ ಅವನೇಕೆ ವಿಸ್ಮಿತನಾಗಬೇಕು? ಕುಪಿತನಾಗಬೇಕು? ಅವನು ನಮಗೆ ಕೊಟ್ಟಿರುವ ಸ್ವಭಾವಕ್ಕೆ ಸರಿಯಾಗಿಯೆ ನಾವು ವರ್ತಿಸುತ್ತಿದ್ದೇವೆ. ಪರಮಾತ್ಮನ ವಿಷಯದಲ್ಲಿ ಅನೇಕರು ಅನೇಕ ಬಗೆಯ ಮಾತಾಡುತ್ತಿರುತ್ತಾರೆ. ಅವನ ಮನಸ್ಸಿನಲ್ಲಿ ಎಂದೂ ಇಲ್ಲದಿದ್ದ ವಿಚಾರಗಳನ್ನು ಅವನಿಗೆ ಆರೋಪಿಸಲಾಗುತ್ತದೆ. ಅವನನ್ನು ನೀನು ಚೆನ್ನಾಗಿ ಬಲ್ಲೆಯಾ? ಅವನ ಪರವಾಗಿ ನನಗೆ ಉಪದೇಶ ಮಾಡಲು ಬಂದಿರುವ ನೀನು ಯಾರು?"

ಉತ್ತರವಾಗಿ ಸಿದ್ಧನಾಥ ತನ್ನ ನಿಲುವಂಗಿಯನ್ನು ತೆರೆದು ತನ್ನ ಕಾವಿಯ ಅಂಗವಸ್ತ್ರವನ್ನು ತೋರಿಸುತ್ತ ಹೇಳಿದ:

"ಪೂಜ್ಯಪಾದ ಮಹಾಗುರುವಿನ ಪಟ್ಟಶಿಷ್ಯ ನಾನು. ಸಿದ್ಧನಾಥ ಎಂದು ನನ್ನ ಹೆಸರು. ಪವಿತ್ರವಾದ ಶ್ರೀಶೈಲ ಪರ್ವತದಿಂದ ನಾನು ಬಂದಿದ್ದೇನೆ. ಪರಮಾತ್ಮ ನನ್ನನ್ನು ಸಂಸಾರದಿಂದ ದೂರಗೊಳಿಸಿ ಇಟ್ಟಿದ್ದಾನೆ. ಸಂಸಾರದ

ಮನುಷ್ಯರಿಗೆ ನಾನು ಸಮಾನನಲ್ಲ. ಆದರೊಂದು ದಿನ ನನ್ನ ಪ್ರಶಾಂತ ಆಶ್ರಮದಲ್ಲಿ ನಿನ್ನ ಛಾಯೆ ಪ್ರಕಟವಾಯಿತು. ನೀನು ಪಾಪದಲ್ಲೂ ದುರಾಚಾರದಲ್ಲೂ ಮಗ್ನಳಾಗಿರುವುದು ನನಗೆ ಕಾಣಿಸಿತು. ನಿನ್ನ ಮೃತ್ಯು ಸಮೀಪಿಸುತ್ತಿರುವುದೂ ನನಗೆ ಗೊತ್ತಾಯಿತು. ನಿನ್ನ ಮೇಲೆ ಕನಿಕರಗೊಂಡು, ಈ ಮಾಯಾ ಸಮಾಧಿಯಿಂದ ನಿನ್ನನ್ನೆಚ್ಚರಿಸಲೆಂದು ನಾನು ಬಂದಿದ್ದೇನೆ. ಮುಕ್ತಾ ಈಗಲಾದರೂ ಕಣ್ಣು ತೆರೆ, ಎಚ್ಚರಗೊಳ್ಳು. ಏಳು. ಏಳು."

ಪೂಜ್ಯಪಾದ, ಸಿದ್ಧನಾಥ ಎಂಬ ಹೆಸರುಗಳನ್ನಾಲಿಸಿ ಮುಕ್ತಾ ಭಯಭೀತಳಾದಳು. ಅವಳ ಮುಖ ಬಿಳಿಚಿಕೊಂಡಿತು. ಕೂಡಲೇ ಮಂಚದಿಂದಿಳಿದು ಬಂದು ಕೈಜೋಡಿಸಿ ಅಳುತ್ತಳುತ್ತಾ ಅವಳು ಸಿದ್ಧನಾಥನ ಚರಣಗಳ ಮೇಲುರುಳಿ ಹೇಳಿದಳು:

"ಮಹಾತ್ಮರೇ, ನನ್ನನ್ನು ಕ್ಷಮಿಸಿರಿ. ನೀವು ಯಾರೆಂಬುದನ್ನರಿಯದೆ ಆಡಬಾರದ ಮಾತು ಆಡಿದೆನೇನೊ. ಆದರೆ, ನೀವಿಲ್ಲಿ ಯಾಕೆ ಬಂದಿದ್ದೀರಿ? ನಿಮಗೆ ಬೇಕಾಗಿರುವುದಾದರೂ ಏನು? ಜನಗಳ ಮನೋರಂಜನೆಯ ಸಾಧನಗಳಾಗಿರುವ ನನ್ನಂಥ ಸ್ತ್ರೀಯರನ್ನು ಆಶ್ರಮವಾಸಿಗಳು ತಿರಸ್ಕಾರದಿಂದ ಕಾಣುವರೆಂಬುದನ್ನು ನಾನು ಬಲ್ಲೆ. ನೀವೂ ನನ್ನನ್ನು ತಿರಸ್ಕರಿಸುತ್ತಿರಬಹುದು. ನನಗೆ ಹಾನಿಯುಂಟುಮಾಡಲು ಬಯಸುತ್ತಿರಬಹುದು. ದಯಮಾಡಿ ನನ್ನನ್ನು ನನ್ನ ಪಾಡಿಗೆ ಬಿಟ್ಟು ನೀವು ನಿಮ್ಮ ಆಶ್ರಮಕ್ಕೆ ಹೊರಟುಹೋಗಿರಿ. ನಿಮ್ಮ ಶಕ್ತಿಯ ಬಗ್ಗೆ ನನಗೆ ಅಪನಂಬಿಕೆಯೇನೂ ಇಲ್ಲ. ಆದರೆ, ಸಿದ್ಧನಾಥ ಮಹಾರಾಜ್, ನೀವು ನನ್ನನ್ನು ಜುಗುಪ್ಸೆಯಿಂದ ನೋಡಬೇಡಿ. ನಾನು ನೀಚಳೆಂದು ತಿಳಿಯಬೇಡಿ. ನಿಮ್ಮಂಥ ಪುಣ್ಯಾತ್ಮರು ಸ್ವಸಂತೋಷದಿಂದ ಅಪ್ಪಿಕೊಂಡ ದರಿದ್ರ ಜೀವನವನ್ನು ಕಂಡು ಇತರರು ನಗುವಂತೆ ನಾನು ನಗುವದಿಲ್ಲ. ನನ್ನ ಸಂಪತ್ತು ಪಾಪದಿಂದಲೂ ಅಪರಾಧದಿಂದಲೂ ಕೂಡಿದೆಯೆಂದು ನೀವು ಭಾವಿಸಬೇಡಿ. ನಾನು ಸುಂದರಿ, ನಾನೊಬ್ಬ ಕುಶಲ ನಟಿ. ನನ್ನ ಸ್ವಭಾವಕ್ಕನುಸಾರವಾಗಿಯೇ ನಾನು ನಡೆದುಕೊಂಡು ಬಂದಿದ್ದೇನೆ. ಯಾವುದಕ್ಕಾಗಿ ದೇವರು ನನ್ನನ್ನು ಹುಟ್ಟಿಸಿದನೋ, ಅದನ್ನೇ ನಾನು ಮಾಡುತ್ತಿದ್ದೇನೆ. ಜನರ ಮನಸ್ಸನ್ನು ಸಂತುಷ್ಟಗೊಳಿಸಲೆಂದೇ ಜನ್ಮ ತಳೆದು ಬಂದಾಕೆ ನಾನು. ನನ್ನನ್ನು ನೀವೂ ಪ್ರೀತಿಸುವುದಾಗಿ ಈಗ ತಾನೇ ಹೇಳಿದಿರಿ. ನಿಮ್ಮ ಸಿದ್ಧಿ

ಗಳಿಂದ ನನಗೆ ಕೇಡು ಬಗೆಯಲು ಯತ್ನಿಸಬೇಡಿ. ನನ್ನ ಸೌಂದರ್ಯ ನಷ್ಟ ವಾಗುವಂತೆ, ಅಥವಾ ನಾನು ಶಿಲಾಮೂರ್ತಿಯಾಗುವಂತೆ ಮಂತ್ರಪ್ರಯೋಗ ಮಾಡಬೇಡಿ. ನಾನು ಈಗಾಗಲೇ ಬಹಳ ಭೀತಳಾಗಿದ್ದೇನೆ. ನನ್ನನ್ನು ಇನ್ನು ಅಂಜಿಸಬೇಡಿ. ಸಾವೆಂದರೆ ನನಗೆ ಬಹಳ ಹೆದರಿಕೆ. ನನ್ನನ್ನು ಸಾಯಿಸಬೇಡಿ."

ಮೇಲಕ್ಕೇಳುವಂತೆ ಅವಳಿಗೆ ಸೂಚಿಸಿ ಸಿದ್ಧನಾಥನೆಂದ:

"ಮಗಳೇ, ಸಮಾಧಾನ, ಸಮಾಧಾನ. ನಿನ್ನನ್ನು ಸಾಯಿಸಲೆಂದು ನಾನು ಬಂದಿಲ್ಲ. ನಿನ್ನನ್ನು ಹೆದರಿಸುವುದೂ ನನ್ನ ಉದ್ದೇಶವಲ್ಲ. ನಾನು ಮಂತ್ರವಾದಿಯೂ ಅಲ್ಲ, ತಂತ್ರವಾದಿಯೂ ಅಲ್ಲ. ನಿನ್ನ ಬಗ್ಗೆ ನನಗೆ ತಿರಸ್ಕಾರವೂ ಇಲ್ಲ. ಪರಮಾತ್ಮನ ವತಿಯಿಂದ ನಾನು ನಿನ್ನ ಹತ್ತಿರ ಬಂದಿದ್ದೇನೆ. ಪಾಪಿಗಳನ್ನು ಪ್ರೇಮದಿಂದ ಬರಮಾಡಿಕೊಳ್ಳುವ ದಯಾಘನನಾದ ಭಗವಂತನ ಪರವಾಗಿ ನಾನು ಬಂದಿದ್ದೇನೆ. ನಿನ್ನ ಮೇಲೆ ಕಲ್ಲೆಸೆಯಲು ನನಗೇನು ಅಧಿಕಾರ? ನಾನು ಸ್ವತಃ ಪಾಪದಿಂದ ಮುಕ್ತನಾಗಿಲ್ಲ. ಈಶ್ವರದತ್ತ ಸೌಲಭ್ಯಗಳನ್ನು ನಾನು ಎಷ್ಟೋ ಬಾರಿ ದುರುಪಯೋಗಪಡಿಸಿಕೊಂಡಿದ್ದೇನೆ. ನಾನೀಗ ನಿನ್ನಲ್ಲಿ ಬಂದಿದ್ದು ಕೋಪದಿಂದಲ್ಲ, ದಯೆಯಿಂದ. ಹೃದಯದ ಪವಿತ್ರ ಉತ್ಸಾಹದಿಂದಲೇ ನಾನು ಬಂದಿರುವೆನಾದ್ದರಿಂದ ನಿಷ್ಕಪಟ ಭಾವದಿಂದ ನಿನ್ನೊಡನೆ ಪ್ರೇಮದ ಮಾತು ಆಡಿದೆ. ನನ್ನ ಮನಸ್ಸಿನಲ್ಲಿ ದಯೆಯ ಜ್ವಾಲೆ ಯುರಿಯುತ್ತಿದೆ. ಇದುವರೆಗೂ ಮಾನವಶರೀರದ ತುಚ್ಛ ದೃಶ್ಯಗಳನ್ನು ನೋಡಿ ನೋಡಿ ದಣಿದಿರುವ ನಿನ್ನ ಕಣ್ಣು, ವಸ್ತುಗಳನ್ನು ಅವುಗಳ ಆಧ್ಯಾತ್ಮಿಕ ರೂಪಗಳಲ್ಲಿ ನೋಡುವ ಶಕ್ತಿಯನ್ನು ಪಡೆದರೆ ನಿನಗೆ ಇವೆಲ್ಲಾ ಅರ್ಥವಾದೀತು. ನಿಜವಾದ ಪ್ರೇಮ ನಮ್ಮನ್ನು ನುಂಗುವುದಿಲ್ಲ, ಸುಟ್ಟು ಬೂದಿ ಮಾಡುವುದಿಲ್ಲ. ದೈವೀಪ್ರೇಮದ ಸ್ಪರ್ಶವಾದ ಪ್ರತಿಯೊಂದು ವಸ್ತುವೂ ಶಾಶ್ವತವಾಗಿ ಶೀತಲವಾಗುತ್ತದೆ, ಸುಗಂಧಿತವಾಗುತ್ತದೆ."

"ಸಾಧು ಮಹಾತ್ಮಾ, ನಿಮ್ಮ ಶಬ್ದಗಳ ಮೇಲೆ ನನಗೆ ಭರವಸೆಯಿದೆ. ಈಗ ನಿಮ್ಮ ತಿರಸ್ಕಾರದ ಅಥವಾ ಪೀಡನೆಯ ಭಯ ನನಗುಳಿದಿಲ್ಲ. ತಪೋಭೂಮಿಯ ಸಾಧುಗಳ ಬಗ್ಗೆ ನಾನು ಎಷ್ಟೋ ಕಥೆಗಳನ್ನು ಕೇಳಿದ್ದೇನೆ. ನಿಮ್ಮ ಹೆಸರೂ ನನಗೆ ಅಪರಿಚಿತವಲ್ಲ. ವಯಸ್ಸಿನಲ್ಲಿ ಚಿಕ್ಕವರಾದರೂ ಗುಣದಲ್ಲಿ

ನೀವು ದೊಡ್ಡವರೆಂಬುದನ್ನೂ ನಾನು ತಿಳಿದುಕೊಂಡಿದ್ದೇನೆ. ನಿಮ್ಮ ಪರಿಚಯವಿಲ್ಲದಿದ್ದರೂ ನೀವು ಸಾಧಾರಣ ಆಸಾಮಿಯಲ್ಲವೆಂಬುದು ನಿಮ್ಮನ್ನು ನೋಡುತ್ತಲೂ ನನಗೆ ಗೊತ್ತಾಯಿತು. ಹೇಳಿ, ನೀವು ನನಗಾಗಿ ಏನನ್ನು ಮಾಡಬಲ್ಲಿರಿ? ನೀವು ನನ್ನನ್ನು ಪ್ರೀತಿಸುವುದು ನಿಜವಿದ್ದಲ್ಲಿ ನನ್ನನ್ನು ಮೃತ್ಯುವಿನಿಂದ ಉಳಿಸಬಲ್ಲಿರಾ?"

"ಮುಕ್ತಾ, ಬದುಕುವ ಇಚ್ಛೆಯುಳ್ಳವರು ಅವಶ್ಯವಾಗಿ ಬದುಕುತ್ತಾರೆ. ಹೇಯವಾದ ಆನಂದಗಳನ್ನು ತ್ಯಜಿಸು. ಮೃತ್ಯು ಇರುವುದು ಅವುಗಳಲ್ಲಿಯೆ. ಭಗವಂತ ತನ್ನ ಪವಿತ್ರ ಶ್ವಾಸದಿಂದ ನಿರ್ಮಿಸಿದ ನಿನ್ನ ಶರೀರವನ್ನು ಮಾಯಾಮೋಹಗಳ ಹಿಡಿತದಿಂದ ಬಿಡಿಸಿಕೋ. ಇಲ್ಲದಿದ್ದರೆ ಅವುಗಳಲ್ಲೇ ನೀನು ಬೆಂದುಹೋಗುವೆ. ನಿನ್ನ ಜೀವನಶಕ್ತಿ ಸಮಾಪ್ತವಾಗಿಹೋಗಿದೆ. ನನ್ನೊಡನೆ ಬಾ. ಏಕಾಂತದ ಪವಿತ್ರ ವಾತಾವರಣದಲ್ಲಿ ತಪಸ್ಸು ಮಾಡಿ ಕಳೆದುಕೊಂಡ ಶಕ್ತಿಯನ್ನು ಮರಳಿ ಸಂಪಾದಿಸು. ನನ್ನೊಡನೆ ನಡೆ, ಬಯಸುವ ವಸ್ತುವನ್ನು ಪಡೆ. ಆನಂದಕ್ಕಾಗಿ ಹಸಿದಿರುವ ಮುಕ್ತಾ, ಏಳು, ದಿಟವಾದ ಆನಂದವನ್ನು ಪಡೆ. ದಾರಿದ್ರ್ಯ, ವಿರಾಗ, ಆತ್ಮವಿಸ್ಮೃತಿ, ತ್ಯಾಗಗಳ ಸುಖ ಭೋಗಿಸು. ಇಂದು ಭಗವಂತನ ವಿರೋಧಿಯಾಗಿರುವ ನೀನೇ ನಾಳೆ ಅವನ ಪ್ರೇಯಸಿಯಾಗುವೆ. ನಡೆ ಅವನ ಬಳಿಗೆ. ಅನಂತರ, 'ಇಂದೇ ನನಗೆ ನಿಜವಾದ ಪ್ರೇಮ ಲಭಿಸಿತೆಂ'ದು ನೀನೇ ಉದ್ಗಾರ ತೆಗೆಯುವೆ."

ಮುಕ್ತಾ ಗಂಭೀರವಾಗಿ ಯೋಚಿಸುತ್ತಿದ್ದಳು.

"ನನ್ನ ಆನಂದ ಜೀವನವನ್ನು ತ್ಯಜಿಸಿ ತಪಸ್ಸು ಮಾಡಿದರೆ ಸ್ವರ್ಗದಲ್ಲಿ ನನಗೆ ಪ್ರವೇಶ ಸಿಕ್ಕಬಹುದೊ? ಅಲ್ಲೂ ನನ್ನ ಸೌಂದರ್ಯ ಶಾಶ್ವತವಾಗಿ ಉಳಿಯಬಹುದೋ?"

"ಮುಕ್ತಾ, ನಿನಗಾಗಿ ನಾನು ಅನಂತ ಜೀವನವನ್ನು ತಂದಿದ್ದೇನೆ. ನನ್ನನ್ನು ನಂಬು. ನಾನು ಹೇಳುವುದು ಪರಮ ಸತ್ಯ."

"ಅದು ಸತ್ಯವೆನ್ನುವುದಕ್ಕೆ ಪ್ರಮಾಣವೇನು?"

"ದೇವದೂತರು ಇದಕ್ಕೆ ಸಾಕ್ಷಿಯಾಗಿದ್ದಾರೆ. ಧರ್ಮಗ್ರಂಥಗಳು ಸಾಕ್ಷಿಯಾಗಿವೆ. ವೇದಾಗಮಗಳು ಸಾಕ್ಷಿಯಾಗಿವೆ."

"ನಾನು ನಿಮ್ಮನ್ನು ನಂಬುತ್ತೇನೆ. ಈ ಲೋಕದಲ್ಲಿ ನನಗೇನೂ ಸುಖ ಸಿಕ್ಕಲಿಲ್ಲವೆನ್ನುವುದು ನಿಜ. ರಾಣಿಯರಿಗಿಂತಲೂ ಮಿಗಿಲಾದ ಭಾಗ್ಯ ನನ್ನದಾಗಿದೆ. ಆದರೂ ನಾನು ಬಹಳ ಕಷ್ಟಪಟ್ಟೆ, ದುಃಖಪಟ್ಟೆ. ಈಗ ಈ ಜೀವನವೆಂದರೇನೇ ಬೇಸರವಾಗಿದೆ. ನನ್ನ ಭಾಗ್ಯವನ್ನು ಕಂಡು ಎಲ್ಲಾ ಸ್ತ್ರೀಯರೂ ಈರ್ಷೆಪಟ್ಟುಕೊಳ್ಳುತ್ತಾರೆ. ಅಯ್ಯೋ ನನ್ನ ಭಾಗ್ಯವೆ! ಒಬ್ಬ ದರಿದ್ರ ಮುದುಕಿಗಿರುವ ಸುಖವೂ ನನಗಿಲ್ಲ. ಬಡವರು ಮಾತ್ರವೇ ಸುಖಿಗಳೂ ಪ್ರಸನ್ನಚಿತ್ತರೂ ಪವಿತ್ರರೂ ಆಗಿರುವರೆಂದು ಎಷ್ಟೋ ಬಾರಿ ನನಗನಿಸಿದೆ. ದೀನ ಹೀನ ನಮ್ರ ಜೀವನದಲ್ಲೇ ಶಾಂತಿಯಿದೆ. ನನ್ನ ಹೃದಯದಲ್ಲಿ ಮಲಗಿದ್ದ ಈ ಭಾವತರಂಗಗಳನ್ನೆಲ್ಲಾ ನೀವು ಬಡಿದೆಬ್ಬಿಸಿದಿರಿ. ಹಾಯ್! ಇನ್ನು ನನಗೆ ಶಾಂತಿಯೆಲ್ಲಿಯದು ? ನನ್ನ ಗತಿಯೇನಾದೀತು? ಈ ಜೀವನದ ಅರ್ಥವಾದರೂ ಏನು ?"

ಮುಕ್ತಾ ಮಾತನಾಡುತ್ತಿದ್ದಂತೆಯೇ ಸಿದ್ಧನಾಥನ ಮುಖ ಪ್ರಕಾಶಮಯವಾಯಿತು. ಅವನು ಹೇಳಿದ:

"ನಾನೊಬ್ಬನೇ ಬಂದಿಲ್ಲ ನಿನ್ನ ಹತ್ತಿರ. ಇನ್ನೊಂದು ವ್ಯಕ್ತಿಯೂ ನನ್ನ ಸಂಗಡ ಬಂದಿದೆ. ನನ್ನ ಪಕ್ಕದಲ್ಲೇ ನಿಂತುಕೊಂಡಿದೆ. ಅವನನ್ನು ನೀನು ನೋಡಲಾರೆ. ಅವನನ್ನು ನೋಡುವ ಶಕ್ತಿ ಇನ್ನೂ ಬಂದಿಲ್ಲ ನಿನ್ನ ಕಣ್ಣುಗಳಿಗೆ. ಆದರೆ, ಇಷ್ಟರಲ್ಲೇ ನೀನು ಅವನ ತೇಜಃಪುಂಜ ರೂಪವನ್ನು ನೋಡಬಹುದು. ಅವನೊಬ್ಬನೇ ಪ್ರೇಮಪಾತ್ರ ವ್ಯಕ್ತಿಯೆಂದು ನಿನಗೆ ಮನವರಿಕೆಯಾಗಬಹುದು. ಒಂದುವೇಳೆ ಆತ ನನ್ನ ಕಣ್ಣುಗಳ ಮೇಲೆ ತನ್ನ ಕೋಮಲ ಹಸ್ತವಿಟ್ಟು ಆಶೀರ್ವದಿಸದಿದ್ದಲ್ಲಿ ನಾನೂ ಕೂಡಾ ನಿನ್ನ ಜೊತೆಗೆ ಪಾಪಕಾರ್ಯದಲ್ಲಿ ಮಗ್ನನಾಗಬಹುದಾಗಿತ್ತು. ನಾನೂ ಬಹಳ ದುರ್ಬಲನಾಗಿದ್ದೇನೆ, ದುರಾತ್ಮನಾಗಿದ್ದೇನೆ. ಆದರೆ ಭಗವಂತ ನನ್ನನ್ನುಳಿಸಿದ. ನಮ್ಮಿಬ್ಬರನ್ನೂ ಉಳಿಸಿದ. ಆತ ಶಕ್ತಿಶಾಲಿಯಾಗಿದ್ದಂತೆಯೇ ದಯಾಳುವೂ ಆಗಿದ್ದಾನೆ. ನನ್ನ ಹೃದಯದಲ್ಲಿ ನಿನ್ನ ಬಗ್ಗೆ ದಯೆ ಹುಟ್ಟಿಸಿದವನೂ ಅವನೇ. ನೀನು ಮೃತ್ಯುವಿಗೆ ಅಂಜುತ್ತಿದ್ದುದನ್ನು ತಿಳಿದು ನಿನ್ನನ್ನು ಅದರಿಂದುಳಿಸಲು ನಾನು ಬಂದಿದ್ದೇನೆ. ನಾನು ಬಂದಿದ್ದೇನೆನ್ನುವುದಕ್ಕಿಂತ ಅವನೇ ಬಂದಿದ್ದಾನೆಂದು ಹೇಳುವುದು ಹೆಚ್ಚು ಯೋಗ್ಯವಾದೀತು. ಅವನೇ ಈಗ ನಿನ್ನೊಡನೆ ಮಾತ

ನಾಡುತ್ತಿದ್ದಾನೆ. ‘ ಓ ನನ್ನ ಸುಂದರಿ, ಬಹಳ ದಿನಗಳಿಂದ ನಾನು ನಿನ್ನನ್ನು ಹುಡುಕುತ್ತಿದ್ದೆ. ಕಡೆಗೂ ನಿನ್ನ ಭೆಟ್ಟಿಯಾಯಿತು. ಈಗ ನನ್ನಿಂದ ದೂರ ಓಡಬೇಡ. ನನ್ನ ಕೈ ಹಿಡಿದುಕೊಂಡು ನನ್ನೊಡನೆ ನಡೆ. ನಿನ್ನನ್ನು ಹೆಗಲ ಮೇಲೆ ಕೂಡಿಸಿಕೊಂಡು ಸ್ವರ್ಗ ಲೋಕಕ್ಕೆ ಕರೆದೊಯ್ಯುತ್ತೇನೆ. ’ ಎಂದು ಅವನು ಹೇಳುತ್ತಿದ್ದಾನೆ. ನಡೆ ಮುಕ್ತಾ, ನನ್ನೊಡನೆ ಹೊರಡುವ ಸಿದ್ಧತೆ ಮಾಡು.”

ಸಿದ್ಧನಾಥ ಧ್ಯಾನಮಗ್ನನಾಗಿ ಕುಳಿತುಕೊಂಡ. ಅವನ ಮುಖದ ಮೇಲೆ ಭಗವಂತನ ಸಜೀವ ಮುದ್ರೆಯೇ ಕಾಣಿಸಿತು ಮುಕ್ತಾಗೆ.

ಅವಳು ಬಿಕ್ಕುತ್ತ ಬಿಕ್ಕುತ್ತ ಉದ್ಗಾರ ತೆಗೆದಳು:

“ಅಯ್ಯೋ ನನ್ನ ಬಾಲ್ಯ ಕಾಲವೆ! ನನ್ನ ದಯಾಳು ತಂದೆ ಕಾಪಾಲಿಯೆ! ಆ ದಿನ ನನ್ನನ್ನು ದೀಕ್ಷೆಗಾಗಿ ನೀನು ಕರೆದೊಯ್ದಾಗಲೇ ನಾನೇಕೆ ಸಾಯಲಿಲ್ಲ !”

ಸಿದ್ಧನಾಥ ಕಣ್ದೆರೆದು ಆಶ್ಚರ್ಯದಿಂದ ಹೇಳಿದ:

“ನಿನಗೆ ದೀಕ್ಷೆಯಾಗಿದೆಯೆ ? ನಿಜವಾಗಿಯೂ ? ಹೇ ಭಗವಂತಾ ! ನನ್ನನ್ನು ನಿನ್ನತ್ತ ಎಳೆದು ತಂದ ಶಕ್ತಿಯಾವುದೆಂಬುದು ಈಗ ಗೊತ್ತಾಯಿತು. ನನ್ನ ದೃಷ್ಟಿಯಲ್ಲಿ ನೀನಿಷ್ಟು ಸುಂದರಿಯೂ ಪ್ರಿಯಳೂ ಆಗಿ ಕಾಣುವುದಕ್ಕೆ ಕಾರಣವೇನೆಂಬುದು ಈಗ ಗೊತ್ತಾಯಿತು. ನನ್ನ ಅರಣ್ಯವನ್ನು ಬಿಟ್ಟು ಈ ಸಂಸಾರದ ವಿಷಮಯ ವಾತಾವರಣದಲ್ಲಿ ನಿನ್ನನ್ನು ಹುಡುಕಿಕೊಂಡು ಬರಲು ಆ ದೀಕ್ಷೆಯ ಪ್ರಭಾವವೇ ಕಾರಣವಾಗಿದೆ. ನಿನ್ನನ್ನು ದೀಕ್ಷೆಗೊಳಿಸಿದ ಪರಮ ಪಾವನ ಮಂತ್ರವೇ ನನ್ನನ್ನೂ ದೀಕ್ಷೆಗೊಳಿಸಿತ್ತು. ನೀನು ನನ್ನ ಧರ್ಮಭಗಿನಿ. ನಾನು ನಿನ್ನ ಸೋದರ....”

ಅಷ್ಟು ಹೇಳಿ ಸಿದ್ಧನಾಥ ಸುಮ್ಮನಾದ. ಜಲಧಾರೆಯ ಕಲಕಲನಿನಾದ, ಮುಕ್ತಾದೇವಿಯ ಬಿಕ್ಕಳಿಕೆಯ ಸದ್ದುಗಳನ್ನುಳಿದು ಕುಂಜವನದಲ್ಲಿ ಇನ್ನಾವ ಸದ್ದೂ ಇರಲಿಲ್ಲ.

ಅವಳು ಅಳುತ್ತಿದ್ದಳು. ಕಣ್ಣೀರು ಧಾರೆಧಾರೆಯಾಗಿ ಸುರಿಯುತ್ತಿತ್ತು. ಅದೇ ಸಮಯದಲ್ಲಿ ಅವಳ ದಾಸಿ ವಸ್ತ್ರಗಳನ್ನೂ ಸುಗಂಧ ದ್ರವ್ಯಗಳನ್ನೂ ಹೂ ಮಾಲೆಗಳನ್ನೂ ತೆಗೆದುಕೊಂಡು ಬಂದಳು.

ಅಳುವನ್ನು ತಡೆಹಿಡಿದು ನಗಲು ಯತ್ನಿಸುತ್ತ ಮುಕ್ತಾ ಎಂದಳು:

"ಅಳಬಾರದು. ಕಣ್ಣೀರಿನಿಂದ ಕಣ್ಣು ಕೆಡುತ್ತವೆ. ಅವುಗಳ ಸ್ವಾಭಾವಿಕ ಬಣ್ಣ ನಷ್ಟವಾಗುತ್ತದೆ. ದಂಡನಾಯಕರ ಮನೆಯಲ್ಲೊಂದು ಭೋಜನಕೂಟ ನಡೆಯಬೇಕಾಗಿದೆ. ನಾನು ಸುಂದರಿಯಾಗಿ ಕಾಣಿಸದಿದ್ದರೆ ಊಟಕ್ಕೆ ಬಂದ ಇತರ ಸ್ತ್ರೀಯರು ಕುಚೇಷ್ಟೆ ಮಾಡಬಹುದು."

"ಭೋಜನ ಕೂಟದ ಕಾರ್ಯಕ್ರಮವನ್ನು ರದ್ದುಗೊಳಿಸಲಾಗುವುದಿಲ್ಲವೆ ಮುಕ್ತಾ?"

"ಊಹೂಂ. ಹಾಗೆ ಮಾಡಲು ಬರುವುದಿಲ್ಲ. ಏಳೆಂಟು ದಿನಗಳ ಮುಂಚೆಯೇ ಅದರ ಏರ್ಪಾಟು ಮಾಡಿದ್ದಾಗಿದೆ. ಎಲ್ಲರಿಗೂ ಆಮಂತ್ರಣ ಕಳಿಸಲಾಗಿದೆ. ಈಗ ನಾನು ಹೋಗದಿದ್ದರೆ ಅವರೆಲ್ಲರಿಗೂ ಅವಮಾನವಾದಂತಾಗುವುದು."

"ಯಾರ್ಯಾರು ಬರುವವರಿದ್ದಾರೆ ಮುಕ್ತಾ?"

"ದಳಪತಿ ಅಶ್ವಘೋಷರು, ಮಾಧವರಸರು, ಕರಣಿಕರ ಮೇಲಧಿಕಾರಿ ಜಾಂಬವರಸರು, ರಾಜಗುರು ಪ್ರದ್ಯುಮ್ನಾಚಾರ್ಯರು, ಕೆಲವರು ತರುಣ ಕವಿಗಳು, ತತ್ವಜ್ಞಾನಿಗಳು ಬರುತ್ತಾರೆ. ಕೆಲವರು ಸ್ತ್ರೀಯರೂ ಬರುತ್ತಾರೆ. ಅವರ ಬಗ್ಗೆ ಏನನ್ನೂ ಹೇಳಲಾಗುವುದಿಲ್ಲ. ಅವರಲ್ಲಿರುವ ಒಂದೇ ಒಂದು ಗುಣವೆಂದರೆ ಅವರ ಸೌಂದರ್ಯ."

"ಈ ಸ್ತ್ರೀಯರು ಒಳ್ಳೆಯವರೋ?"

"ಆಗಲೇ ಹೇಳಿದೆನಲ್ಲ? ಬೇರಾವ ಗುಣವೂ ಅವರಲ್ಲಿಲ್ಲ."

"ಮುಕ್ತಾ, ಭೋಜನ ಕೂಟದ ಬಗ್ಗೆ ನನ್ನ ಆಕ್ಷೇಪಣೆಯೇನೂ ಇಲ್ಲ. ನೀನು ಅದರಲ್ಲಿ ಭಾಗವಹಿಸಬಹುದು. ಆದರೆ ನಿನ್ನನ್ನೊಬ್ಬಳನ್ನೆ ನಾನು ಕಳಿಸಲಾರೆ. ನಿನ್ನ ಸಂಗಡ ನಾನೂ ಬಂದು ನಿನ್ನ ಪಕ್ಕದಲ್ಲಿ ಸುಮ್ಮನೆ ಕುಳಿತುಕೊಳ್ಳುತ್ತೇನೆ."

ಅವಳು ನಗುತ್ತಾ ಹೇಳಿದಳು:

"ತಪೋಭೂಮಿಯ ತಪಸ್ವಿಯೊಬ್ಬ ನನ್ನ ಪ್ರಿಯಕರನಾಗಿರುವನೆಂದು ತಿಳಿದು ಅವರೆಲ್ಲಾ ಏನೆನ್ನಬಹುದು?"

೬

ಸಿದ್ಧನಾಥನ ಜೊತೆಗೆ ಮುಕ್ತಾ ಭೋಜನಶಾಲೆಯಲ್ಲಿ ಪ್ರವೇಶಿಸಿದಳು.

ಆ ವೇಳೆಗಾಗಲೆ ಅತಿಥಿಗಳೆಲ್ಲರೂ ಬಂದು ಸೇರಿದ್ದರು. ಮುಕ್ತಾ ಪ್ರವೇಶಿಸುತ್ತಲೂ ನಾಲ್ಕೂ ಕಡೆಗಳಿಂದ ಸ್ವಾಗತದ ಧ್ವನಿ ಕೇಳಿಬರತೊಡಗಿತು.

"ಮೂಲೋಕದ ಸುಂದರಿಗೆ ಅಭಿವಂದನೆ!"

"ಅಭಿನೇತ್ರಿಯರ ರಾಣಿಗೆ ಅಭಿವಂದನೆ!"

"ದೃಷ್ಟಿಮಾತ್ರದಿಂದಲೇ ಸಮಸ್ತ ಭಾವನೆಗಳನ್ನೂ ವ್ಯಕ್ತಗೊಳಿಸುವ ನಾಟ್ಯರಾಣಿಗೆ ಅಭಿವಂದನೆ!"

"ಔದಾರ್ಯದ ಗಣಿಗೆ ಅಭಿವಂದನೆ!"

"ಮನುಷ್ಯರ ಮತ್ತು ದೇವತೆಗಳ ಕಣ್ಮಣಿಗೆ ಅಭಿವಂದನೆ!"

"ಸರ್ವರ ಪ್ರೇಯಸಿಗೆ ಅಭಿವಂದನೆ!"

"ದುಃಖತಾರಿಣಿಗೆ ಅಭಿವಂದನೆ!"

"ಸ್ವರ್ಗದ ರತ್ನರಾಸಿಗೆ ಅಭಿವಂದನೆ!"

"ಕಲ್ಯಾಣದ ಗುಲಾಬಿಗೆ ಅಭಿವಂದನೆ!"

ಈ ಪ್ರಶಂಸೆಯ ಸುರಿಮಳೆ ನಿಲ್ಲುವುದನ್ನೆ ಪ್ರತೀಕ್ಷಿಸುತ್ತಿದ್ದು, ಅನಂತರ ದಂಡನಾಯಕನ ಕಡೆ ತಿರುಗಿ ಮುಕ್ತಾ ಹೇಳಿದಳು:

"ನನ್ನ ಸಂಗಡ ಬಂದಿರುವ ಈ ತಪಸ್ವಿಗಳ ಪರಿಚಯು ನಿಮಗಿರಲಿಕ್ಕಿಲ್ಲ. ಶೈವಪಂಥೀಯ ಮಹಾಗುರು ಪೂಜ್ಯಪಾದರ ಪಟ್ಟಶಿಷ್ಯರಿವರು. ಸಿದ್ಧನಾಥ ಎಂದು ಇವರನ್ನು ಕರೆಯುತ್ತಾರೆ. ಇವರು ದೊಡ್ಡ ತಪಸ್ವಿಗಳಾಗಿದ್ದಾರೆ. ಇವರ ವಾಣಿ ಅಗ್ನಿಯಂತೆ ಜ್ವಲಂತವಾಗಿದೆ."

ದಂಡನಾಯಕ ಎದ್ದು ಸಿದ್ಧನಾಥನಿಗೆ ಬಾಗಿ ವಂದಿಸುತ್ತ ಹೇಳಿದ:

"ಶೈವ ಧರ್ಮದ ಅನುಯಾಯಿ ಸಿದ್ಧನಾಥರೆ, ನಿಮಗೆ ಸುಸ್ವಾಗತ. ಸಾಮ್ರಾಜ್ಯದಲ್ಲೆಲ್ಲ ಪಸರಿಸಿರುವ ನಿಮ್ಮ ಧರ್ಮದ ಬಗ್ಗೆ ನನಗೂ ಆದರವಿದೆ. ನಮ್ಮ ಚಕ್ರವರ್ತಿಯೂ ನಿಮ್ಮ ಧರ್ಮವನ್ನು ಗೌರವದಿಂದ ಕಾಣುತ್ತಿದ್ದಾರೆ.

ಪ್ರತಿಯೊಂದು ದೇವತೆಯಲ್ಲೂ ಪರಮಾತ್ಮನ ಅಂಶವಿದ್ದೇ ಇರುವುದೆಂದು ನಮ್ಮ ಪೂರ್ವಜರು ಹೇಳಿದ್ದಾರೆ. ಇರಲಿ ಆ ವಿಚಾರ. ಬನ್ನಿ, ಕೂತುಕೊಳ್ಳಿ. ಊಟ ಮಾಡೋಣ, ಸಂತೋಷಪಟ್ಟುಕೊಳ್ಳೋಣ."

ವೃದ್ಧ ದಂಡನಾಯಕ ಅತ್ಯಂತ ಗಂಭೀರವಾಗಿ ಮಾತನಾಡಿದ್ದ. ಕೆಲ ದಿನಗಳ ಹಿಂದೆಯಷ್ಟೆ ಪುಟ್ಟದೊಂದು ಕಾಳಗದಲ್ಲಿ ಆತನಿಗೆ ಜಯ ದೊರೆತಿತ್ತು. ಅದೇ ಸಂತೋಷದಲ್ಲಿ ಆತ ಈ ಭೋಜನಕೂಟವನ್ನೇರ್ಪಡಿಸಿದ್ದ.

"ಸಿದ್ಧನಾಥರೆ, ಇಲ್ಲಿ ಕೂಡಿರುವ ಅತಿಥಿಗಳೆಲ್ಲರೂ ಒಂದಿಲ್ಲೊಂದು ಕ್ಷೇತ್ರದಲ್ಲಿ ಪ್ರಸಿದ್ಧರಾಗಿದ್ದಾರೆ. ಅವರ ಸಹವಾಸದಿಂದ ನಿಮಗೆ ಸಂತೋಷವಾಗುವುದೆಂದೇ ನನ್ನ ನಂಬಿಕೆ."

ಅಷ್ಟರಲ್ಲಿ ಮಾಧವರಸ ಸಿದ್ಧನಾಥನ ಹತ್ತಿರ ಬಂದು ಮೆಲ್ಲಗಿನ ಧ್ವನಿಯಲ್ಲಿ ಹೇಳಿದ:

"ನಾನು ಹೇಳಿದಂತೆಯೆ ಆಗಿದೆಯಲ್ಲ ಮಿತ್ರಾ? ರತೀದೇವಿ ಬಹಳ ಶಕ್ತಿವಂತಳೆಂದು ನಾನು ಹೇಳಿರಲಿಲ್ಲವೆ? ನಿನಗಿಷ್ಟವಿಲ್ಲದಿದ್ದರೂ ಆವಳು ನಿನ್ನನ್ನಿಲ್ಲಿಗೆ ಎಳೆದು ತಂದಿದ್ದಾಳೆ. ನೀನು ಪವಿತ್ರ ವ್ಯಕ್ತಿಯೆಂಬುದೇನೋ ನಿಜ. ಆದರೆ ನೀನೂ ಕೂಡಾ ಆ ದೇವರ ದೇವಿಯನ್ನು ತಾಯಿಯೆಂದು ತಿಳಿದು ಪೂಜಿಸಬೇಕಾಗುವುದು. ಇಲ್ಲದಿದ್ದರೆ ನಿನ್ನ ಪತನ ನಿಶ್ಚಿತ."

ನಾಟಕ ಪ್ರದರ್ಶನದ ಕಾಲಕ್ಕೆ ಸಿದ್ಧನಾಥನನ್ನು ಕಂಡಿದ್ದ ಅಪರಿಚಿತನೂ ಭೋಜನಕೂಟದಲ್ಲಿ ಸಮ್ಮಿಲಿತನಾಗಿದ್ದ. ಸಿದ್ಧನಾಥನನ್ನು ಇಲ್ಲಿ ನೋಡುತ್ತಲೂ ಆತ ಚಪ್ಪಾಳೆ ಬಾರಿಸುತ್ತ ಹೇಳಿದ:

"ಮಿತ್ರರೆ, ಈಗ ತಾನೆ ನಾನು ಹೇಳುತ್ತಿರಲಿಲ್ಲವೆ, ಒಬ್ಬ ವಿಚಿತ್ರವ್ಯಕ್ತಿಯ ಬಗ್ಗೆ? ಅದೇ ವ್ಯಕ್ತಿಯೇ ಇದು. ಅದೇ ದೃಷ್ಟಿ, ಅದೇ ಗಡ್ಡ, ಅದೇ ನಿಲುವಂಗಿ, ಎಲ್ಲಾ ಅದೇ. ಮುಕ್ತಾದೇವಿಯ ಅಭಿನಯ ನಡೆದಿದ್ದಾಗ ನಾನಿವರನ್ನು ನೋಡಿದ್ದೆ. ಆಕಸ್ಮಾತ್ತಾಗಿ ಇವರು ಉದ್ರೇಕಗೊಂಡಿದ್ದರು. ಸಿಟ್ಟಿನ ಭರದಲ್ಲಿ ಏನೇನನ್ನೋ ಮಾತಾಡಿದ್ದರು. ಇವರು ಸಾಧಾರಣ ಮನುಷ್ಯರಲ್ಲ. ಇವರ ಶಕ್ತಿ ಬಹಳ ದೊಡ್ಡದು. ವಾಕ್ಶಕ್ತಿ ಅದ್ಭುತವಾದದ್ದು. ಮನಸ್ಸು ಬಂದರೆ ನಮಗೆ ಶಾಪವನ್ನು ಕೊಟ್ಟಾರು. ವಸಿಷ್ಠ ವಿಶ್ವಾಮಿತ್ರರ ಹೆಸರನ್ನು ನಾವು ಕೇಳಿದ್ದೇವೆ. ಅವರಿಗಿಂತಲೂ ಹೆಚ್ಚಿನದು ಇವರ ಯೋಗ್ಯತೆ."

ಭೋಜನ ಕೂಟದಲ್ಲಿ ಉಪಸ್ಥಿತರಿದ್ದ ಇಬ್ಬರು ಸ್ತ್ರೀಯರು,—ಕಾಲಿಂದೀ ದೇವಿ ಮತ್ತು ಸರಸ್ವತೀದೇವಿಯರು—ಒಂದೇ ಸವನೆ ಮುಕ್ತಾದೇವಿಯನ್ನೇ ದಿಟ್ಟಿಸುತ್ತಿದ್ದರು. ಅವರಿಬ್ಬರೂ ತಮ್ಮ ಕೇಶರಾಸಿಗಳ ಮೇಲೆ ಪುಷ್ಪಮುಕುಟ ಧರಿಸಿದ್ದರು. ಅವರ ಕಣ್ಣುಗಳೂ ಹೂವುಗಳಂತೆ ಹೊಳೆಯುತ್ತಿದ್ದುವು. ಮುಕ್ತಾದೇವಿಯ ಮುಖವೂ ಅಂದು ಅಪೂರ್ವ ಶೋಭೆಯಿಂದ ಬೆಳಗುತ್ತಿತ್ತು. ಬೆಳ್ಳಿಯ ನಕ್ಷತ್ರಗಳನ್ನು ಕೂಡಿಸಿದ್ದ ಅವಳ ಬಂಗಾರ ಬಣ್ಣದ ಸೀರೆ ಅತ್ಯಂತ ಆಕರ್ಷಕವಾಗಿತ್ತು. ಇಷ್ಟವಿರದಿದ್ದರೂ ಕಾಲಿಂದಿ ಮತ್ತು ಸರಸ್ವತಿಯರು ಮುಕ್ತೆಳ ವಸ್ತ್ರಗಳನ್ನು ಪ್ರಶಂಸಿಸಬೇಕಾಯಿತು.

ಕಾಲಿಂದಿಯೆಂದಳು: "ನೀನೆಷ್ಟು ಚೆಲುವೆಯಾಗಿದ್ದೀಯಲ್ಲ ಮುಕ್ತಾ ! ಮೊದಲು ಇಷ್ಟು ಸುಂದರಿಯಾಗಿದ್ದಿರಲಿಕ್ಕಿಲ್ಲ. ಆದರೆ, ಆಗಲೂ ಕೂಡಾ ನಿನ್ನ ಸರಿಸಮಾನರಾದ ಸ್ತ್ರೀಯರಿರಲಿಲ್ಲವೆಂದು ಆಗ ನಿನ್ನನ್ನು ನೋಡಿದ್ದ ನನ್ನ ತಾಯಿ ಹೇಳುತ್ತಿದ್ದಳು."

ಸರಸ್ವತಿ ಕೇಳಿದಳು: "ಈ ನಿನ್ನ ನೂತನ ಪ್ರಿಯಕರನಾರು ? ಕಾಡು ಪ್ರಾಣಿಯಂತೆ ಕಾಣಿಸುತ್ತಾನಲ್ಲ ! ಮುಕ್ತಾ, ಈ ಭಯಂಕರ ಮಿತ್ರ ನಿನಗೆಲ್ಲಿ ಗಂಟುಬಿದ್ದ ? ಗುಹಾನಿವಾಸಿಯಲ್ಲವಷ್ಟೇ ಈತ ?"

ಸರಸ್ವತಿಯ ಮುಖದ ಮೇಲೆ ಬೆರಳಿಟ್ಟು ಅವಳ ಮಾತನ್ನು ತಡೆಯುತ್ತ ಕಾಲಿಂದಿಯೆಂದಳು: " ಸಾಕು ಮಾಡೇ. ಪ್ರೇಮದ ರಹಸ್ಯ ಪ್ರೇಮಿಗಳಿಗೇ ಗೊತ್ತು. ಅದನ್ನು ಅರಿತುಕೊಳ್ಳಲೆತ್ನಿಸುವುದೂ ಚೇಷ್ಟೆ ಮಾಡುವುದೂ ಸರಿಯಲ್ಲ. ನನ್ನ ಮಟ್ಟಿಗೆ ಹೇಳುವುದಾದರೆ, ಈ ಮನುಷ್ಯನಿಂದ ಚುಂಬಿಸಿಕೊಳ್ಳುವ ಬದಲು ಉರಿಯುವ ಬೆಂಕಿಯಿಂದ ಚುಂಬಿಸಿಕೊಳ್ಳುವುದೇ ಒಳ್ಳೆಯದು. ಆದರೆ, ನಮ್ಮ ಪ್ರಿಯ ಗೆಳತಿ ಮುಕ್ತಾ ದೇವತೆಗಳಂತೆ ಸುಂದರಿಯೂ ಪೂಜ್ಯಳೂ ಆಗಿದ್ದಾಳೆ. ಎಂತಲೇ ಅವಳು ಎಲ್ಲಾ ತರದ ಪೂಜೆಯನ್ನು ಸ್ವೀಕರಿಸಬೇಕಾಗುವುದು. ನಮ್ಮ ಹಾಗೆ ಸುಂದರ ವ್ಯಕ್ತಿಗಳನ್ನಷ್ಟೇ ಪ್ರೀತಿಸುವುದು ಅವಳ ಧರ್ಮವಲ್ಲ."

ಮುಕ್ತಾ ಹೇಳಿದಳು: "ನೀವಿಬ್ಬರೂ ನಾಲಗೆ ಬಿಗಿಹಿಡಿದು ಮಾತಾಡಿರಿ. ಇವರು ಸಾಮಾನ್ಯ ಮನುಷ್ಯರಲ್ಲ. ಸಿದ್ಧ ಪುರುಷರು. ಸರ್ವಶಕ್ತಿ ಸಂಪನ್ನರು.

ಪಿಸುದನಿಯಲ್ಲಿ ಆಡಿದ ಮಾತುಗಳನ್ನೂ ಇವರು ಕೇಳಬಲ್ಲರು. ಮನಸ್ಸಿನಲ್ಲಿ ತಲೆದೋರಿದ ಭಾವಗಳನ್ನು ಅರಿಯಬಲ್ಲರು. ಇವರು ಮನಸ್ಸು ಮಾಡಿದರೆ ನೀವು ಮಲಗಿದ್ದಾಗ ನಿಮ್ಮ ಹೃದಯವನ್ನು ಹೊರದೆಗೆಯಬಲ್ಲರು. ಹಾಸಿಗೆಯಲ್ಲಿ ಬಿದ್ದಿದ್ದ ಹಾಗೇ ನೀವು ಉಸಿರುಗಟ್ಟಿ ಸತ್ತುಹೋದೀರಿ."

ಕಾಲಿಂದಿಯೂ ಸರಸ್ವತಿಯೂ ಅಂಜಿ ಮೌನ ತಳೆದರು. ಅಷ್ಟರಲ್ಲಿ ದಂಡನಾಯಕ ಕೂಗಿ ಹೇಳಿದ:

"ಮಿತ್ರರೆ, ನಿಮ್ಮ ನಿಮ್ಮ ಸ್ಥಳಗಳಲ್ಲಿ ಕೂತುಕೊಳ್ಳಿರಿ. ಮೊದಲು ಸುರಾಪಾನ ಮಾಡೋಣ. ಅನಂತರ ಊಟ."

ಸೇವಕರು ಮಧುವರ್ಣದ ಸುರೆಯನ್ನು ತಂದಿರಿಸಿದರು. ತನ್ನ ಬಟ್ಟಲನ್ನು ಎತ್ತಿ ಹಿಡಿದು ದಂಡನಾಯಕನೆಂದ:

"ಚಕ್ರವರ್ತಿಗೆ ಜಯವಾಗಲಿ! ನನ್ನ ದೃಷ್ಟಿಯಲ್ಲಿ ಎಲ್ಲಕ್ಕೂ ಮೊದಲಿನ ಸ್ಥಾನ ದೇಶಕ್ಕೆ. ದೇವತೆಗಳಿಗಿಂತ ದೊಡ್ಡದು ದೇಶ."

ಅತಿಥಿಗಳೆಲ್ಲರೂ ತುಂಬಿದ ಬಟ್ಟಲುಗಳನ್ನು ತುಟಿಯ ಬಳಿಗೊಯ್ದರು. ಸಿದ್ಧನಾಥ ಕುಡಿಯಲಿಲ್ಲ, ಕುಡಿಯುವ ಹಾಗಿರಲಿಲ್ಲ.

"ದೇಶ! ದೇಶವೆಂದರೇನು? ಸ್ವಲ್ಪ ಮಣ್ಣು, ಸ್ವಲ್ಪ ನೀರು. ಇಷ್ಟೇ ಅಲ್ಲವೇ? ನದಿಯ ದಂಡೆ ಯಾವಾಗಲೂ ಬದಲಾಗುತ್ತಿರುತ್ತದೆ. ಭೂಮಿಯಲ್ಲಿ ಕಂಪನವಾಗುತ್ತಿರುತ್ತದೆ." ಎಂದು ಮಾತಿಗಾರಂಭಿಸಿದ ಜಾಂಬವರಸ.

ರಾಜಗುರು ಪ್ರದ್ಯುಮ್ನಾಚಾರ್ಯ ಹೇಳಿದ:

"ಜಾಂಬವರಸ! ನಿನ್ನದು ತತ್ವಜ್ಞಾನದ ಮಾತಾಯಿತು. ವ್ಯವಹಾರದಲ್ಲಿ ಈ ಮಾತು ಹಾಸ್ಯಾಸ್ಪದವಾಗುತ್ತದೆ. ದೇಶಪ್ರೇಮವೆಂಬುದು ಭ್ರಾಂತಿಮೂಲಕವಾದದ್ದೆಂದು ಕೆಲವರು ಹೇಳುತ್ತಾರೆ. ನಾನು ಮಾತ್ರ ಹಾಗೆ ಭಾವಿಸುವುದಿಲ್ಲ. ೞಶದೇಶಗಳು ಸೇರಿದರೇನೇ ಜಗತ್ತು ಆಗುತ್ತದಷ್ಟೆ? ದೇಶಗಳನ್ನು ಪ್ರೀತಿಸುವುದೆಂದರೆ ಜಗತ್ತನ್ನು ಪ್ರೀತಿಸಿದ ಹಾಗೆ."

ಕವಿ ಬಿಲ್ಹಾಯಣ ಹೇಳಿದ: "ದೇಶವೆಂದರೇನೆಂದು ಜಾಂಬವರಸ ಕೇಳಿದ. ದೇವತೆಗಳ ವೇದಿಕೆಯೇ ದೇಶ. ಪೂರ್ವಜರ ಸಮಾಧಿ ಸ್ತೂಪಗಳಿಗೇ ದೇಶವೆನ್ನುತ್ತಾರೆ. ಸ್ಮೃತಿ ಚಿಹ್ನಗಳ ಮತ್ತು ಆಕಾಂಕ್ಷೆಗಳ ಸಮ್ಮಿಶ್ರಣದ ಮೂಲಕ ಒಬ್ಬ ವ್ಯಕ್ತಿ ಇನ್ನೊಬ್ಬನ ಸಹನಾಗರಿಕನಾಗುತ್ತಾನೆ."

ಯುವಕ ಚಂದ್ರರಾಜ, ಬಿಲ್ಲಾಯಣನ ಮಾತನ್ನು ತಡೆದು ಬೇರೊಂದು ವಿಷಯ ಪ್ರಸ್ತಾಪಿಸಿದ:

"ಇವತ್ತು ನಾನೊಂದು ಅತ್ಯಂತ ಸುಂದರವಾದ ಕುದುರೆಯನ್ನು ಕಂಡೆ. ಅದು ಅರಬಸ್ತಾನದಿಂದ ಮೊನ್ನೆ ಮೊನ್ನೆಯಷ್ಟೆ ಬಂದಿದೆಯಂತೆ. ತೆಳ್ಳನೆಯ ಮಸ್ತಕ, ಸುಂದರವಾದ ಭುಜ. ಹುಂಜದಂತೆ ಜಂಬದಿಂದ ತಲೆಯೆತ್ತಿಕೊಂಡು ಹೇಗೆ ನಡೆಯುತ್ತಿತ್ತು ಅಂತೀರಿ !"

ಚಂದ್ರರಾಜನ ಸ್ನೇಹಿತ ಆನಂದವರ್ಧನು ಕತ್ತು ಅಲುಗಾಡಿಸುತ್ತಾ ಹೇಳಿದ:

"ಚಂದ್ರರಾಜ್, ನೀನು ತಿಳಿದುಕೊಂಡಿರುವಷ್ಟು ಉತ್ತಮ ಜಾತಿಯದಲ್ಲ ಅದು. ಅದರ ಶರೀರದಲ್ಲಿ ಅನೇಕ ದೋಷಗಳುಂಟು. ಒಂದೆರಡು ವರ್ಷ ಗಳಲ್ಲೇ ಅದು ಕುಂಟಾದರೂ ಆದೀತು."

"ಯಾವ ಆಧಾರದಿಂದ ನೀನು ಈ ಮಾತು ಹೇಳುತ್ತೀ ?" ಎಂದು ಸವಾಲು ಹಾಕಿದ ಚಂದ್ರರಾಜ.

ಅವರ ವಾದವಿವಾದ ನಡೆದಿದ್ದ ಹಾಗೆಯೇ ಕಾಲಿಂದಿ ಕಿರಿಚಿಕೊಂಡಿದ್ದ ರಿಂದ ಎಲ್ಲರೂ ಅವಳತ್ತ ತಿರುಗಿದರು.

"ಅಯ್ಯೋ ! ಎಂಥಾ ಭಯಂಕರ ಪ್ರಸಂಗದಲ್ಲಿ ಸಿಕ್ಕಿದ್ದೆನಲ್ಲ. ನನ್ನ ಪುಣ್ಯ....ಪಾರಾದೆ...." ಎಂದಳು ಕಾಲಿಂದಿ.

"ಏನು ? ಏನು ? ಏನಾಯಿತು ?" ಎಂದು ಎಲ್ಲರೂ ಆತುರರಾಗಿ ಪ್ರಶ್ನಿಸಿದರು.

"ಕಠಾರಿಗಿಂತ ಉದ್ದವಾಗಿದ್ದ ಮೀನೊಂದನ್ನು ತಿನ್ನುತ್ತಿದ್ದಾಗ ಅದರ ಎಲುವು ಗಂಟಲಲ್ಲಿ ಸಿಕ್ಕಿತ್ತು. ಆಗಿಂದಾಗ ಕೆಮ್ಮಿ ಅದನ್ನು ಹೊರಹಾಕಿದೆ ನೆಂದು ನೆಟ್ಟಗಾಯಿತು. ಇಲ್ಲದಿದ್ದರೆ ಉಸುರುಕಟ್ಟಿ ಸಾಯುತ್ತಿದ್ದೆನೇನೋ. ನನ್ನ ಮೇಲೆ ದೇವತೆಗಳ ಕೃಪೆಯುಂಟು. ನನ್ನನ್ನವರು ಪ್ರೀತಿಸುತ್ತಾರೆ."

ಮಾಧವರಸ ನಗುತ್ತಾ ಹೇಳಿದ: "ಏನೆಂದೆ? ದೇವತೆಗಳು ನಿನ್ನನ್ನು ಪ್ರೀತಿಸುತ್ತಾರೆಯೆ ? ಹಾಗಿದ್ದರೆ ಅವರೂ ಕೂಡಾ ಮನುಷ್ಯರ ಅಸಹಾಯ ಕತೆಯಲ್ಲಿ ಪಾಲುಗಾರರಾಗಿರುವರೆನ್ನಬೇಕು. ಪ್ರೇಮವೆಂಬುದು ಅನಂತ ಕಷ್ಟ ಗಳ ಭಾವನೆಯೆಂದು ಒಪ್ಪುವವರೇ ಅದರ ಹಿಡಿತಕ್ಕೊಳಗಾಗುತ್ತಾರೆ. ಅದ

ರಿಂದ ಮನುಷ್ಯರ ದುರ್ಬಲತೆಯೇ ವ್ಯಕ್ತವಾಗುತ್ತದೆ. ಕಾಲಿಂದಿಯನ್ನು ದೇವತೆಗಳು ಪ್ರೀತಿಸುತ್ತಿರುವುದು ನಿಜವಿದ್ದಲ್ಲಿ ಅವರೂ ಕೂಡಾ ನಮ್ಮ ಹಾಗೇ ಅಪರಿಪೂರ್ಣರೆಂದು ಸಿದ್ಧವಾಗುತ್ತದೆ."

ಆ ಮಾತುಗಳಿಂದಾಗಿ ಕಾಲಿಂದಿಗೆ ತುಂಬಾ ರೇಗಿತು. ಆವಳೆಂದಳು:

"ಮಾಧವರಸ, ನೀನು ಮೂರ್ಖನಂತೆ ಮಾತಾಡುತ್ತಿದ್ದೀಯೆ. ನಿನ್ನ ಮಾತಿಗೆ ಉತ್ತರ ಕೊಡುವುದೂ ವ್ಯರ್ಥ. ಹೀಗೆ ಯದ್ವಾತದ್ವಾ ಗಳಹುವುದು ನಿನ್ನ ಸ್ವಭಾವವೇ ಆಗಿದೆ."

ಮಾಧವರಸ ಪುನಃ ನಕ್ಕ. "ಶಹಬ್ಬಾಸ್ ! ಕಾಲಿಂದೀ, ಶಹಬ್ಬಾಸ್ ! ನಿನ್ನ ವಾಗ್ಬಾಣಗಳು ಮುಂದುವರಿಯಲಿ. ನೀನೇನೇ ಅಂದರೂ ಪರವಿಲ್ಲ. ನಿನ್ನ ತೆರೆದ ಬಾಯಿಯನ್ನು ನೋಡುತ್ತಿರುವುದೇ ಒಂದು ಸಂತೋಷ. ಎಷ್ಟು ಸುಂದರವಾಗಿದೆ ನಿನ್ನ ದಂತಪಂಕ್ತಿ !"

ಆ ಸಮಯದಲ್ಲಿ ಗಂಭೀರವಾಗಿದ್ದ ವೃದ್ಧನೊಬ್ಬ ಮಂದಗತಿಯಿಂದ ನಡೆಯುತ್ತ ಬಂದು ಭೋಜನಶಾಲೆಯಲ್ಲಿ ಪ್ರವೇಶಿಸಿದ. ಆವನ ಮುಖದ ಮೇಲೆ ಅಸಾಧಾರಣವಾದೊಂದು ಬಿಂಕದ ಭಾವವಿತ್ತು. ದಂಡನಾಯಕ ಎದ್ದು ಆ ವೃದ್ಧನನ್ನು ಆದರದಿಂದ ಬರಮಾಡಿಕೊಂಡು ತನ್ನ ಪಕ್ಕದಲ್ಲಿ ಕೂಡಿಸಿಕೊಳ್ಳುತ್ತ ಹೇಳಿದ:

"ಯಾಕೋ ತಡಮಾಡಿ ಬಂದಿರಲ್ಲ ಕವಿರಾಜರೇ? ನಿಮ್ಮ ಆ ಮಹಾಕಾವ್ಯ ಇನ್ನೂ ಮುಗಿಯಲಿಲ್ಲವೊ ಏನೊ."

ಕವಿರಾಜನೆಂದು ಹೆಸರುವಾಸಿ ಪಡೆದಿದ್ದ ಗಂಧಮಾರುತ ಹೇಳಿದ:

"ಗಾನ ಮಾಡುವುದು ಕೋಗಿಲೆಗಳ ಕೆಲಸ. ದೇವತೆಗಳ ಗುಣಗಾನ ಮಾಡುವುದು ನನ್ನ ಕೆಲಸ."

"ವಿರಾಗಿಗಳ ರಾಜ ಗಂಧಮಾರುತರೇ, ನಮಸ್ಕಾರ. ನೀವು ನಮ್ಮ ಜೊತೆಗಿದ್ದಾಗ ಪುರಾತನ ಕಾಲದ ಪ್ರತಿಮೆಯೊಂದು ಜೀವ ತಳೆದು ಮಾತಾಡಿದಂತಾಗುತ್ತದೆ. ಎಂಥಾ ಜನಜಂಗುಳಿಯಲ್ಲೂ ನೀವು ಎದ್ದು ಕಾಣುತ್ತೀರಿ. ನೀವಾಡುವ ಒಂದೊಂದು ಶಬ್ದವನ್ನು ಅರ್ಥಮಾಡಿಕೊಳ್ಳುವುದಕ್ಕೂ ಯೋಗ್ಯತೆ ಬೇಕಾಗುವುದು." ಎಂದ ಚಂದ್ರರಾಜ.

"ಚಂದ್ರರಾಜ, ನಿನ್ನದು ತಪ್ಪು ತಿಳಿವಳಿಕೆ. ಸತ್ಯದ ದರ್ಶನ ಲೋಕದಿಂದ ಇನ್ನೂ ಮಾಯವಾಗಿಲ್ಲ. ಕಲ್ಯಾಣ, ಪಾಟಲೀಪುತ್ರ, ವಾತಾಪಿಪುರ, ಕಾಂಚೀ ಪಟ್ಟಣಗಳಲ್ಲಿ ನನ್ನ ಅಗಣಿತ ಶಿಷ್ಯರಿದ್ದಾರೆ. ಅವರೆಲ್ಲರಿಗೂ ಸತ್ಯದ ಅರ್ಥ ತಿಳಿಸಲು ನಾನು ಬಹಳವಾಗಿ ಶ್ರಮಿಸಿದ್ದೇನೆ. ನಮ್ಮನ್ನು ನಾವು ಹತೋಟಿಯಲ್ಲಿಟ್ಟುಕೊಂಡು ವೈರಾಗ್ಯಜೀವನ ನಡಸುತ್ತಾ ಅನುಪಮ ಆನಂದವನ್ನನುಭವಿಸುವುದು ಹೇಗೆಂಬುದನ್ನು ಅವರಿಗೆ ವಿವರಿಸಲು ಕಷ್ಟಪಟ್ಟಿದ್ದೇನೆ. ಒಂದು ವೇಳೆ, ಸಂಸಾರದಿಂದ ಸತ್ಕರ್ಮಗಳು ಲುಪ್ತವಾಗಬಹುದೆಂದು ಇಟ್ಟುಕೊಂಡರೂ ಅದಕ್ಕೂ ನನ್ನ ಆನಂದಕ್ಕೂ ಸಂಬಂಧವೇನು ? ಚಂದ್ರರಾಜ, ತಮ್ಮ ಶಕ್ತಿಗೆ ಮೀರಿದ ಆನಂದದ ಬಗ್ಗೆ ಮಾತಾಡುವುದು ಮೂರ್ಖರಾಜರ ಕೆಲಸ. ಅಷ್ಟೆ. ಭಗವಂತ ಯಾವುದನ್ನಪೇಕ್ಷಿಸುವುದಿಲ್ಲವೊ ಅದನ್ನು ನಾನೂ ಬಯಸುವುದಿಲ್ಲ. ಅವನಿಗೆ ಬೇಕಾದುದನ್ನೇ ನಾನೂ ಬಯಸುತ್ತೇನೆ. ನಾನೂ ಭಗವಂತನ ಹಾಗೇ ಆಗಿ ಅವನ ಅಮೋಘ ಸಂತೋಷದಲ್ಲಿ ಸಮರಸನಾಗುವೆನೆಂದೇ ಇದರ ಅರ್ಥ. ಸತ್ಯ ನಷ್ಟವಾಗುವುದೇ ನಿಜವಿದ್ದರೆ ಹಾಗೂ ಆಗಬಹುದು. ಆದರಿಂದಲೂ ನನಗೆ ದುಃಖವಿಲ್ಲ. ನನ್ನ ತರ್ಕ ಮತ್ತು ಸಾಹಸಗಳ ಪರಮ ಸಾಧನೆಯೆಂದರೆ ಇದೇ. ಪ್ರತಿಯೊಂದು ವಿಚಾರದಲ್ಲೂ ನನ್ನ ಬುದ್ಧಿ ದೈವೀ ಬುದ್ಧಿಯನ್ನೆ ಅನುಸರಿಸುತ್ತದೆ. ಮೂಲ ಬುದ್ಧಿಗಿಂತಲೂ ಈ ಅನುಕರಣೆಯೇ ಹೆಚ್ಚು ಬೆಲೆಯುಳ್ಳದ್ದು. ಇದರಲ್ಲಿ ಹೆಚ್ಚಿನ ಸಾಧನೆಯುಂಟು, ಪರಿಶ್ರಮವುಂಟು." ಎಂದ ಗಂಧಮಾರುತ.

ಮಾಧವರಸ ಹೇಳಿದ:

"ತಾವು ಹೇಳುವುದು ಅರ್ಥವಾಯಿತು. ತಾವು ದೈವೇಚ್ಛೆಗೆ ಅಧೀನವಾಗಿರುವಿರೆಂದೇ ಇದರರ್ಥವಲ್ಲವೆ? ನಾನು ಕೇಳುವುದೇನೆಂದರೆ, ಅನುಕರಣೆಯೇ ಹೆಚ್ಚು ಬೆಲೆಯುಳ್ಳದ್ದಾದರೆ ಎತ್ತಿನಂತೆ ದೇಹ ಊದಿಸಲು ಯತ್ನಿಸಿದ ಕಪ್ಪೆ, ಎತ್ತಿಗಿಂತಲೂ ದೊಡ್ಡದಾಗುವುದಷ್ಟೆ ?"

ಗಂಧಮಾರುತ ಹೇಳಿದ:

"ಮಾಧವರಸಾ, ನೀನು ಚೇಷ್ಟೆ ಮಾಡುತ್ತಿದ್ದೀಯೆ. ಅದು ನಿನ್ನ ಸ್ವಭಾವ. ಗಂಭೀರವಾದ ವಿಷಯಗಳನ್ನು ಗೇಲಿ ಮಾಡುವ ನಿನ್ನ ಮರ್ಕಟತನಕ್ಕೆ ಮೇರೆಯೇ ಇಲ್ಲ. ಆ ಎತ್ತು ಯಾವುದಾದರೊಂದು ದೇವತೆಯಾಗಿರ

ಬಹುದು. ಕಪ್ಪೆ ತನ್ನ ಶುದ್ಧ ಪ್ರೇರಣೆಯಿಂದ ಎತ್ತಿನ ಸರಿಸಮಾನವಾಗಲು ಯತ್ನಿಸಿದರೆ ವಾಸ್ತವವಾಗಿ ಅದು ಸತ್ಕರ್ಮಿಯೆನಿಸಿಕೊಳ್ಳುವುದಿಲ್ಲವೆ? ಆ ಪುಟ್ಟ ಜೀವದ ಸಾಹಸವನ್ನು ನಾವೇಕೆ ಮೆಚ್ಚಿಕೊಳ್ಳಬಾರದು?"

ಆ ಅರ್ಥಶೂನ್ಯ ವಾದವನ್ನು ಅಲ್ಲಿಗೇ ತಡೆಯಲೆಂದು ದಂಡನಾಯಕ ಸಿದ್ಧನಾಥನತ್ತ ತಿರುಗಿ ಹೇಳಿದ:

"ಇಂದು ಒಬ್ಬ ಮಹಾ ಅತಿಥಿಗಳು ನಮ್ಮ ಭೋಜನ ಕೂಟದಲ್ಲಿ ಭಾಗ ವಹಿಸಿದ್ದಾರೆ. ನಿರ್ಜನ ವನದಲ್ಲಿ ಅದ್ಭುತವಾದ ರೀತಿಯಲ್ಲಿ ಜೀವನ ನಡಸುತ್ತಿರುವ ವಿಖ್ಯಾತ ಸಂನ್ಯಾಸಿ ಸಿದ್ಧನಾಥರು ನಮ್ಮೊಡನಿರುವುದು ನಮ್ಮ ಭಾಗ್ಯ."

"ನಿಜ, ನಿಜ. ಇಂಥಾ ಮಹಾತ್ಮರು ನಮ್ಮ ಪುಣ್ಯವಶಾತ್ ಇಲ್ಲಿಗೆ ಬಂದು ಉಪಕಾರ ಮಾಡಿದ್ದಾರೆ. ನಾವು ಅವರನ್ನು ತುಂಬಾ ಸನ್ಮಾನದಿಂದ ಸತ್ಕರಿಸಬೇಕು. ಅವರಿಗೆ ಪ್ರಿಯವಾದುದೇನು ಎಂಬುದನ್ನು ತಿಳಿದುಕೊಳ್ಳಬೇಕು. ಮಸಾಲೆಯ ಗಂಧಕ್ಕಿಂತ ಹೆಚ್ಚಾಗಿ ಇವರು ವಿಚಾರಗಳ ಪವಿತ್ರ ಗಂಧವನ್ನು ಮೆಚ್ಚುವರೆಂಬುದಂತೂ ಸರಿಯೆ. ಅವರ ಧರ್ಮದ ಬಗ್ಗೆ, ತತ್ವಗಳ ಬಗ್ಗೆ ಅವರನ್ನು ವಿಚಾರಿಸಬೇಕು. ನನಗಂತೂ ಶೈವಧರ್ಮದಲ್ಲಿ ತುಂಬಾ ಆಸಕ್ತಿಯುಂಟು. ಸಾವಿರಾರು ಜನರು ನಗುನಗುತ್ತಾ ಶೂಲಕ್ಕೇರುವಂತೆ ಸ್ಫೂರ್ತಿಯಿತ್ತ ಈ ಧರ್ಮ ಅದ್ಭುತವಾದದ್ದೇ ಇರಬೇಕು. ಈ ಧರ್ಮದ ಕಣಕಣದಲ್ಲೂ ಸತ್ಯ ತುಂಬಿಕೊಂಡಿದೆ. ಶೈವಪಂಥೀಯರ ಧರ್ಮಗ್ರಂಥಗಳಲ್ಲೂ ಸ್ವರ್ಗೀಯ ರಹಸ್ಯವಿದೆ. ಇತರ ಧರ್ಮಗಳ ಬಗ್ಗೆ ನನಗೆ ಅಷ್ಟು ಆಸಕ್ತಿಯಿಲ್ಲ" ಎಂದ ಬಿಲ್ಲಾಯಣ.

ಗಂಧಮಾರುತ ಹೇಳತೊಡಗಿದ: "ಆಸಕ್ತಿಯಿಲ್ಲದಿರುವುದು ಅಜ್ಞಾನದ ಲಕ್ಷಣ. ಪವಿತ್ರ ಚರಮ ಸತ್ಯಗಳು ಬುದ್ಧಿಚತುರತೆಯಿಂದ ಪ್ರಾಪ್ತವಾಗದೆ ಆತ್ಮಾನುಭವದಿಂದ ಪ್ರಾಪ್ತವಾಗುತ್ತವೆ. ಅಂತೆಯೆ ಸ್ತ್ರೀಯರು, ಪುರುಷರಷ್ಟು ಚತುರರಾಗಿರದಿದ್ದರೂ ಅವರಿಗಿಂತ ಹೆಚ್ಚು ಸಂವೇದನಶೀಲರಾಗಿರುವುದರಿಂದ ಆಧ್ಯಾತ್ಮ ವಿಚಾರಗಳನ್ನು ಬಹು ಸುಲಭವಾಗಿ ಅರಿತುಕೊಳ್ಳುತ್ತಾರೆ. ಸ್ತ್ರೀಯರಲ್ಲಿ ಪ್ರವಾದಿಗಳ ಗುಣಗಳಿರುವುದುಂಟು. ದೇವತೆಗಳನ್ನು ಸ್ತ್ರೀರೂಪದಲ್ಲಿ ಚಿತ್ರಿಸುವ ರೂಢಿ ಬೆಳೆದುಬಂದಿರುವುದಕ್ಕೂ ಇದೇ ಕಾರಣ."

"ತರ್ಕ ಮತ್ತು ಚಿಂತನಗಳೇ ಜ್ಞಾನಪ್ರಾಪ್ತಿಯ ಮೊದಲ ಮೆಟ್ಟಲು

ಗಳಾಗಿವೆ" ಎಂದ ಬಿಲ್ಹಾಯಣ.

"ಇವುಗಳಿಗಿಂತಲೂ ಭಾವಾವೇಗಕ್ಕೇ ನಾನು ಹೆಚ್ಚು ಬೆಲೆ ಕೊಡುತ್ತೇನೆ." ಎಂದ ಗಂಧಮಾರುತ.

"ಕವಿರಾಜರೆ, ನಿಮ್ಮ ಮಾತು ಸರಿಯಾದದ್ದು. ಆದರೆ ಅದಕ್ಕೂ ಸ್ವಲ್ಪ ಮುಂದೆ ಹೋಗಿ ನಾನು ಹೇಳುವುದೇನಂದರೆ: ಪರಮಾನಂದವನ್ನು ಪಡೆಯುವುದು ಕೇವಲ ಆತ್ಮಕ್ಕೇ ಸೇರಿದ ವಿಷಯ. ಮನುಷ್ಯಪ್ರಾಣಿ ಮೂರು ವಸ್ತುಗಳಿಂದ ನಿರ್ಮಿಸಲ್ಪಟ್ಟಿದ್ದಾನೆ. ಭೌತಿಕ ಶರೀರ, ಸೂಕ್ಷ್ಮವಾದರೂ ಭೌತಿಕವಾಗಿರುವ ಆತ್ಮ, ಅಕ್ಷಯ ಬುದ್ಧಿ ಇವುಗಳಿಂದಲೇ ಅವನ ಸೃಷ್ಟಿಯಾಗಿದೆ. ಶಾಂತವಾದ ಏಕಾಂತವಾದ ಶರೀರರೂಪಿ ಭವನದಿಂದ ಹೊರಬಿದ್ದು ಬುದ್ಧಿ ಆತ್ಮದ ಉದ್ಯಾನಗಳ ಮೇಲೆ ಉಡ್ಡಾಣ ಮಾಡುತ್ತ ಭಗವಂತನಲ್ಲಿ ಲೀನವಾದಾಗ ಅದಕ್ಕೆ ವಾಂಛಿತ ಮೃತ್ಯು ಅಥವಾ ಪುನರ್ಜನ್ಮ ಪ್ರಾಪ್ತವಾಗುತ್ತದೆ. ಅರ್ಥಾತ್ ಮೃತ್ಯು ಅಂದರೇನೇ ಜೀವನ. ಈ ಸ್ಥಿತಿಯಲ್ಲಿ ಆತ್ಮಕ್ಕೆ ಸ್ವರ್ಗೀಯ ಪವಿತ್ರತೆಯೂ ಅಕ್ಷಯ ಆನಂದವೂ ಪರಮ ಜ್ಞಾನವೂ ಪ್ರಾಪ್ತವಾಗುತ್ತದೆ, ಅದು ಪರಿಪೂರ್ಣವಾಗುತ್ತದೆ."—ಬಿಲ್ಹಾಯಣ.

"ಎಷ್ಟು ಸುಂದರವಾಗಿ ಹೇಳಿದಿರಿ ಕವಿಗಳೇ! ನಿಜ ಹೇಳುವುದಾದರೆ, 'ಅಸ್ತಿ' ಮತ್ತು 'ನಾಸ್ತಿ'ಗಳಲ್ಲಿ ವಿಶೇಷ ಅಂತರವಿದೆಯೆಂದು ನನಗೆ ತೋರುವುದಿಲ್ಲ. ಆ ಭೇದವನ್ನು ವಾಣಿ ವ್ಯಕ್ತಗೊಳಿಸಲಾರದು. 'ಅನಂತತೆ' 'ಶೂನ್ಯತೆ' ಎರಡೂ ಒಂದೇ ಬಗೆಯ ವಸ್ತುಗಳಾಗಿವೆ. ಅವುಗಳನ್ನು ಸರಿಯಾಗಿ ಅರಿತುಕೊಳ್ಳುವುದು ಅಸಾಧ್ಯ. 'ಪೂರ್ಣತೆ'ಯೆನ್ನುವುದು ಬಹಳ ಬೆಲೆ ಬಾಳುವ ವಸ್ತುವೆಂದು ನನಗನಿಸುತ್ತದೆ. ಈ ಪೂರ್ಣತೆಯನ್ನು ದೊರಕಿಸಲು ಮನುಷ್ಯ ತನ್ನನ್ನು ತಾನು ಸಮಾಪ್ತಗೊಳಿಸಬೇಕಾಗುತ್ತದೆ; ಇದರ ಸಿದ್ಧಿಗಾಗಿ ಸತ್ತು ಹುಟ್ಟಬೇಕಾಗುತ್ತದೆ. ಈ ಪರೀಕ್ಷೆಯಿಂದ ಭಗವಂತನಿಗೂ ಬಿಡುಗಡೆಯಿಲ್ಲ. 'ನಾಸ್ತಿ'ಯ ಸಂಪೂರ್ಣ ತಿಳಿವಳಿಕೆ ನಮಗಿಲ್ಲ. ಹಾಗೇ 'ಅಸ್ತಿ'ಯ ತಿಳಿವಳಿಕೆಯೂ ಇಲ್ಲ. ನಿಜವಾಗಿ ನಮಗೆ ಯಾವುದರ ತಿಳಿವಳಿಕೆಯೂ ಇಲ್ಲ. ಪರಸ್ಪರರನ್ನು ಅರ್ಥ ಮಾಡಿಕೊಳ್ಳುವದು ಬಹಳ ಕಷ್ಟವೆಂದು ಜನರು ಹೇಳುತ್ತಾರೆ. ಅಂದಮೇಲೆ 'ಅಸ್ತಿ' 'ನಾಸ್ತಿ'ಗಳನ್ನು ಅರ್ಥಮಾಡಿಕೊಳ್ಳುವುದು ಹೇಗೆ ಸುಲಭ

ವಾದೀತು ?"—ದಂಡನಾಯಕ.

"ಇದೆಲ್ಲಾ ಬಲು ವಿಚಿತ್ರವೇ ಸರಿ. ನಾನು ಗಂಭೀರವಾಗಿದ್ದಾಗ ಹಿಂದಿನ ದಿನಗಳ ನೆನಪು ಬರುತ್ತದೆ. ಆ ಕಾಲದಲ್ಲಿ ಕವಿಗಳು ಚಕ್ರವರ್ತಿಗಳ ಜೊತೆ ಕುಳಿತು ಊಟ ಮಾಡುತ್ತಿದ್ದರು. ಅದರ ನೆನಪಾದಾಗಲೆಲ್ಲಾ ನನ್ನ ಬಾಯಲ್ಲಿ ನೀರೂರುತ್ತದೆ. ದಂಡನಾಯಕರೆ, ನಿಮ್ಮ ಔದಾರ್ಯವನ್ನು ಎಷ್ಟೆಂದು ಕೊಂಡಾಡಲಿ ! ನಿಮ್ಮ ಸುರೆಯನ್ನು ಪಾನ ಮಾಡಿದಾಗ, ನನ್ನ ಕಣ್ಣುಗಳೆದುರು ರಾಮಾಯಣ ಮಹಾಭಾರತಗಳ ಯುದ್ಧಗಳು ಕುಣಿಯಲಾರಂಭಿಸುತ್ತವೆ. ಇಂದಿನ ಈ ಪತಿತ ಯುಗದಲ್ಲಿ ಜೀವಿಸುವುದೆಂದರೆ ನನಗೆ ನಾಚಿಕೆಯೆನಿಸುತ್ತದೆ. ನಾನು ಶೌರ್ಯ ಧೈರ್ಯ ಸಮರಗಳನ್ನು ಆಹ್ವಾನಿಸುತ್ತೇನೆ. ನನ್ನ ಕಲ್ಪನಾ ಲೋಕದಲ್ಲಿ ಕಾಳಗದ ಹೊರತು ಇನ್ನಾವ ಚಟುವಟಿಕೆಯೂ ಇಲ್ಲ."—ಜಾಂಬವರಸ.

"ಕೇವಲ ಕಲ್ಪನಾ ವಿಹಾರದಿಂದೇನು ಪ್ರಯೋಜನ? ಭರತವರ್ಷದ ಪ್ರಖ್ಯಾತ ನಗರಗಳೆಲ್ಲಾ ಇಷ್ಟರಲ್ಲೇ ಮದೋನ್ಮತ್ತರಾದ ರಾಕ್ಷಸರ ದಾಳಿಗೆ ಸಿಕ್ಕು ನಷ್ಟವಾಗಬಹುದು. ಕಲೆ ಮತ್ತು ದರ್ಶನಗಳ ಹೆಸರೂ ಕೂಡಾ ಲೋಕದಲ್ಲುಳಿಯಲಿಕ್ಕಿಲ್ಲ. ಮಂದಿರಗಳಲ್ಲೂ ಮಾನವ ಹೃದಯಗಳಲ್ಲೂ ಪರಮಾತ್ಮನ ಮೂರ್ತಿ ಇಲ್ಲದಂತಾಗುವುದು. ಬುದ್ಧಿಯ ಮೇಲೆ ಕಪ್ಪು ಛಾಯೆ ಪಸರಿಸುವುದು, ಸಂಸಾರ ಸಮಾಪ್ತಿ ಹೊಂದುವುದು. ಈಗಾಗಲೇ ಎಲ್ಲವೂ ಅಲುಗಾಡುತ್ತಿದೆ, ಎಲ್ಲವೂ ಮುಳುಗುತ್ತಿದೆ. ಮುಂದೆ ಬರುವ ಆ ರಾಕ್ಷಸರು ದೇವತೆಗಳ ಪೂಜೆ ಮಾಡದೆ ಭೂತಗಳ ಉಪಾಸನೆಯಲ್ಲಿ ತೊಡಗುವರು. ಜಗತ್ತಿನ ಸಂಸ್ಕೃತಿಯ ಕೇಂದ್ರಸ್ಥಾನವಾಗಿದ್ದ ಈ ಭರತವರ್ಷ ತನ್ನ ಸಮಾಧಿಯನ್ನು ತಾನೇ ಕಟ್ಟುವುದು. ಮೃತ್ಯುದೇವತೆಯಾದ ಯಮರಾಜನೇ ಸಮಸ್ತ ಮಾನವ ಜನಾಂಗಕ್ಕೆ ಪೂಜನೀಯನಾಗುವನು. ನಾನು, ಕೊನೆಯ ದೇವತೆಯ ಕೊನೆಯ ಪೂಜಾರಿಯಾಗುವೆನು."—ಗಂಧಮಾರುತ.

ಆ ಸಮಯದಲ್ಲಿ ವಿಚಿತ್ರ ವ್ಯಕ್ತಿಯೊಂದು ಪ್ರವೇಶಿಸಿತು. ಅದೊಂದು ಕುಳ್ಳ ಆಸಾಮಿ. ಕೆಂಬಣ್ಣದ ನಿಲುವಂಗಿಯನ್ನು ಆತ ತೊಟ್ಟುಕೊಂಡಿದ್ದ. ಮುಖದ ಮೇಲೆ ವ್ಯಂಗ್ಯಭರಿತ ಹಾಸ್ಯಭಾವ ಎದ್ದು ಕಾಣುತ್ತಿತ್ತು. ಅವನೇ, ಪ್ರಸಿದ್ಧ ಪ್ರವಾದಿ ಮರುಳಾರ್ಯನೆಂದು ಸಿದ್ಧನಾಥ ತಕ್ಷಣ ಗುರುತಿಸಿದ. ಏಕೋ

ಏನೋ ಅವನಿಗೆ ಬಹಳ ಭಯವೆನಿಸಿತು. ಭೋಜನಕೂಟದಲ್ಲಿ ನಡೆದಿದ್ದ ಧರ್ಮವಿರೋಧಿ ಮಾತುಕತೆಗಳಿಂದ ಮೊದಲೇ ಕ್ಷುಬ್ಧವಾಗಿದ್ದ ಅವನ ಮನಸ್ಸು ಮರುಳಾರ್ಯನಂಥ ಪಾಖಂಡಿಯ ದರ್ಶನದಿಂದ ಇನ್ನಷ್ಟು ಕ್ಷುಬ್ಧವಾಯಿತು. ಅಲ್ಲಿಂದೆದ್ದು ಹೋಗಬೇಕೆಂದೂ ಆತನಿಗೆನಿಸಿತು. ಆದರೆ ಮುಕ್ತಾ ಅವನನ್ನೇ ದಿಟ್ಟಿಸಿ ನೋಡುತ್ತಿದ್ದಳಾದುದರಿಂದ ಆತ ಅಲ್ಲಿಯೇ ಕುಳಿತಿರಬೇಕಾಯಿತು. ಅವಳ ಹೃದಯವನ್ನು ಅರ್ಥ ಮಾಡಿಕೊಳ್ಳಲು ಆತ ಸಮರ್ಥನಾಗಿದ್ದ. ಶೀಘ್ರ ದಲ್ಲಿಯೆ ತಪಸ್ವಿನಿಯಾಗಲಿದ್ದ ಮುಕ್ತಾ ತನ್ನನ್ನು ಈ ಸಂದರ್ಭದಲ್ಲಿ ರಕ್ಷಿಸಬಹು ದೆಂದೇ ಅವನಿಗನ್ನಿಸಿತು. ಅವಳ ಸೀರೆಯದೊಂದು ಮೂಲೆಯನ್ನಾತ ಹಿಡಿದು ಕೊಂಡು ಮನಸ್ಸಿನಲ್ಲಿಯೆ ಪರಮಾತ್ಮನನ್ನು ಪ್ರಾರ್ಥಿಸತೊಡಗಿದ.

ಮರುಳಾರ್ಯನ ಆಗಮನದೊಡನೆ ಭೋಜನಶಾಲೆಯಲ್ಲಿ ಪ್ರಶಂಸಾ ಸೂಚಕ ಧ್ವನಿಯೆದ್ದಿತು. ಎಲ್ಲರಿಗಿಂತ ಮೊದಲು ಗಂಧಮಾರುತನೇ ಮಾತ ನಾಡಿದ:

“ಪೂಜ್ಯರಾದ ಮರುಳಾರ್ಯರೆ, ತಮ್ಮ ದರ್ಶನಲಾಭವನ್ನು ನಮಗೊದಿ ಗಿಸಿ ಬಹಳ ಉಪಕಾರ ಮಾಡಿದಿರಿ. ಸರಿಯಾದ ಸಮಯದಲ್ಲೇ ನೀವು ಬಂದಿರಿ. ಅದೂ ಸಂತೋಷದ ವಿಷಯವೇ. ಶೈವ ಧರ್ಮದ ವಿಚಾರವಾಗಿ ನಮಗೆ ಹೆಚ್ಚಿನದೇನೂ ತಿಳಿಯದು. ನೀವು ಮಾತ್ರ ಎಲ್ಲಾ ಧರ್ಮಗಳನ್ನು ಚೆನ್ನಾಗಿ ಅಭ್ಯಸಿಸಿದ್ದೀರಿ. ಧರ್ಮದ ಮುಖ್ಯ ರಹಸ್ಯಗಳ ಬಗ್ಗೆ ನಿಮ್ಮ ಅಭಿ ಪ್ರಾಯವೇನೆಂದು ತಿಳಿಯಲು ನಾವು ಆತುರರಾಗಿದ್ದೇವೆ. ಶೈವ ಪಂಥೀಯ ಸಂನ್ಯಾಸಿಗಳಾದ ಸಿದ್ಧನಾಥರು ಇಲ್ಲಿ ಬಂದಿರುವರಾದರೂ ಅವರು ಒಂದು ಮಾತನ್ನೂ ಆಡದೆ ಸುಮ್ಮನೆ ಕುಳಿತಿದ್ದಾರೆ, ಅವರು ಮೌನವ್ರತಧಾರಣೆ ಮಾಡಿದ ಹಾಗೆ ಕಾಣುತ್ತದೆ. ಇವರ ನಾಲಗೆಯನ್ನು ಭಗವಂತ ಅರಣ್ಯ ದಲ್ಲಿಯೇ ಮುಚ್ಚಿ ಇಟ್ಟಿರುವನೋ ಏನೋ. ಮರುಳಾರ್ಯರೆ, ನೀವು ಶೈವ ಧರ್ಮದ ಬಗ್ಗೆ ಎಷ್ಟೋ ಕಡೆ ಪ್ರವಚನ ಮಾಡಿದ್ದೀರಿ. ಚಕ್ರವರ್ತಿಯ ಆಸ್ಥಾನಗಳಲ್ಲೂ ಈ ಬಗ್ಗೆ ಮಾತನಾಡಿದ್ದೀರಿ. ಶೈವ ಧರ್ಮದ ದಂತಕಥೆಗಳಲ್ಲಿನ ದಾರ್ಶನಿಕ ಸತ್ಯವನ್ನು ನಮಗೆ ತಿಳಿಸಿಹೇಳಬಲ್ಲಿರಾ ? ದೇವರು ಒಬ್ಬನೇ ಎಂದು ನನಗಂತೂ ನಂಬಿಕೆಯಿದೆ. ಶೈವ ಧರ್ಮ ಈ ನಂಬಿಕೆಯನ್ನೊಪ್ಪುವುದೋ ಇಲ್ಲವೋ ?”

ಮರುಳಾರ್ಯ ಹೇಳಿದ: "ಮಾನ್ಯ ಮಿತ್ರರೆ, ಪರಮಾತ್ಮನ ಅಸ್ತಿತ್ವತೆಯನ್ನು ನಾನೂ ನಂಬುತ್ತೇನೆ. ಅಜನ್ಮನೂ ಅನಂತನೂ ಅನಾದಿಯೂ ಸಕಲ ವಸ್ತುಗಳ ಜನಕನೂ ಆದ ಪರಮಾತ್ಮನನ್ನು ನಾನು ನಂಬುತ್ತೇನೆ."

ಮಾಧವರಸನೆಂದ: "ಮರುಳಾರ್ಯರೆ, ನಿಮ್ಮ ಈ ಭಗವಂತ ಜಗತ್ತನ್ನು ಸೃಷ್ಟಿಸಿದನೆಂಬ ವಿಚಾರ ನನಗೆ ಗೊತ್ತು. ಅವನ ಅಸ್ತಿತ್ವವನ್ನು ಸಿದ್ಧಗೊಳಿಸುವುದಕ್ಕೆ ಇದೇ ಮುಖ್ಯವಾದ ಆತಂಕವಾಗಬಹುದು. ಸೃಷ್ಟಿಯನ್ನು ರಚಿಸುವ ನಿಶ್ಚಯ ಮಾಡುವುದಕ್ಕೆ ಮೊದಲೇ ಆತ ಅನಾದಿರೂಪದಿಂದ ಇದ್ದನಲ್ಲವೆ? ಆಗ ಅವನ ಸ್ಥಿತಿ ಬಹಳ ವಿಚಿತ್ರವಾಗಿರಬಹುದೆಂದು ನನಗನ್ನಿಸುತ್ತದೆ. ತನ್ನ ಪೂರ್ಣತೆಯನ್ನು ಕಾಪಾಡಿಕೊಳ್ಳಲೆಂದು ಆತ ಕ್ರಿಯಾರಹಿತನಾಗಿರಬೇಕಿತ್ತು. ತನ್ನ ಅಸ್ತಿತ್ವವನ್ನು ಪ್ರಕಟಿಸಲೆಂದು ಕರ್ಮವನ್ನು ಮಾಡಬೇಕಾಗಿ ಬಂದಿತ್ತು. ಆತ ಕರ್ಮ ಮಾಡಿದನೆಂದೂ ನೀವು ಹೇಳುತ್ತೀರಿ. 'ಪೂರ್ಣ'ನಾಗಿದ್ದ ಪರಮಾತ್ಮನಿಗೆ ಇದರ ಅಗತ್ಯವೇನಿತ್ತೊ ತಿಳಿಯದು. ಅದಿರಲಿ. ಆತ ಸೃಷ್ಟಿಯನ್ನು ಹೇಗೆ ರಚಿಸಿದನೆಂಬುದನ್ನು ತಿಳಿಸುವಿರಾ?"

"ಪರಮಾತ್ಮನ ಅಪ್ಪಣೆಯಂತೆ ಬ್ರಹ್ಮ ಈ ಸೃಷ್ಟಿಯನ್ನು ಸೃಷ್ಟಿಸಿದನೆಂದು ಹಿಂದೂ ಧರ್ಮೀಯರೆಲ್ಲ ಬಲ್ಲರು."

"ಹಾಗಾದರೆ ಈ ಬ್ರಹ್ಮ ಯಾರು? ಅವನೇ ಪರಮಾತ್ಮನಲ್ಲವಲ್ಲ?"

"ಪರಮಾತ್ಮನ ಹಲವು ರೂಪಗಳಲ್ಲಿ ಈ ಬ್ರಹ್ಮನೂ ಒಬ್ಬ. ಮಾಧವರಸಾ, ದೇವರನ್ನು ಕುರಿತು ಚೇಷ್ಟೆ ಮಾಡಬಾರದು. ಒಬ್ಬ ಮನುಷ್ಯನಿಗೆ ಅನೇಕ ಹೆಸರುಗಳಿರುತ್ತವೆ. ಹಾಗೇ ಭಗವಂತನಿಗೂ ಸಾವಿರಾರು ಹೆಸರುಗಳಿವೆ. ಸೃಷ್ಟಿಯನ್ನು ರಚಿಸಿದ ಬಳಿಕ ಆತ ಅದನ್ನು ಸುಧಾರಿಸುವದಕ್ಕಾಗಿ ಲೋಕದಲ್ಲಿ ಅವತರಿಸಿ ಬಂದ. ಸೃಷ್ಟಿರಚನೆ ಪೂರ್ಣರೂಪದಿಂದ ನಡೆದಿರಲಿಲ್ಲ. ಒಳ್ಳೆಯದರ ಜೊತೆಗೆ ಕೆಟ್ಟದೂ ಹುಟ್ಟಿಕೊಂಡಿತ್ತು." ಎಂದ ಮರುಳಾರ್ಯ.

"ಒಳ್ಳೆಯದೆಂದರೇನು? ಕೆಟ್ಟದೆಂದರೇನು?"

ಒಂದು ಗಳಿಗೆ ಅಲ್ಲಿ ಶಾಂತತೆಯಿತ್ತು. ಅಷ್ಟರಲ್ಲಿ ಗಂಧಮಾರುತ ಎರಡು ಹೂವುಗಳನ್ನೆತ್ತಿಕೊಂಡು ಹೇಳಿದ.

"ಮಾಧವರಸಾ, ಇಲ್ಲಿ ನೋಡು. ಇದು ಬಿಳಿಯ ಹೂ. ಇದು ಕರಿಯ ಹೂ. ಈ ಬಣ್ಣಗಳ ಭೇದವನ್ನು ಕಂಡು ನಾವು ಚಕಿತರಾಗುತ್ತೇವೆ. ಇದು

ಬಿಳಿಯದು, ಇದು ಕರಿಯದೆಂದು ತಿಳಿದುಕೊಳ್ಳುತ್ತೇವೆ. ಒಂದು ವೇಳೆ ಈ ಹೂವುಗಳಿಗೆ ವಿಚಾರಮಾಡುವ ಶಕ್ತಿಯಿದ್ದಿದ್ದರೆ—ಮಲ್ಲಿಗೆ ಹೂವು ಬಿಳಿಯದಾಗಿರುವುದೇ ಒಳ್ಳೆಯದು, ಕರಿಯದಾಗುವುದು ಕೆಟ್ಟದೆಂದು ಅದೇ ಹೇಳಬಹುದಾಗಿತ್ತು. ಕುರೂಪತೆ ಸರೂಪತೆಯೇ ಆಗಿ ಉಳಿಯುವುದು. ಅದರಲ್ಲೇನೂ ಸಂಶಯವಿಲ್ಲ. ಆದರೆ ವಸ್ತುಗಳೂ ಸುಂದರವಾಗಿ ಬಿಟ್ಟರೆ ಸುಂದರತೆಯೆಂಬ ಶಬ್ದವೂ ಉಳಿಯಲಾರದು. ಅದಕ್ಕೇ ನಾನನ್ನುವುದು—ಕೆಟ್ಟದೆನ್ನುವುದು ಪೂರಾ ನಷ್ಟವಾಗದಿರುವುದೇ ಒಳ್ಳೆಯದು."

"ಇದರ ವಿಚಾರವಾಗಿ ನಾವು ಧಾರ್ಮಿಕ ದೃಷ್ಟಿಕೋನದಿಂದ ಮಾತಾಡಬೇಕು. ಕೆಡುಕಿನಿಂದ ಲೋಕದ ಅವಿನಶ್ವರ ತಾರತಮ್ಯ ನಷ್ಟವಾಗದಿದ್ದರೆ ಕೆಡುಕಿನಿಂದ ಹಾನಿಯಿಲ್ಲ. ಕೆಡುಕನ್ನು ಮಾಡುವ, ಮಾಡದೆ ಸುಮ್ಮನಿರಲಾರದ ಅಪರಾಧಿಗಾಗಿಯೇ ಕೆಡುಕು ಇದೆ."—ಬಿಲ್ಲಾಯಣ.

ದಂಡನಾಯಕನೆಂದ: "ಮಾತು ಬಹಳ ದೊಡ್ಡದಾಯ್ತು."

"ಸಂಸಾರವೆಂಬುದೊಂದು ಲೀಲಾನಾಟಕ. ಈ ನಾಟಕದ ಸೂತ್ರಧಾರಿಯಾದ ಭಗವಂತ ನಮ್ಮೆಲ್ಲರಿಗಾಗಿ ಒಂದೊಂದು ಪಾತ್ರವನ್ನಾರಿಸಿ ಕೊಟ್ಟಿದ್ದಾನೆ. ಒಬ್ಬನು ಭಿಕ್ಷುಕನಾಗಬಹುದು, ಇನ್ನೊಬ್ಬ ರಾಜನಾಗಬಹುದು, ಮತ್ತೊಬ್ಬ ಕುಂಟನಾಗಬಹುದು, ಮಗುದೊಬ್ಬ ಸುಂದರ ಪುರುಷನಾಗಬಹುದು. ಎಲ್ಲಾ ಒಂದೇ ಎಂದು ಭಾವಿಸಿ ನಮ್ಮ ನಮ್ಮ ಪಾತ್ರಗಳನ್ನು ಸರಿಯಾದ ರೀತಿಯಲ್ಲಿ ಅಭಿನಯಿಸಬೇಕು."—ಗಂಧಮಾರುತ.

ಮಾಧವರಸ ಕೈತಟ್ಟುತ್ತ ಹೇಳಿದ: "ಹೌದು, ಹೌದು. ಹಾಗೇ ಮಾಡಬೇಕು. ಕುಂಟನಾದವನು ಕುಂಟುತ್ತ ಹೋಗಬೇಕು. ಹುಚ್ಚನಾದವನು ತನ್ನ ಬೊಬ್ಬೆಯಿಂದ ಗಲಭೆ ಎಬ್ಬಿಸಬೇಕು ದುರಾಚಾರಿಣಿಯಾದ ಹೆಣ್ಣು ಅಪರಾಧಗಳ ಹಿಂದೆ ಅಪರಾಧ ಮಾಡುತ್ತ ಹೋಗಬೇಕು. ಬಂಡುಗಾರ ಬಂಡೆಬ್ಬಿಸಬೇಕು. ಸುಳ್ಳುಗಾರ ಸುಳ್ಳಾಡುತ್ತ ಹೋಗಬೇಕು. ಕೊಲೆಗಾರ ಕೊಲೆ ಮಾಡಬೇಕು. ಈ ಅಭಿನಯ ಮುಗಿದ ಬಳಿಕ ಎಲ್ಲಾ ಅಭಿನೇತೃಗಳೂ ಕವಿಯಿಂದ ಸಮಾನವಾದ ರೀತಿಯಲ್ಲಿ ಸನ್ಮಾನಿತರಾಗಬೇಕು."

ಗಂಧಮಾರುತ ಆಕ್ಷೇಪದ ಧ್ವನಿಯಲ್ಲಿ ಹೇಳಿದ: "ಮಾಧವರಸಾ, ನನ್ನ ವಿಚಾರಗಳನ್ನು ನೀನು ವಿಕೃತಗೊಳಿಸಿಬಿಟ್ಟೆ. ಯುವತಿಯೂ ಲಾವಣ್ಯವತಿಯೂ

ಆದ ಹೆಂಗಸನ್ನು ಭೀಭತ್ಸ ಪಿಶಾಚಿನಿಯನ್ನಾಗಿ ಮಾಡಿದಂತೆ. ದೇವರು, ನ್ಯಾಯ, ಅನಾದಿ ನಿಯಮಗಳನ್ನೇ ಮೊದಲಾದ ಮಹಾ ವಿಷಯಗಳ ಬಗ್ಗೆ ನಿನಗಿರುವ ಅಜ್ಞಾನವನ್ನು ನೋಡಿ ದುಃಖವಾಗುತ್ತದೆ."

"ಒಳಿತು ಕೆಡಕುಗಳ ವಾಸ್ತವತೆಯನ್ನು ನಾನು ನಂಬುತ್ತೇನೆ. ಆದರೆ, ಮನುಷ್ಯನ ಒಂದೇ ಒಂದು ಕೃತಿಯಲ್ಲೂ ಮುಕ್ತಿಯ ಬೀಜವಿರುವುದೆಂದು ನಾನು ತಿಳಿದಿಲ್ಲ. ಮನುಷ್ಯರ ಮುಕ್ತಿಯಲ್ಲಿ ಕೆಡುಕಿನ ಕೈವಾಡವೂ ಇರುತ್ತದೆ." ಎಂದ ಪ್ರದ್ಯುಮ್ನಾಚಾರ್ಯ.

"ಆಹಾ! ಅದು ಹೇಗೆ? ಎಂದು ಆನಂದವರ್ಧನ ಪ್ರಶ್ನಿಸಿದ. ಎಲ್ಲರೂ ಕುತೂಹಲದಿಂದ ಪ್ರದ್ಯುಮ್ನಾಚಾರ್ಯನತ್ತ ದೃಷ್ಟಿ ತಿರುಗಿಸಿದರು. ಅದೇ ವೇಳೆಗೆ ದಾಸಿಯರು ಹಣ್ಣುಗಳ ತಟ್ಟೆಗಳನ್ನು ತಂದಿರಿಸಿದರು. ದೊಡ್ಡದೊಂದು ಫಲವನ್ನು ಬಾಯಿಗಿಟ್ಟುಕೊಂಡು ನುರಿಸುತ್ತ ಪ್ರದ್ಯುಮ್ನಾಚಾರ್ಯ ಹೇಳಿದ:

"ಪರಮಾತ್ಮ ಸೃಷ್ಟಿಯನ್ನು ರಚಿಸಿದ ಬಳಿಕ ಅದರ ಆಡಳಿತ ವ್ಯವಸ್ಥೆಯನ್ನು ವಿಷ್ಣುವಿನ ಕೈಗೊಪ್ಪಿಸಿದ. ವಿಷ್ಣುವಿನ ಸೇವಕರು ಆಡಳಿತ ನಡಸತೊಡಗಿದರು. ರಾಜ್ಯಾಧಿಕಾರಿಗಳಲ್ಲಿರಬೇಕಾದ ನಮ್ರತೆ ಅವರಲ್ಲಿರಲಿಲ್ಲ. ಮನುಷ್ಯರ ಸುಂದರ ಕುಮಾರಿಕೆಯರನ್ನು ನೋಡುತ್ತಲೂ ದೇವದೂತರು ಅವರಿಗೆ ಮರುಳಾಗಿ ಸಂಧ್ಯಾಸಮಯದಲ್ಲಿ ಜಲಾಶಯಗಳ ಬಳಿ ಬಂದು ಅವರೊಡನೆ ಸಂಭೋಗ ಮಾಡತೊಡಗಿದರು. ಈ ಸಂಭೋಗಗಳಿಂದ ಭಯಂಕರ ಜಾತಿಯೊಂದು ಉತ್ಪನ್ನವಾಗಿ ಜಗತ್ತಿನಲ್ಲಿ ಅನ್ಯಾಯ ಕ್ರೌರ್ಯಗಳ ರಾಜ್ಯ ನಡೆಸಿತು. ಬೀದಿಗಳ ಅಕ್ಕಪಕ್ಕದ ಭೂಮಿ ರಕ್ತದಲ್ಲಿ ನೆನೆಯಿತು. ಅದನ್ನೆಲ್ಲ ನೋಡಿ ದೇವದೂತರಿಗೆ ಬಹಳ ಸಂಕಟವಾಯಿತು. ನಿಟ್ಟುಸಿರು ಬಿಡುತ್ತ ಅವರೆಂದುಕೊಂಡರು: "ಇದೆಲ್ಲಾ ನಮ್ಮಿಂದಾಗಿಯೆ ಆಯಿತು. ನಮ್ಮ ದುಷ್ಕೃತ್ಯಗಳ ಫಲವಾಗಿಯೆ ನಮ್ಮ ಮಕ್ಕಳು ವಿಪತ್ತಿನಲ್ಲಿ ಸಿಕ್ಕಿಬೀಳುವಂತಾಯಿತು. ಅದಕ್ಕಾಗಿ ನಮಗೆ ಪ್ರಾಯಶ್ಚಿತ್ತವಾಗಬೇಕು. ಭಗವಂತನೂ ಕೂಡಾ ಇವರಿಗೆ ಪಾವಿತ್ರ್ಯವನ್ನು ತಂದುಕೊಡಲಾರ. ಆಗಬೇಕಾದ್ದು ಆಗಿ ಹೋಯಿತು. ಸೃಷ್ಟಿ ದೂಷಿತವಾಯಿತು. ಏನೇ ಆದರೂ ನಾವು ನಮ್ಮ ಮಕ್ಕಳನ್ನು ತ್ಯಜಿಸಬಾರದು. ಅವರನ್ನು ಸುಖಿಗಳನ್ನಾಗಿ ಮಾಡಲು ಅಸಮರ್ಥರಾದರೆ ಅವರಂತೆಯೇ ನಾವೂ ದುಃಖಿಗಳಾದರಾಯಿತು. ಇವರಿಗೆ ದೇಹಗಳನ್ನು ಕೊಟ್ಟು

ನಾವೇ ತಪ್ಪು ಮಾಡಿದ್ದೇವೆ. ಆ ತಪ್ಪನ್ನು ಸರಿಗೊಳಿಸಲು ನಾವೂ ಅವರ ಹಾಗೇ ದೇಹಧಾರಣ ಮಾಡೋಣ.

"ಅವರೆಲ್ಲರ ಅಂಶಸ್ವರೂಪಿಯಾಗಿ ಒಂದು ದೇವತೆ ಪೃಥ್ವಿಗಿಳಿದು ದಕ್ಷಿಣಾಚಲದ ಸ್ತ್ರೀಯೊಬ್ಬಳ ಗರ್ಭದಲ್ಲಿ ಸೇರಿಕೊಂಡಿತು. ಹುಟ್ಟಿದಾಗ ಅದು ಬಹಳ ದುರ್ಬಲವಾಗಿತ್ತು. ತಂದೆತಾಯಿಗಳು ಅದಕ್ಕೆ ಮಾಯಾದೇವಿಯೆಂದು ಹೆಸರಿಟ್ಟರು. ಮಾಯೆ ಬೆಳೆದು ಅನುಪಮ ಸುಂದರಿಯೆಂದು ಪ್ರಖ್ಯಾತಿಪಡೆದಳು. ತನ್ನ ನಶ್ವರ ಶರೀರದ ಮೂಲಕ ಭಾರೀ ಅಪರಾಧಗಳನ್ನೆಸಗಬೇಕೆಂದು ಆಕೆ ನಿಶ್ಚಯಿಸಿಕೊಂಡಿದ್ದುದರಿಂದ ಪುರುಷರೆಲ್ಲಾ ಅವಳನ್ನು ಪ್ರೀತಿಸತೊಡಗಿದರು. ಲಂಪಟರೂ ಕಾಮುಕರೂ ಆದ ಪುರುಷರು ಅವಳನ್ನು ವಶಪಡಿಸಿಕೊಂಡರು. ಅವಳೂ ಕೂಡಾ ಎಷ್ಟೋ ಪುರುಷರನ್ನು ಭ್ರಷ್ಟಗೊಳಿಸಿದಳು. ತನ್ನ ಸೌಂದರ್ಯದಿಂದಲೇ ಎಷ್ಟೋ ಜನಾಂಗಗಳನ್ನು ನಷ್ಟಗೊಳಿಸಿದಳು. ದರಿಂದ ದೇವದೂತರಿಗೂ ಸಮಾಧಾನವಾಯಿತು. ಆನಂದವನ್ನು ಸೂರೆಗೊಂಡ ಬಳಿಕ ಅವಳಿಗೆ ಸಾವು ಬಂತು. ಆಗಲೂ ಆಕೆಗೆ ತೃಪ್ತಿಯೆನಿಸಲಿಲ್ಲ. ಇನ್ನೊಬ್ಬ ಸ್ತ್ರೀಯಾಗಿ ಜನಿಸಿ ಮತ್ತೂ ಪಾಪಕೃತ್ಯದಲ್ಲಿ ಮುಳುಗಿದಳು. ಅಂದಿನಿಂದಲೂ ಆ ಮಾಯಾದೇವಿಯ ಹುಟ್ಟು ಸಾವು ಹುಟ್ಟುಗಳು ನಡೆದೇ ಇವೆ. ಜಗತ್ತಿನ ಎಲ್ಲಾ ಪಾಪಗಳ ಹೊಣೆಯನ್ನು ಅವಳೇ ವಹಿಸಿಕೊಂಡು ನಮ್ಮನ್ನು ಮುಕ್ತಿಯ ಕಡೆಗೆ ನಡೆಸುತ್ತಿದ್ದಾಳೆ ಆ ಮಹಾತಾಯಿ."

"ಈ ಕಥೆ ಅವಾಸ್ತವವಾದದ್ದೆಂದು ನನಗನ್ನಿಸುತ್ತದೆ. ದೇವದೂತರು ತಾವಾಗಿಯೇ ತಮ್ಮ ಅಪರಾಧಗಳನ್ನೊಪ್ಪಿಕೊಳ್ಳುವುದು ಅಸಂಭವ." ಎಂದ ಭಿಲ್ಲಾಯಣ.

"ಅದಿರಲಿ ಆಚಾರ್ಯರೆ, ಆದರೆ ಸದ್ಯಕ್ಕೆ ಈ ಮಾಯಾದೇವಿ ಯಾವ ದೇಶದಲ್ಲಿ ಯಾವ ರೂಪದಲ್ಲಿ ಅವತರಿಸಿದ್ದಾಳೆ?" ಎಂದು ಆನಂದವರ್ಧನ ಪ್ರಶ್ನಿಸಿದ.

"ಯಾಕೆ ಇಷ್ಟೊಂದು ಕುತೂಹಲ? ನಿನ್ನ ಬಾಯಲ್ಲಿ ನೀರೂರಿತೇನೋ!" ಎಂದು ಚಂದ್ರರಾಜ ಗೇಲಿ ಮಾಡಿದ.

"ಇಂಥಾ ರಹಸ್ಯಗಳನ್ನು ಕಂಡುಹಿಡಿಯಬೇಕಾದರೆ ಮನುಷ್ಯ ಬಹಳ ಬುದ್ಧಿವಂತನಾಗಿರಬೇಕಾಗುತ್ತದೆ. ಪತಿತವಾದ ಸಂಸಾರದಲ್ಲಿದ್ದುಕೊಂಡು

ಚಿಕ್ಕ ಮಕ್ಕಳಂತೆ ಶಬ್ದಗಳೊಡನೆ ಆಟವಾಡುವ ಕವಿಗಳಿಗೆ ಇಷ್ಟು ಬುದ್ಧಿಯೆಲ್ಲಿಂದ ಬರಬೇಕು ?" ಎಂದ ಪ್ರದ್ಯುಮ್ನಾಚಾರ್ಯ.

"ಕವಿಗಳನ್ನೇಕೆ ದೂಷಿಸುತ್ತೀರಿ ಆಚಾರ್ಯರೆ ? ಅವರು ಭಗವಂತನ ಪ್ರೀತಿಪಾತ್ರರಾಗಿದ್ದಾರೆ. ಕವಿಗಳನ್ನು ದೂಷಿಸಿದರೆ ದೇವರೂ ಅಪ್ರಸನ್ನನಾಗಬಹುದು. ಸ್ವಯಂ ಅಮರರೇ ಛಂದೋರೂಪದಲ್ಲಿ ನಿಯಮಗಳನ್ನು ರಚಿಸಿದರು. ದೇವವಾಣಿಗಳೆಲ್ಲಾ ಕಾವ್ಯದಲ್ಲೇ ಇವೆ. ಭಜನೆಯೂ ಕೂಡಾ ಕಾವ್ಯವೇ. ಕವಿಗಳು ಆತ್ಮಜ್ಞಾನಿಗಳಾಗಿರುತ್ತಾರೆ. ಅವರಿಗೆ ಅರ್ಥವಾಗದ್ದು ಯಾವುದೂ ಇಲ್ಲ." ಎಂದ ದಂಡನಾಯಕ.

"ಹಾಗಾದರೆ ನನ್ನ ಪ್ರಶ್ನೆಗೆ ಉತ್ತರ ಕೊಡಲಿ. ಅನಾದಿ ಕಾಲದ ಆ ಮಾಯಾದೇವಿ ಇಂದು ಎಲ್ಲಿದ್ದಾಳೆ ? ಯಾವ ಹೆಸರಿನಲ್ಲಿ ವ್ಯವಹರಿಸುತ್ತಿದ್ದಾಳೆ ?"

"ಅದಕ್ಕೇಕೆ ಅಷ್ಟು ಒದ್ದಾಡಿಕೊಳ್ಳುತ್ತೀರಿ ಆಚಾರ್ಯರೆ ? ನಿಮ್ಮ ಪ್ರಶ್ನೆಯ ಉತ್ತರ ನಿಮ್ಮೆದುರಿನಲ್ಲೇ ಇದೆಯಲ್ಲ !"

"ಎದುರಿನಲ್ಲಿ ?"

"ಹೌದು. ಇಲ್ಲೇ ಇದೆ. ನಮ್ಮ ಜೊತೆಯಲ್ಲೇ ಇದೆ. ನಮ್ಮನ್ನೇ ನೋಡುತ್ತಾ ಇದೆ. ನಮ್ಮ ಜೊತೆಗೆ ಮಾತಾಡುತ್ತಾ ಇದೆ."

"ಅರ್ಥವಾಗಲಿಲ್ಲ." ಎಂದ ಆಚಾರ್ಯ, ಗೊಂದಲದ ಧ್ವನಿಯಲ್ಲಿ.

"ಯಾರಿಗೆ ಬುದ್ಧಿ ಕಡಿಮೆಯೆನ್ನುವುದು ಈಗ ಎಲ್ಲರಿಗೂ ಗೊತ್ತಾಯಿತು !" ಎಂದ ಬಿಲ್ಹಣ.

"ನಮ್ಮ ಮಗ್ಗುಲಲ್ಲೇ ಕುಳಿತಿರುವ ಈ ಮನಮೋಹಿಸಿ, ಈ ತ್ರಿಲೋಕ ಸುಂದರಿ. ಈ ಮುಕ್ತಾದೇವಿಯೇ ಮಾಯೆಯ ಅವತಾರವಲ್ಲದೆ ಬೇರಾರು ಇರಲು ಸಾಧ್ಯ ?"

ಕಾಲಿಂದಿಯೆಂದಳು: "ನಿಜವಾಗಿಯೂ ಈಕೆಯೇ ಮಾಯಾದೇವಿಯೇ ದಂಡನಾಯಕರೆ ? ನನಗಂತೂ ನಂಬುವುದಕ್ಕೇ ಆಗಲೊಲ್ಲದು. ಸಾವಿರಾರು ವರ್ಷಗಳ ವರೆಗೆ ಸಾವಿರಾರು ಪಾಪಗಳನ್ನು ಮಾಡಿದವಳು. ಸಾವಿರಾರು ಪ್ರಿಯಕರರ ಸರ್ವನಾಶ ಮಾಡಿದವಳು. ನೂರಾರು ರಾಜ್ಯಗಳನ್ನು ನೆಲಸಮಗೊಳಿಸಿದವಳು....ಛೀ. ಛೆ...."

ಆನಂದವರ್ಧನ ಮುಕ್ತಾದೇವಿಯ ಬಳಿ ಬಂದು ಪಿಸು ದನಿಯಲ್ಲಿ ಹೇಳಿದನು:

“ನಿಜವಾಗಿಯೂ ನೀನೇ ಮಾಯಾದೇವಿಯಾಗಿದ್ದರೆ ಮೊದಲು ನನ್ನನ್ನೇ ನಿನ್ನ ಮಾಯೆಯಲ್ಲಿ ಮುಳುಗಿಸು. ನಿನಗಾಗಿ ನನ್ನ ಸರ್ವಸ್ವವನ್ನು ನಾಶ ಮಾಡಿಕೊಳ್ಳಲು ನಾನು ಸಿದ್ಧನಿದ್ದೇನೆ.”

“ಮೊದಲೇ ಯಾಕೆ ಬರಲಿಲ್ಲ ನೀನು ನನ್ನ ಹತ್ತಿರ ?”

“ನಿನ್ನನ್ನು ನೋಡಿದರೇನೇ ನನಗೆ ಹೆದರಿಕೆಯಾಗುತ್ತಿತ್ತು.”

“ಹೇಡಿಗಳನ್ನು ಮುಕ್ತಾ ಪ್ರೀತಿಸುವುದಿಲ್ಲ.”

“ಅಲ್ಲ, ಅಲ್ಲ. ನಾನೇನು ಹೇಡಿಯಲ್ಲ. ನಿನಗಾಗಿ ನಾನು ಮಹಾ ವೀರನಾಗಬಲ್ಲೆ. ಇಂದ್ರನ ಶಿರಸ್ಸನ್ನೂ ಕತ್ತರಿಸಿ ತಂದು ನಿನ್ನ ಚರಣಗಳ ಮೇಲೆ ಅರ್ಪಿಸಬಲ್ಲೆ.”

ಮುಕ್ತಾ ಮುಗುಳ್ನಗುತ್ತಾ ಹೇಳಿದಳು:

“ಮದ್ಯ ತಲೆಗೇರಿರಬೇಕು. ಮನೆಗೆ ಹೋಗಿ ಮಲಗಿಕೊಂಡು ಬಿಡು.”

ಆನಂದವರ್ಧನನೂ ನಗುನಗುತ್ತ ಸರಸ್ವತಿಯ ಕಡೆಗೆ ನಡೆದ. ಆತ ಹೋಗುತ್ತಲೂ ಗಂಧಮಾರುತ ಹತ್ತಿರ ಬಂದ.

“ನಾನು ನಿನ್ನನ್ನು ಪ್ರೀತಿಸಬಹುದೇ ಮುಕ್ತಾಂಗಿನೀ ?”

“ನೀವು ಬಹಳ ಸಭ್ಯರೆಂದು ನಾನು ಭಾವಿಸಿದ್ದೆ. ನಿಮಗೂ ಇದೇ ಹುಚ್ಚೇ ?”

“ನಾನೊಬ್ಬ ಸಿದ್ಧಪುರುಷ. ನನ್ನಂಥವರಿಗೆ ಈ ಲೋಕದ ನಿಯಮ ನಿರ್ಬಂಧಗಳು ಅನ್ವಯಿಸುವುದಿಲ್ಲ.”

“ನನ್ನಂಥವಳ ಆಲಿಂಗನದಿಂದ ನಿಮ್ಮ ಆತ್ಮಕ್ಕೆ ಕಲಂಕ ಹತ್ತುವುದಿಲ್ಲವೆ?”

“ಆತ್ಮಕ್ಕೂ ದೈಹಿಕ ಸುಖಕ್ಕೂ ಏನೂ ಸಂಬಂಧವಿಲ್ಲ.”

“ಹಾಗಾದರೆ ದಯಮಾಡಿಸಿರಿ. ನನಗೆ ತನುಮನಗಳೆರಡರ ಪ್ರೇಮ ಬೇಕು. ನೀವು, ಕವಿಗಳೂ ದಾರ್ಶನಿಕರೂ ಕೇವಲ ಪಶುಗಳ ಹಾಗಿರುತ್ತೀರಿ.”

“ಏಳು ಮುಕ್ತಾ, ಇನ್ನು ಹೊರಡೋಣ.” ಎಂದ ಸಿದ್ಧನಾಥ.

“ನಾನು ಹೊರಡುವುದಕ್ಕೆ ಅಪ್ಪಣೆಯೇ ದಂಡನಾಯಕರೆ ?” ಎಂದಳು ಮುಕ್ತಾ.

## ೭

ತನ್ನ ನಿಲುವಂಗಿಯನ್ನು ತೆಗೆದೊಗೆದು ಸಿದ್ಧನಾಥ ಹೇಳಿದ:

"ಅವರ ಮಾತುಗಳನ್ನೆಲ್ಲ ಕೇಳಿದಿಯಲ್ಲ ಮುಕ್ತಾ? ಜಗತ್ತಿನಲ್ಲೇ ಇವರಂಥ ಮೂರ್ಖರು ಬೇರೆ ಇರಲಾರರು. ಎಂಥೆಂಥ ಅಸಹ್ಯ ಮಾತುಗಳವು! ಸೃಷ್ಟಿಕರ್ತನಾದ ಭಗವಂತನನ್ನು ಅವರು ನರಕದ ಕೀಟಗಳೊಂದಿಗೆ ಎಳೆದಾಡಿದರು. ಒಳ್ಳೆಯದನ್ನು ಕೆಟ್ಟದರೊಡನೆ ಸೇರಿಸಿ ಅವಹೇಳನ ಮಾಡಿದರು. ದೇವರನ್ನು ಅವಮಾನಗೊಳಿಸಿದರು. ಮಾಯೆಯನ್ನು ಮೆಚ್ಚಿಕೊಂಡರು. ಎಲ್ಲಕ್ಕೂ ಹೆಚ್ಚಿನ ದುಃಖದ ಸಂಗತಿಯೆಂದರೆ ಆ ಮರುಳಾರ್ಯನದು. ಆ ಕತ್ತಲೆಯ ಹದ್ದು, ಆ ದುರ್ಗಂಧಮಯ ಪಶು, ಆ ದುಶ್ಚರಿತ್ರನೂ ಆಗಾಗ ಬಾಯಿ ಹರಿಬಿಡುತ್ತಿದ್ದ. ಪ್ರಿಯ ಮುಕ್ತಾ, ಆ ಹೊಲಸು ಕ್ರಿಮಿಗಳು ನಿನ್ನ ಮೇಲೆ ಬೀಳಲು ಬರುತ್ತಿದ್ದರು. ತಮ್ಮ ತುಚ್ಛ ಸ್ಪರ್ಶದಿಂದ ನಿನ್ನನ್ನು ಅಪವಿತ್ರಗೊಳಿಸುತ್ತಿದ್ದರು. ಆ ಮುದಿಯರಿಗೂ ಕೂಡಾ ಲಜ್ಜೆಯಿರಲಿಲ್ಲ. ಈ ಪಾಪಿಗಳ ಸಹವಾಸ ಎಷ್ಟು ತುಚ್ಛವಾದದ್ದೆಂದು ಈಗಲಾದರೂ ಗೊತ್ತಾಯಿತಲ್ಲವೆ ನಿನಗೆ? ಆ ನೀಚ ಕವಿಗಳ ಹಾಗೆ ತತ್ವಜ್ಞಾನಿಗಳ ಹಾಗೆ ನೀನೂ ತಪ್ಪು ಹಾದಿ ತುಳಿಯುವಿಯಾ? ಅವರ ಜೊತೆಗಾರ್ತಿಯರಾದ ಆ ಹೆಣ್ಣು ಕೋತಿಗಳ ಹಾಗೆ ನೀನೂ ನಾಚಿಕೆಗೇಡಿಯಾಗುವಿಯಾ? ಹೇಳು. ನೀನೂ ಅವರ ಹಾಗೇ ಆಗುವಿಯಾ?"

ಭೋಜನ ಕೂಟದಲ್ಲಿನ ಮಾತುಕತೆಗಳಿಂದ ಮುಕ್ತಾದೇವಿಗೂ ಅಸಹ್ಯವೆನಿಸಿತ್ತು. ಅವಳು ನೀಳವಾಗಿ ಉಸುರುಗರೆದು ಹೇಳಿದಳು:

"ತಂದೇ, ನನಗೂ ಬಹಳ ಬೇಜಾರಾಗಿದೆ. ನನಗೆ ಶಾಂತಿಯೆಲ್ಲಿ ಸಿಕ್ಕೀತು? ನನ್ನ ಹಣೆ ಸುಡುತ್ತಿದೆ, ತಲೆ ಹಾರುತ್ತಿದೆ. ಕೈಗಳು ನೋಯುತ್ತಿವೆ."

ಸಿದ್ಧನಾಥ ಕನಿಕರದಿಂದ ಅವಳನ್ನು ದಿಟ್ಟಿಸುತ್ತ ಹೇಳಿದ:

"ತಂಗೀ, ಧೈರ್ಯ ಬಿಡಬೇಡ. ನಿನಗೆ ಶಾಂತಿ ಲಭಿಸುವ ಸಮಯ ಸಮೀಪಿಸಿದೆ."

ಅವರು ಮುಕ್ತಾದೇವಿಯ ಗೃಹಕ್ಕೆ ಬಂದರು. ಕುಂಜ ವನದಲ್ಲಿಯ ಶಿಲಾಸನವೊಂದರಲ್ಲಿ ದೇಹ ಚೆಲ್ಲುತ್ತ ಮುಕ್ತಾ ಉದ್ಗಾರ ತೆಗೆದಳು.

"ಏನು ಮಾಡಲಿ? ನಾನೇನು ಮಾಡಲಿ?"

ಸಿದ್ಧನಾಥ ಗಂಭೀರವಾಗಿ ಹೇಳಿದ:

"ನಿನ್ನನ್ನು ಕರೆದೊಯ್ಯಲು ಬಂದಿರುವವನ ಜೊತೆಗೆ ಹೊರಟು ಬಿಡು. ತೋಟಗಾರ ಸುಗಂಧ ದ್ರವ್ಯಗಳನ್ನು ತಯಾರಿಸಲು ಹೂವುಗಳನ್ನು ತೆಗೆಯುವಂತೆ, ನಿನ್ನನ್ನು ಸಂಸಾರದಿಂದ ತೆಗೆದು ಬೇರ್ಪಡಿಸಿ ಅಮರತ್ವದ ಮಡಿಲಿಗೊಯ್ಯಲು ಭಗವಂತ ಬಂದಿದ್ದಾನೆ. ಕೇಳು. ಶ್ರೀಶೈಲ ಪರ್ವತದಲ್ಲಿ ನಮ್ಮ ಆಶ್ರಮದ ಹತ್ತಿರದಲ್ಲೇ ಶೈವಪಂಥೀಯ ಸಂನ್ಯಾಸಿನಿಯರದೊಂದು ಆಶ್ರಮವುಂಟು. ಅಲ್ಲಿ ನೆಲಸಿ ಸಾಧನೆ ಮಾಡುವವರು ಖಂಡಿತವಾಗಿಯೂ ಮುಕ್ತಿ ಪಡೆಯುತ್ತಾರೆ. ಅವರ ಕಾಲು ನೆಲದ ಮೇಲಿದ್ದರೂ ಮಸ್ತಕ ಕೈಲಾಸದಲ್ಲಿರುತ್ತದೆ. ಈ ಜಗತ್ತಿನಲ್ಲಿಯೇ ಅವರು ದೇವದೂತರ ಹಾಗಿರುತ್ತಾರೆ ಭಗವಂತನ ಪ್ರೀತಿಗೆ ಪಾತ್ರರಾಗಲೆಂದು ಅವರು ದಾರಿದ್ರ್ಯವನ್ನಪ್ಪಿಕೊಳ್ಳುತ್ತಾರೆ. ಆವನ ಕೃಪಾದೃಷ್ಟಿಯನ್ನು ಸೆಳೆಯಲೆಂದು ನಮ್ರರಾಗಿ ವರ್ತಿಸುತ್ತಾರೆ. ಆವನೊಡನೆ ಸಮ್ಮಿಲಿತರಾಗಲೆಂದು ಸಾಧ್ವಿಯರಾಗಿ ವರ್ತಿಸುತ್ತಾರೆ. ಭಗವಂತ ತೋಟಗಾರನ ವೇಷದಲ್ಲಿ ಪ್ರತಿದಿನವೂ ಅವರ ಹತ್ತಿರ ಬಂದು ಭೇಟಿ ಕೊಡುತ್ತಾನೆ. ಆ ಪವಿತ್ರ ಆಶ್ರಮಕ್ಕೆ ನಿನ್ನನ್ನು ಕರೆದೊಯ್ಯುತ್ತೇನೆ. ಆ ಮಹಾಸ್ತ್ರೀಯರ ಸಹವಾಸದಲ್ಲಿ ಪವಿತ್ರಳಾಗುವ ಅವಕಾಶ ನಿನಗೂ ಪ್ರಾಪ್ತವಾಗುವುದು. ತಂಗಿಯೊಬ್ಬಳ ದಾರಿ ಕಾಯುವಂತೆ ಅವರು ನಿನ್ನ ದಾರಿ ಕಾಯುತ್ತಿದ್ದಾರೆ. ಅವರೆಲ್ಲರ ತಾಯಿಯಂತಿರುವ ಆಶ್ರಮದ ಮುಖ್ಯಾಧಿಕಾರಿಣಿ ಹೈಮವತಿದೇವಿ. ಆಶ್ರಮದ ದ್ವಾರದಲ್ಲಿಯೇ ನಿಂತು ನೀನೆಂದು ಬರುವಿಯೋ ಎಂದು ನಿರೀಕ್ಷಿಸುತ್ತಿದ್ದಾಳೆ. ಬಾ ಮಗಳೇ, ಅಲ್ಲಿಗೆ ಹೋಗೋಣ."

"ಹೈಮವತೀದೇವಿ! ಕಾಂಚೀ ನಗರದ ಮಹಾರಾಜನ ಪುತ್ರಿ, ಚಕ್ರವರ್ತಿಯ ಸೋದರಸೊಸೆ ಹೈಮವತೀದೇವಿಯೇ?"

"ಹೌದು ತಾಯಿ. ಆ ಮಹಾ ಮಹಿಳೆಯೇ ಸಂಸಾರವನ್ನು ತ್ಯಜಿಸಿ ವಿರಕ್ತಳಾಗಿ ಸಂನ್ಯಾಸಿನಿಯರ ಆಶ್ರಮದ ಸಂಚಾಲಕತ್ವ ವಹಿಸಿಕೊಂಡು ಭಗವಂತನ ಕೃಪೆಗೆ ಪಾತ್ರಳಾಗಿದಾಳೆ. ವಿಲಾಸ ವೈಭವಗಳಲ್ಲಿ ಹುಟ್ಟಿ, ಬಹು ಮೂಲ್ಯ ವಸ್ತ್ರಗಳನ್ನು ಧರಿಸಿ, ರಾಜಕುಮಾರಿಯಾಗಿ ಮೆರೆದ ಆ ಶ್ರೀದೇವಿಯೇ ಸ್ವಸಂತೋಷದಿಂದ ಎಲ್ಲವನ್ನೂ ಬಿಟ್ಟು ಒರಟು ಬಟ್ಟೆ ಧರಿಸಿಕೊಂಡು ಪರಮಾತ್ಮನ ಸೇವಕಿಯಾಗಿದಾಳೆ."

ಮುಕ್ತಾ ಉದ್ವಿಗ್ನಳಾಗಿ ಎದ್ದು ಹೇಳಿದಳು:

"ನಾನೂ ಬರುತ್ತೇನೆ ತಂದೇ! ನನ್ನನ್ನು ಅಲ್ಲಿಗೆ ಕರೆದೊಯ್ಯಿರಿ."

ತನ್ನ ವಿಜಯವನ್ನು ಪೂರ್ತಿಗೊಳಿಸುವ ಉದ್ದೇಶದಿಂದ ಸಿದ್ಧನಾಥ ಹೇಳಿದ:

"ನಿನ್ನನ್ನು ಆಶ್ರಮಕ್ಕೆ ಕರೆದೊಯ್ದು ಪ್ರತ್ಯೇಕವಾದ ಕೋಣೆಯೊಂದರಲ್ಲಿ ಇರಿಸುವ ವ್ಯವಸ್ಥೆ ಮಾಡುತ್ತೇನೆ. ಅಲ್ಲಿ ಕೂತುಕೊಂಡು ನೀನು ಅತ್ತು ಅತ್ತು ನಿನ್ನ ಪಾಪಗಳ ಪ್ರಾಯಶ್ಚಿತ್ತ ಮಾಡಿಕೊಳ್ಳುವಿಯಂತೆ. ನಿನ್ನ ಕಲಂಕವೆಲ್ಲಾ ತೊಳೆದು ಹೋಗುವ ವರೆಗೂ ನೀನು ಆಶ್ರಮದ ಇತರ ಸ್ತ್ರೀಯರೊಡನೆ ಸೇರುವುದುಚಿತವಾಗಲಾರದು. ನಿನ್ನ ಆ ಕೋಣೆಯ ಬಾಗಿಲಿಗೆ ನಾನೊಂದು ಬೀಗ ಹಾಕಿಬಿಡುತ್ತೇನೆ. ಸ್ವಯಂ ಭಗವಂತನೇ ಬಂದು ನಿನ್ನ ಪಾಪಗಳನ್ನು ಕ್ಷಮಿಸಿ ಆ ಬೀಗ ತೆಗೆದಾನು. ಆತ ಬರುವುದರಲ್ಲಿ ನಿನಗೆ ಸಂಶಯವಿಲ್ಲವಷ್ಟೆ? ನಿನ್ನ ಕಂಬನಿಗಳನ್ನೊರೆಸುವುದಕ್ಕಾಗಿ ತನ್ನ ಪ್ರಕಾಶಮಯ ಬೆರಳುಗಳನ್ನಾತ ನಿನ್ನ ಕಣ್ಣುಗಳ ಮೇಲಾಡಿಸಿದಾಗ ನಿನ್ನ ಶರೀರ ಎಷ್ಟು ಪುಲಕಿತವಾಗಬಹುದು."

ಮುಕ್ತಾ ಮತ್ತೆ ಹೇಳಿದಳು:

"ತಂದೇ, ನನ್ನನ್ನು ಹೈಮವತೀದೇವಿಯ ಹತ್ತಿರ ಕರೆದೊಯ್ಯಿರಿ."

ಸಿದ್ಧನಾಥ ಆನಂದಮಗ್ನನಾಗಿ ಸುತ್ತಲೂ ದೃಷ್ಟಿ ಬೀರಿದ. ಅವನ ಕಣ್ಣುಗಳು ಈಶ್ವರೀಯ ಪ್ರಕಾಶವನ್ನು ಉತ್ಸಾಹದಿಂದ ಪಾನ ಮಾಡತೊಡಗಿದುವು. ಅದೇ ಸಮಯದಲ್ಲಿ ಮುಕ್ತಾದೇವಿಯ ಮನೆಯ ಮಹಾದ್ವಾರ ಅವನ ದೃಷ್ಟಿಯ ಅಳವಿನಲ್ಲಿ ಬಂತು.

"ಮುಕ್ತಾ, ನಾವು ಈಗಿಂದೀಗಲೇ ಇಲ್ಲಿಂದ ಹೊರಟುಬಿಡೋಣ. ಆದರೆ ಆದಕ್ಕೆ ಮೊದಲು ನೀನು ಒಂದೆರಡು ಕೆಲಸ ಮಾಡಬೇಕು. ನಿನ್ನ ಹಿಂದಿನ

ಅಪರಾಧಗಳ ಸಾಧನಗಳೂ ಸಾಕ್ಷಿಗಳೂ ಸಹಕಾರಿಗಳೂ ಆದ ಮಂಚಗಳನ್ನೂ ಪರದೆಗಳನ್ನೂ ಆಸನಗಳನ್ನೂ ಸುಗಂಧ ಪಾತ್ರೆಗಳನ್ನೂ ನಗ್ನ ಮೂರ್ತಿಗಳನ್ನೂ ಹೀಗೇ ಬಿಟ್ಟುಹೋಗುವುದೊಳ್ಳೆಯದಲ್ಲ. ನಿನ್ನ ಪಾಪಾಚರಣೆಯ ಕಥೆ ಸಾರುತ್ತಾ ಇವು ಇಲ್ಲೇ ಇದ್ದು ಬಿಡಬಾರದು. ಭೂತಗಳ ನಿವಾಸಸ್ಥಾನಗಳಂತಿರುವ ಈ ನಿನ್ನ ವಸ್ತುಗಳು ಅರಣ್ಯದವರೆಗೂ ನಿನ್ನ ಬೆನ್ನುಬಿದ್ದು ಬರಬಹುದೊ ಏನೊ. ಅದಕ್ಕಾಗಿಯೇ ಈಗಲೇ ಇವುಗಳನ್ನೆಲ್ಲಾ ನಷ್ಟಗೊಳಿಸಿ ಬಿಡುವುದೊಳ್ಳೆಯದು. ಸೇವಕರನ್ನು ಕರೆದು ಬೆಂಕಿಯನ್ನು ತಯಾರಿಸಲು ಹೇಳು. ಅದರಲ್ಲಿ ನಿನ್ನ ಈ ಹೇಯ ಸಂಪತ್ತೆಲ್ಲಾ ಸುಟ್ಟು ಭಸ್ಮವಾಗಲಿ."

"ಹಾಗೇ ಆಗಲಿ ತಂದೇ!" ಎಂದಳು ಮುಕ್ತಾ: "ಜಡವಸ್ತುಗಳಲ್ಲಿ ಪಿಶಾಚಗಳಿರುತ್ತವೆನ್ನುವುದನ್ನು ನಾ ಬಲ್ಲೆ. ಆಗಾಗ ರಾತ್ರಿ ಕಾಲದಲ್ಲಿ ಈ ಪಿಶಾಚಗಳು ಮಾತಾಡುತ್ತವೆ. ಚಟಪಟ ಸದ್ದು ಮಾಡುತ್ತವೆ. ವಿಚಿತ್ರ ಬೆಳಕನ್ನೂ ಬೀರುತ್ತವೆ. ಈ ಕುಂಜವನದಲ್ಲಿ ಸ್ನಾನದ ಕೊಳದ ಬಳಿ ನಗ್ನ ಮೂರ್ತಿಯೊಂದಿದೆಯಲ್ಲ. ಅದು ಒಂದು ದಿವಸ ಜೀವಂತ ವ್ಯಕ್ತಿಯಂತೆ ತಲೆ ಅಲುಗಾಡಿಸಿ ಮತ್ತೆ ಮೊದಲಿನಂತೆ ಸ್ತಬ್ಧವಾದುದು ಕಾಣಿಸಿತ್ತು. ಅಂಜಿಕೆಯಿಂದ ನನ್ನ ಮೈಯೆಲ್ಲಾ ನಡುಗಿತ್ತು. ಈ ವಿಚಿತ್ರ ವಿಷಯವನ್ನು ಮಾಧವರಸನಿಗೆ ತಿಳಿಸಿದಾಗ ಆತ ನಕ್ಕುಬಿಟ್ಟಿದ್ದ. ಆ ಮೂರ್ತಿಯಲ್ಲಿ ಮಾಟಗಾರಿಕೆಯಿರಬಹುದೆಂದು ಅವನಿಗನ್ನಿಸಿತ್ತು. ನನ್ನ ಸೌಂದರ್ಯಕ್ಕೂ ಮರುಳಾಗದ ಸರದಾರನೊಬ್ಬ ಆ ಮೂರ್ತಿಯನ್ನು ಕಂಡು ವಾಸನಾಗ್ರಸ್ತನಾಗಿದ್ದ. ಮೂಕ ಮೂರ್ತಿಯನ್ನೇ ನೋಡಿ ಹುಚ್ಚರಾಗುವ ಪುರುಷರು ನನ್ನನ್ನು ನೋಡಿ ಬಿದ್ದು ಸಾಯುವುದರಲ್ಲೂ ಆಶ್ಚರ್ಯವಿಲ್ಲ. ಭಾರಿ ಭಾರಿ ಸಂಕಟಗಳನ್ನು ನಾನು ಎದುರಿಸಬೇಕಾಯಿತು. ಇನ್ನು ಅಂಥಾ ದುರವಸ್ಥೆ ನನಗಿಲ್ಲವಷ್ಟೆ?"

"ಅದರ ಬಗ್ಗೆ ಸಂದೇಹವೇ ಬೇಡ."

"ಈಗ ನನಗೆ ಬಹಳ ಸಮಾಧಾನವಾಯಿತು. ಆದರೆ, ತಂದೇ, ಎಷ್ಟೋ ವರ್ಷಗಳ ಪರಿಶ್ರಮದಿಂದ ಸಂಗ್ರಹಿಸಲ್ಪಟ್ಟ ಈ ಕಲಾಕೌಶಲ್ಯದ ವಸ್ತುಗಳನ್ನೆಲ್ಲ ಸುಟ್ಟೇ ಬಿಡಬೇಕೆನ್ನುತ್ತೀರಾ? ಇವು ಹೀಗೇ ಇದ್ದರೂ ಏನು ಹಾನಿ? ನನ್ನ ಸುಂದರ ಪರದೆಗಳು ಬೆಂಕಿಗೆ ಬಿದ್ದು ಭಸ್ಮವಾಗುವುದನ್ನು ನೋಡಿ ಸಹಿಸಲು ನನ್ನಿಂದಾಗುವಂತಿಲ್ಲ. ಅಂಥಾ ಪರದೆಗಳು ಜಗತ್ತಿನಲ್ಲಿ

ಬೇರೆ ಯಾರ ಹತ್ತಿರವೂ ಸಿಕ್ಕುವುದಿಲ್ಲ. ಇವುಗಳನ್ನು ನನಗೆ ಕೊಟ್ಟವರು ಇವುಗಳಿಗಾಗಿ ಅಪಾರ ಹಣ ವ್ಯಯಿಸಿದ್ದಾರೆ. ನನ್ನ ಹತ್ತಿರ ಅಮೌಲ್ಯ ಪಾತ್ರೆ ಗಳೂ ಚಿತ್ರಗಳೂ ಮೂರ್ತಿಗಳೂ ಇವೆ. ದೂರದೂರದ ದೇಶಗಳಿಂದ ಇವು ಗಳನ್ನು ಬಹಳ ಪರಿಶ್ರಮದಿಂದ ತಂದಿರಿಸಲಾಗಿದೆ. ಇವನ್ನೆಲ್ಲಾ ನಾಶಗೊಳಿಸು ವುದು ಅಗತ್ಯವೆಂದು ನನಗನಿಸುವುದಿಲ್ಲ."

"ನಿನ್ನ ಗತಜೀವನದ ಚಿಹ್ನೆಯೇ ಉಳಿಯಬಾರದು ಮುಕ್ತಾ. ಅದ ಕ್ಕೆಂದೇ ಇವುಗಳನ್ನು ಸುಡುವುದು."

"ಹಾಗಿದ್ದರೆ ಅಡ್ಡಿಯೇನೂ ಇಲ್ಲ. ನೀವು ಹೇಳುವಂತೆಯೇ ಆಗಲಿ."

ಸಿದ್ಧನಾಥನ ಜೊತೆಯಲ್ಲಿ ಅವಳು ತನ್ನ ಮನೆಯಲ್ಲಿ ಪ್ರವೇಶಿಸಿದಳು. ಸೇವಕನನ್ನು ಕೂಗಿ, ಮನೆಯ ದಾಸಿಯರನ್ನೆಲ್ಲ ಕರೆದು ತರುವಂತೆ ಸೂಚಿಸಿ ದಳು. ಅಡುಗೆಯವರು ಬಂದರು, ತೋಟಿಗರು ಬಂದರು, ಸಜ್ಜೆವನೆಯ ದಾಸಿ ಯರು ಬಂದರು, ದಾಯಿಯರು ಬಂದರು, ಬೇಟೆಗಾರರು ಬಂದರು, ಗಾಯಕರು ವಾದಕರು ಬಂದರು.

ಸಿದ್ಧನಾಥನತ್ತ ಬೆರಳು ತೋರುತ್ತ ಮುಕ್ತಾ ಹೇಳಿದಳು:

"ಇವರು ಹೇಗೆ ಹೇಳುವರೋ ಹಾಗೆ ಮಾಡಿರಿ. ಇವರು ಭಗವಂತನ ಪ್ರತಿನಿಧಿಯಾಗಿ ಬಂದಿದ್ದಾರೆ. ನಿಮ್ಮಲ್ಲಿ ಯಾರಾದರೂ ಇವರು ಹೇಳಿದಂತೆ ನಡೆದುಕೊಳ್ಳದಿದ್ದರೆ ಆಗಿಂದಾಗ ಸತ್ತುಹೋಗುವಿರಿ."

ಅರಣ್ಯವಾಸಿಗಳಾದ ಮಹಾತ್ಮರು ತಮ್ಮನ್ನು ಅವಮಾನಗೊಳಿಸುವ ದುಷ್ಟರಿಗೆ ಶಾಪವಿತ್ತು ಸುಟ್ಟುಬಿಡಬಲ್ಲರೆಂದೇ ಅವಳು ಭಾವಿಸಿದ್ದಳು.

ದಾಸಿಯರನ್ನೆಲ್ಲ ಒಳಗೆ ಕಳುಹಿಸಿ ಸಿದ್ಧನಾಥ ಉಳಿದವರನ್ನು ಕುರಿತು ಹೇಳಿದ:

"ಮನೆಯೆದುರಿನ ಅಂಗಳದಲ್ಲಿ ದೊಡ್ಡ ಉರಿ ಹಚ್ಚಿರಿ. ಅನಂತರ ಮನೆ ಯಲ್ಲಿನ ಎಲ್ಲಾ ಸಾಮಾನುಗಳನ್ನು ಅದರಲ್ಲಿ ಹಾಕಿ ಸುಟ್ಟುಬಿಡಿರಿ."

ಆ ವಿಚಿತ್ರ ಅಪ್ಪಣೆಯನ್ನು ಕೇಳಿ ಸೇವಕರೆಲ್ಲರೂ ಆಶ್ಚರ್ಯದಿಂದ ಸ್ತಂಭಿತ ರಾಗಿ ಪ್ರಶ್ನಾರ್ಥಕ ದೃಷ್ಟಿಯಿಂದ ತಮ್ಮ ಒಡತಿಯನ್ನು ನೋಡಿದರು. ಅವಳಾ ದರೋ ಅಚಲವಾಗಿ ಶಾಂತವಾಗಿ ನಿಂತುಕೊಂಡಿದ್ದಳು. ಈ ಕಾಡುಮನುಷ್ಯ ಹೇಳುವಂತೆ ತಾವು ಮಾಡಲೇಬೇಕೇ? ಅಥವಾ ಇದೆಲ್ಲವೂ ಕೇವಲ

ತಮಾಷೆಯಾಗಿರಬಹುದೇ ಎಂದು ಯೋಚಿಸುತ್ತ ಸೇವಕರು ಒಂದು ಕಡೆಗೆ ನಿಂತುಕೊಂಡರು.

ಸಿದ್ಧನಾಥ ಮತ್ತೆ ಹೇಳಿದ: "ಹೂಂ. ಸುರುವಾಗಲಿ ಕೆಲಸ."

ಸೇವಕರಲ್ಲೂ ಕೆಲವರು ಶೈವರಾಗಿದ್ದರು. ನಿದಾನವಾಗಿ ಅವರಿಗೆ ಇದೆಲ್ಲ ಅರ್ಥವಾಯಿತು. ಕಟ್ಟಿಗೆಯನ್ನೂ ಬೆಂಕಿಯನ್ನೂ ತರಲೆಂದು ಅವರು ಒಳಗೆ ಹೋದರು. ಇನ್ನಿತರರೂ ಅವರನ್ನು ಅನುಸರಿಸಿದರು. ಅವರೆಲ್ಲರೂ ದರಿದ್ರರಾಗಿದ್ದುದರಿಂದ ಸಂಪತ್ತನ್ನು ಸಹಜವಾಗಿಯೆ ದ್ವೇಷಿಸುತ್ತಿದ್ದರು. ಅದನ್ನು ನಾಶಗೊಳಿಸುವುದರಲ್ಲಿ ಅವರಿಗೂ ಉತ್ಸಾಹವೇ ಇತ್ತು.

ಅವರು ಕಟ್ಟಿಗೆಯ ಚಿತೆ ರಚಿಸುತ್ತಿದ್ದಾಗ ಸಿದ್ಧನಾಥ ಮುಕ್ತಾದೇವಿಯನ್ನು ಕುರಿತು ಹೇಳಿದ:

"ಯಾವುದೊಂದು ಶೈವ ಪಂಥೀಯ ಆಶ್ರಮಕ್ಕೆ ನಿನ್ನೀ ಸಂಪತ್ತನ್ನೆಲ್ಲಾ ಕೊಟ್ಟುಬಿಡಬೇಕೆಂದೂ ನನಗನ್ನಿಸಿತ್ತು. ಪುಣ್ಯದಿಂದ ಪಾಪವನ್ನು ತೊಳೆಯಬಹುದೆಂದೂ ಅನ್ನಿಸಿತ್ತು. ಆದರೆ ಏಕೋ ಏನೋ, ಅಂತೂ ಆ ವಿಚಾರ ನನಗೆ ರುಚಿಸಲಿಲ್ಲ. ಆದರ ಹಿಂದೆ ದೈವೀಪ್ರೇರಣೆಯೇ ಇದ್ದಿರಲಾರದು. ಅಂತೆಯೇ ನಾನು ಆ ವಿಚಾರ ಬಿಟ್ಟುಕೊಟ್ಟೆ. ವಿಲಾಸದಿಂದ ಗಳಿಸಿದ್ದನ್ನು ಭಗವಂತನ ಪ್ರಿಯಜನಕ್ಕೆ ಕೊಡುವುದೂ ಭಾರೀ ಅಪರಾಧವಾಗಬಹುದು. ಮುಕ್ತಾ, ಯಾವ ಯಾವ ವಸ್ತುಗಳಿಗೆ ನಿನ್ನ ಸ್ಪರ್ಶವಾಗಿದೆಯೋ ಅದೆಲ್ಲಾ ಅಗ್ನಿಯಲ್ಲಿ ಭಸ್ಮವಾಗಿ ಹೋದರೇನೇ ಒಳ್ಳೆಯದು. ಸಮುದ್ರ ತರಂಗಗಳ ಹಾಗೆ ಅಸಂಖ್ಯ ಚುಂಬನಗಳಿಂದ ಅಪವಿತ್ರವಾದ ನಿನ್ನ ವಸ್ತ್ರಗಳೂ ಒಡವೆಗಳೂ ಈಗ ಅಗ್ನಿಯಿಂದ ಚುಂಬಿಸಿಕೊಳ್ಳುವವು. ಸೇವಕರೇ, ಬೇಗ ಬೇಗ ಕೆಲಸ ಮಾಡಿರಿ. ಬೆಂಕಿಯಿನ್ನೂ ಉಗ್ರವಾಗಲಿ. ಇನ್ನಷ್ಟು ಕಟ್ಟಿಗೆ ತಂದು ಹಾಕಿರಿ. ಮುಕ್ತಾ, ಒಳಗೆ ಹೋಗಿ ನಿನ್ನ ಈ ಹೊಲಸು ವಸ್ತ್ರಗಳನ್ನು ತೆಗೆದಿಟ್ಟು, ಬಹಳ ಬಡವಳಾದ ದಾಸಿಯ ವಸ್ತ್ರವೊಂದನ್ನು ಬೇಡಿ ಅದನ್ನುಟ್ಟುಕೊಂಡು ಬಾ."

"ಹಾಗೇ ಮಾಡುತ್ತೇನೆ ತಂದೇ." ಎಂದು ಹೇಳಿ ಮುಕ್ತಾ ಒಳಗೆ ಹೋದಳು.

ಅತ್ತ ಆಡುಗೆಯಾಳುಗಳು ಬೆಂಕಿಯನ್ನುರಿಸತೊಡಗಿದ್ದರು. ಇತ್ತ ಸೇವಕರು ಒಳಗಿನಿಂದ ಸಾಮಾನುಗಳನ್ನು ತಂದು ತಂದು ಬೆಂಕಿಯಲ್ಲಿ ಬಿಸುಟತೊಡಗಿದ್ದರು. ಹಸ್ತಿದಂತದಿಂದ ಮಾಡಿದ ಸುಂದರ ಸುಂದರ ಪೆಟ್ಟಿಗೆಗಳು ಬೆಂಕಿಯಲ್ಲಿ ಬೀಳುತ್ತಲೂ ಇಬ್ಭಾಗವಾಗಿ ಬೆಂದು ಹೋಗುವ ದೃಶ್ಯ ಕರುಣಾಜನಕವಾಗಿತ್ತು. ರತ್ನಖಚಿತ ಶಿರೋಭೂಷಣಗಳು, ಮುತ್ತು ರತ್ನಗಳ ಹಾರಗಳು, ಚಿನ್ನದೊಡವೆಗಳು, ರೇಶಿಮೆ ಜರತಾರಿಯ ಸೀರೆ ಕುಬುಸಗಳು........ಅವುಗಳನ್ನೆಲ್ಲ ಬೂದಿ ಮಾಡುತ್ತಾ ಬೆಂಕಿ ಕೆಂಪಾಗಿ ಹಳದಿಯಾಗಿ ಕುಣಿಯುತ್ತಿತ್ತು. ಆ ದೃಶ್ಯವನ್ನು ನೋಡಲಾರದ್ದಕ್ಕೋ ಏನೋ ಎನ್ನುವಂತೆ ಹೊಗೆ ಕಪ್ಪು ಕಪ್ಪಾಗಿ ಆಗಸಕ್ಕೇರುತ್ತಿತ್ತು. ಬಹುಮೂಲ್ಯ ವಸ್ತುಗಳನ್ನು ನುಂಗಿದ ಹಾಗೆಲ್ಲ ಅಗ್ನಿ ವಿಕಟಾಟ್ಟಹಾಸ ಮಾಡುತ್ತಾ ಭಯಂಕರವಾದ ನಾಲಗೆಗಳನ್ನು ಹೊರಡೆಗೆದು ಪ್ರಳಯಕಾಲದ ಮಹಾಸರ್ಪದಂತೆ ಫೂತ್ಕರಿಸಿತು. ಸೇವಕರಿಗೂ ವಿಚಿತ್ರವಾದ ಆವೇಶ ಬಂದಿತ್ತು; ಬೆಲೆ ಬಾಳುವ ರತ್ನಗಂಬಳಿಗಳನ್ನೂ ಬಣ್ಣ ಬಣ್ಣಗಳ ಪರದೆಗಳನ್ನೂ ಬೆಳ್ಳಿಯ ಕುಸುರಿಗೆಲಸ ಮಾಡಿದ ಅಂಗವಸ್ತ್ರಗಳನ್ನೂ ಹೊತ್ತು ತಂದು ರಾಕ್ಷಸೀ ಸಂತೋಷ ಪ್ರದರ್ಶಿಸುತ್ತ ಅಗ್ನಿಯಲ್ಲೆಸೆದರು. ಭಾರಿ ಭಾರಿ ಆಸನಗಳು, ಮಂಚಗಳು, ಪೀಠಗಳು, ಹಾಸಿಗೆಗಳು, ದೇವದೇವತೆಗಳ, ವಿಲಾಸಿನಿಯರ ಮೂರ್ತಿಗಳು, ಕನ್ನಡಿಗಳು ಸದ್ದುಮಾಡುತ್ತಾ ಬಂದು ಬೆಂಕಿಯ ದವಡೆಗೆ ಬಲಿಯಾದುವು.

ಅದೇ ಸಮಯದಲ್ಲಿ ಮುಕ್ತಾ ಬಂದಳು. ಬಿಚ್ಚಿದ ತಲೆಗೂದಲು ಹಾರಾಡುತ್ತಿತ್ತು, ಕಾಲುಗಳೂ ಬರಿಯವಾಗಿದ್ದುವು. ಹರಿದುಹೋದ ಹಳೆಯ ಸೀರೆಯೊಂದನ್ನು ಅವಳು ಉಟ್ಟುಕೊಂಡಿದ್ದಳು. ಅಂಥ ಸಾಧಾರಣ ವಸ್ತ್ರವೂ ಅವಳ ಅಂಗಸ್ಪರ್ಶ ಮಾತ್ರದಿಂದ ಸ್ವರ್ಗೀಯ ವಿಲಾಸದಿಂದ ಶೋಭಿಸುತ್ತಿತ್ತು. ತನ್ನ ಉದ್ದವಾದ ಗಡ್ಡದಲ್ಲಿ ಹಸ್ತಿದಂತದ ಮೂರ್ತಿಯೊಂದನ್ನು ಅಡಗಿಸಿಟ್ಟುಕೊಂಡಿದ್ದ ತೋಟಗಾರನೊಬ್ಬ ಅವಳ ಬೆನ್ನಹಿಂದೆಯೇ ಬಂದ.

ಮುಕ್ತಾ ಆತನನ್ನು ತಡೆದು ನಿಲ್ಲಿಸಿ ಆ ಮೂರ್ತಿಯನ್ನು ಸಿದ್ಧನಾಥನಿಗೆ ತೋರಿಸಿದಳು.

"ತಂದೇ, ಇದನ್ನೂ ಬೆಂಕಿಗೆ ಹಾಕಬೇಕೇ ? ಇದು ಬಹಳ ಪ್ರಾಚೀನ ಕಾಲದ ಕಲಾಕೌಶಲ್ಯದ ಮಾದರಿಯಾಗಿದೆ. ಇದರ ಬೆಲೆ ನೂರು ಬಂಗಾರದ

ಗಟ್ಟಿಗಳಿಗಿಂತ ಹೆಚ್ಚಾಗಿದೆ. ಇಂಥಾ ಸುಂದರವಾದ ಇನ್ನೊಂದು ಮೂರ್ತಿಯನ್ನು ತಯಾರಿಸಬಲ್ಲ ಕಲಾವಿದ ಈ ಜಗತ್ತಿನಲ್ಲಿಲ್ಲ. ಇದು ಪ್ರೇಮದೇವತೆಯ ಮೂರ್ತಿ. ಇದರೊಡನೆ ಇಷ್ಟು ಕ್ರೌರ್ಯದಿಂದ ನಡೆದುಕೊಳ್ಳುವುದು ಸರಿಯಲ್ಲ. ಪ್ರೇಮವೆಂದರೇನು? ಅದೇನು ದುರ್ಗುಣವೇ? ಪಾಪದ ಮಾತೇ ಬೇರೆ. ನಾವು ಪಾಪ ಮಾಡಿದರೆ ಪ್ರೇಮವೇನು ಮಾಡೀತು? ಅದರದೇನು ತಪ್ಪು? ಈ ಪ್ರೇಮ ಮೂರ್ತಿಯನ್ನು ನಾವು ದ್ವೇಷಿಸುವುದಾದರೂ ಯಾಕೆ? ಇದು ಯಾರಿಗೇನು ಅನ್ಯಾಯ ಮಾಡಿದೆ? ಪ್ರೇಮ ದೇವತೆಯ ಅಪ್ಪಣೆಯಂತೆ ನಾನು ಮಾಡಿದ ಕೃತಿಗಳ ಬಗ್ಗೆ ನನಗೆಂದೂ ದುಃಖವೆನಿಸದು. ಆದರೆ ಆಪ್ಪಣೆಯ ವಿರುದ್ಧ ವರ್ತಿಸಿದ್ದಕ್ಕಾಗಿ ಮಾತ್ರ ನನಗೆ ದುಃಖವಾಗುತ್ತದೆ. ತಮ್ಮನ್ನು ಪ್ರೀತಿಸದ ಪುರುಷರಿಗೆ ದೇಹಸಮರ್ಪಣ ಮಾಡಬೇಕೆಂದು ಈ ದೇವತೆಯೇನೂ ಹೇಳುವುದಿಲ್ಲ. ದುರಾಚಾರ ಮಾಡಬಾರದೆಂದೇ ಯಾವಾಗಲೂ ಸಾರಿ ಸಾರಿ ಹೇಳುವ ದೇವತೆಯಿದು. ನೋಡಿರಿ, ಇದರ ಮುಖವನ್ನಾದರೂ ನೋಡಿರಿ. ಎಷ್ಟು ಮುಗ್ಧ ಭಾವವಿದೆ....ಎಂಥ ಸೌಂದರ್ಯವಿದೆ.... ತೋಟಗಾರನ ಗಡ್ಡದಲ್ಲಿ ಎಷ್ಟು ಶಾಂತವಾಗಿ ಅಡಗಿ ಕುಳಿತಿದೆಯಲ್ಲ ಅದು.... ಮಾಧವರಸ ನನ್ನನ್ನು ಪ್ರೀತಿಸುತ್ತಿದ್ದ ಕಾಲದಲ್ಲಿ ಒಂದು ದಿನ ಇದನ್ನು ನನ್ನ ಹತ್ತಿರ ತಂದು, ಇದು ಅವನ ವಿಚಾರವಾಗಿ ನನ್ನೊಡನೆ ಮಾತಾಡುವುದೆಂದು ಹೇಳಿದ. ಆದರೆ ಈ ಪ್ರೇಮಮೂರ್ತಿ ಮಾಧವರಸನ ವಿಚಾರ ತಿಳಿಸದೆ, ಬಾಲ್ಯದಲ್ಲಿ ನಾನು ಪ್ರೀತಿಸುತ್ತಿದ್ದ ಯುವಕನೊಬ್ಬನ ನೆನವು ತೆಗೆಯಿತು. ಇಂಥ ಮುದ್ದುಮೂರ್ತಿಯನ್ನು ಬೆಂಕಿಯ ಬಾಯಿಗೆ ಬಲಿ ಕೊಟ್ಟರೆ ನನ್ನ ಹೃದಯ ಚೂರು ಚೂರಾಗಿ ಹೋಗುವುದು. ಈಗಾಗಲೇ ನನ್ನ ಸಂಪತ್ತೆಲ್ಲಾ ಬೂದಿಯಾಗಿ ಹೋಗಿದೆ. ದಯಮಾಡಿ ಇದೊಂದು ಮೂರ್ತಿಯನ್ನುಳಿಸಿರಿ. ಯಾವುದಾದರೊಂದು ಆಶ್ರಮದಲ್ಲಿ ಇದನ್ನಿಟ್ಟರೆ ಇದನ್ನು ನೋಡುವವರು ಭಗವಂತನ ರೂಪವನ್ನು ನೆನೆದುಕೊಳ್ಳಬಹುದು. ಪ್ರೇಮ ಯಾವಾಗಲೂ ಶುಭ್ರವಾಗಿರುತ್ತದೆ, ಶುದ್ಧವಾಗಿರುತ್ತದೆ."

ಮೂರ್ತಿ ಉಳಿಯುವುದೆಂದು ಭಾವಿಸಿ ತೋಟಗಾರ ಸಂತುಷ್ಟನಾಗಿದ್ದ. ಚಿಕ್ಕ ಮಕ್ಕಳಂತೆ ಅವನ ಮನಸ್ಸು ಪ್ರಸನ್ನವಾಯಿತು. ಆದರೆ, ಸಿದ್ಧನಾಥ ಥಟ್ಟನೆ ಮುಂದೆ ಬಂದು ಆ ಮೂರ್ತಿಯನ್ನು ಕಿತ್ತುಕೊಂಡು ಅಗ್ನಿಜ್ವಾಲೆಗಳಲ್ಲಿ

ಬಿಸುಟ.

"ಮಾಧವರಸನಂಥ ಕಾಮುಕನ ಸ್ಪರ್ಶದಿಂದ ಅಪವಿತ್ರವಾದ ಈ ಮೂರ್ತಿಯನ್ನು ಆಶ್ರಮದಲ್ಲಿಡುತ್ತಾರೆಯೇ ಯಾರಾದರೂ ? ಇದನ್ನು ನೋಡಿದವರೆಲ್ಲಾ ಪಾಪಿಗಳಾದಾರು."

ಒಳಗಿನಿಂದ ವಸ್ತ್ರಗಳು ಬಂದು ಬೀಳುತ್ತಲೇ ಇದ್ದುವು. ತಂಬೂರಿ, ವೀಣೆ, ಮೃದಂಗಗಳೂ ಅಗ್ನಿಗಾಹುತಿಯಾದುದಾಯಿತು. ಉದ್ರಿಕ್ತರಾದ ಸೇವಕರು ಭೂತಗಳಂತೆ ವರ್ತಿಸತೊಡಗಿದ್ದರು. ಜ್ವಾಲೆಗಳ ತಪ್ತ ಬೆಳಕಿನಲ್ಲಿ ಅಟ್ಟಹಾಸ ಮಾಡುತ್ತಿದ್ದರು.

ಈ ಗದ್ದಲದಿಂದ ಆಕರ್ಷಿತರಾದ ನೆರೆಹೊರೆಯ ಜನರು ಧಾವಿಸಿ ಬಂದು ಅಗ್ನಿಕುಂಡದ ಬಳಿ ನಿಂತು ನಡೆದಿರುವುದೇನೆಂಬುದನ್ನು ಅರ್ಥ ಮಾಡಿಕೊಳ್ಳಲಾರದೆ ತಲೆ ತುರಿಸಿಕೊಳ್ಳುತ್ತ ನಿಂತರು.

ಹಾಗೆ ಧಾವಿಸಿ ಬಂದವರಲ್ಲಿ, ಮುಕ್ತಾಗೆ ವಸ್ತು ಒಡವೆಗಳನ್ನು ವಿಕ್ರಯಿಸುತ್ತಿದ್ದ ವ್ಯಾಪಾರಿಗಳೂ ಇದ್ದರು. ಅವರಿಗಂತೂ ಯಾವುದೂ ಅರ್ಥವಾಗಲಿಲ್ಲ. ಕೊರಳಲ್ಲಿ ಹೂಮಾಲೆ ಹಾಕಿಕೊಂಡು ವೇಶ್ಯೆಯರ ಮನೆಗಳಿಗೆ ಹೊರಟಿದ್ದ ಲಂಪಟ ಯುವಕರೂ ಬಂದು ನಿಂತು, ಆ ಧ್ವಂಸ ಕಾರ್ಯವನ್ನು ಕಂಡು ಕೂಗಿಕೊಳ್ಳತೊಡಗಿದರು. ನಿಮಿಷಗಳು ಕಳೆದ ಹಾಗೆ ಜನಸಂದಣಿ ಹೆಚ್ಚುತ್ತಿತ್ತು. ಶೈವ ಪಂಥೀಯ ಸಂನ್ಯಾಸಿ ಸಿದ್ಧನಾಥನನ್ನು ಹಿಂಬಾಲಿಸಿ ಹೋಗಲು ನಿಶ್ಚಯಿಸಿದ ಮುಕ್ತಾ ತನ್ನ ಸಂಪತ್ತನ್ನು ಸುಟ್ಟು ಹಾಕುತ್ತಿರುವ ವಿಚಾರ ಎಲ್ಲರಿಗೂ ವೇದ್ಯವಾಯಿತು.

ವ್ಯಾಪಾರಿಗಳು ಯೋಚಿಸಿದರು:

"ಮುಕ್ತಾ ಈ ನಗರವನ್ನೇ ತ್ಯಜಿಸಿ ಹೊರಟಳೇ! ಇನ್ನೇನು ಗತಿ ? ನಮಗೆ ಆಶ್ರಯದಾತಳಾಗಿದ್ದ ಈ ಉದಾರ ಸ್ತ್ರೀ ಹೊರಟುಹೋದರೆ ನಮ್ಮ ವ್ಯಾಪಾರದ ಗತಿಯೇನು ? ಅನಂತರ ನಮ್ಮನ್ನು ಯಾರು ಮಾತಾಡಿಸಬೇಕು ? ನಾವು ದಿವಾಳಿ ತೆಗೆದು ಈ ನಗರವನ್ನೇ ಬಿಟ್ಟು ಹೊರಟುಹೋಗುವ ಪ್ರಸಂಗ ಬರುವುದೋ ಏನೋ. ಎಲ್ಲಿಂದಲೋ ಬಂದ ಈ ಬೈರಾಗಿ ಮುಕ್ತಾದೇವಿಯ ತಲೆ ಕೆಡಿಸಿದ್ದಾನೆ. ನಮ್ಮ ಸರ್ವನಾಶ ಮಾಡಲು ಯತ್ನಿಸುತ್ತಿದ್ದಾನೆ. ಹೀಗೆಲ್ಲ ಮಾಡಲು ಇವನಿಗೇನು ಅಧಿಕಾರವಿದೆ ? ಹೇಳುವವರು ಕೇಳುವವರು

ಯಾರೂ ಇಲ್ಲವೇ ? ಈ ಕಲ್ಯಾಣ ಪಟ್ಟಣದಲ್ಲಿ ಕಾನೂನುಗಳಿಲ್ಲವೆ ? ನ್ಯಾಯಾಧೀಶರಿಲ್ಲವೆ ? ನಮ್ಮ ಗತಿಯೇನೆಂದು ಮುಕ್ತಾದೇವಿಯಾದರೂ ಯೋಚಿಸಬಾರದೇ ? ನಮ್ಮ ಹೆಂಡರು ಮಕ್ಕಳ ಪರಿವೆಯೂ ಅವಳಿಗಿಲ್ಲ. ಅವಳು ಹೀಗೆಲ್ಲಾ ಮಾಡುವುದೆಂದರೆ ಸಾರ್ವಜನಿಕ ಅಪರಾಧವೇ ಸರಿ. ನಾವೆಲ್ಲಾ ಒಟ್ಟಾಗಿ ಅವಳನ್ನು ತಡೆಯಬೇಕು. ಅವಳಿಗಿಷ್ಟವಿಲ್ಲದಿದ್ದರೂ ಪರವಿಲ್ಲ, ಅವಳನ್ನು ಈ ನಗರದಲ್ಲೇ ಹಿಡಿದಿಟ್ಟುಕೊಳ್ಳಬೇಕು.”

ಯುವಕವೃಂದ ಯೋಚಿಸುತ್ತಿತ್ತು:

“ಮುಕ್ತಾ ಇಲ್ಲಿಂದ ಹೊರಟು ಹೋದರೆ ನಗರದ ಚಂದ್ರನೇ ಹೋದಂತಾದೀತು. ಅವಳು ನಾಟಕಗಳಲ್ಲಿ ಅಭಿನಯಿಸದಿದ್ದರೆ, ವೇಶ್ಯಾ ವ್ಯವಸಾಯ ನಿಲ್ಲಿಸಿದರೆ ನಮ್ಮ ಮನೋರಂಜನೆಯೇ ಮುಗಿದು ಹೋದೀತು. ನಾಟ್ಯಶಾಲೆಯ ಜೀವ ಜೀವಾಳ ಇವಳು. ರಸಿಕರ ಹೃದಯವನ್ನು ಗೆದ್ದ ಸಾಮ್ರಾಜ್ಞಿ ಇವಳು. ಇವಳ ಸಂಗಸುಖ ಪಡೆಯಲಾರದಿದ್ದವರೂ ಕೂಡಾ ಇವಳನ್ನು ದೂರದಿಂದ ನೋಡಿಯಾದರೂ ಆನಂದಿಸುತ್ತಿದ್ದರು. ಇವಳನ್ನು ನೆನೆನೆನೆಯುತ್ತಲೇ ಪುರುಷರು ಸ್ತ್ರೀಯರನ್ನು ಪ್ರೀತಿಸುತ್ತಿದ್ದರು. ಪ್ರತಿಯೊಂದು ಚುಂಬನದ ಮೇಲೂ ಆಲಿಂಗನದ ಮೇಲೂ ಇವಳ ಮುದ್ರೆಯಿರುತ್ತಿತ್ತು. ಎಲ್ಲಾ ಆನಂದಗಳಿಗೂ ಮಿಗಿಲಾದ ಆನಂದವಾಗಿದ್ದಳಿವಳು. ಮುಕ್ತಾ ನಮ್ಮ ಮಧ್ಯೆ ಜೀವಿಸಿರುವಳೆಂಬ ವಿಚಾರವೇ ನಮ್ಮನ್ನು ಉತ್ತೇಜಿತಗೊಳಿಸಲು ಸಾಕಾಗುತ್ತಿತ್ತು.”

ಮುಕ್ತಾದೇವಿಯನ್ನು ಅತಿಶಯವಾಗಿ ಪ್ರೀತಿಸುತ್ತಿದ್ದ ಗುಣವಂತನೆಂಬ ಯುವಕನೊಬ್ಬ ಈ ದೃಶ್ಯವನ್ನು ಕಂಡು ಕೆರಳಿ ಸಂನ್ಯಾಸಿಗಳನ್ನೂ ದೇವರನ್ನೂ ಅವಾಚ್ಯ ಶಬ್ದಗಳಲ್ಲಿ ನಿಂದಿಸಿದ.

“ಸಂಸಾರಿಕರ ತಂಟೆಗೆ ಬರಲು ಏನು ಅಧಿಕಾರ ಈ ಸಂನ್ಯಾಸಿಗಳಿಗೆ ? ಇವರನ್ನು ಹೀಗೇ ಬಿಡಬಾರದು. ಚೆನ್ನಾಗಿ ಬುದ್ಧಿ ಕಲಿಸಬೇಕು.” ಎಂದು ಆತ ಕೂಗಿಕೊಂಡ. ಉದ್ರೇಕಿತರಾಗಿದ್ದ ಜನರೆಲ್ಲರೂ ಆ ಮಾತನ್ನೇ ಎತ್ತಿ ಹಿಡಿದು ಮುಕ್ತಾದೇವಿಯನ್ನು ನಿಂದಿಸತೊಡಗಿದರು.

“ಹೀಗೆ ಓಡಿಹೋಗುವುದೆಂದರೆ ಹೇಡಿತನ.”

“ಇದೊಂದು ನಾಚಿಕೆಗೇಡಿ ಸಂಗತಿ.”

"ನಮ್ಮ ಬಾಯಲ್ಲಿನ ರೊಟ್ಟಿ ಕಿತ್ತುಕೊಂಡು ಇವರು ಹ್ಯಾಗೆ ಹೋಗುತ್ತಾರೋ ನೋಡೋಣ!"

"ನಮ್ಮೆಲ್ಲರ ಸಂಪತ್ತನ್ನು ಸೂರೆಗೊಂಡಾದ ಬಳಿಕ ನಮಗೆ ಕೈಕೊಟ್ಟು ಹೋಗುತ್ತಿದ್ದಾಳೆ ಈಕೆ."

"ನಾನು ಇವಳಿಗೆ ವಿಕ್ರಯಿಸಿದ್ದ ಒಡವೆಯ ಹಣ ಇನ್ನೂ ಬಂದಿಲ್ಲ."

"ಇವಳು ತಯಾರಿಸಲು ಹೇಳಿದ್ದ ವಸ್ತ್ರಗಳ ಬೆಲೆಯೂ ನನಗೆ ಬಂದಿಲ್ಲ."

"ಎಲ್ಲರಿಗೂ ಇವಳು ಹಣ ಕೊಡುವುದಿದೆ."

"ಇವಳು ಹೊರಟುಹೋದರೆ ನಾಯಿಕೆಯರ ಪಾತ್ರ ಅಭಿನಯಿಸುವವರಾರು?"

"ಇವಳ ಮನೆಯ ಬಾಗಿಲು ಮುಚ್ಚಿತೆಂದರೆ ನಮ್ಮ ಜೀವನ ನೀರಸವಾಗುವುದು."

"ಕಲ್ಯಾಣದ ಆಕಾಶದಲ್ಲಿ ಹೊಳೆಯುತ್ತಿದ್ದ ತಾರೆಯಾಗಿದ್ದಳೀಕೆ."

ನಗರದ ಭಿಕ್ಷುಕರು, ಅಂಧರು, ಕುಂಟರು, ಮೂಕರು ಅಂಗಳದಲ್ಲಿ ನೆರೆದು, ಚೆಂಕಿಯನ್ನು ಕಂಡು ಬೊಬ್ಬೆಯಿಡತೊಡಗಿದರು.

"ಮುಕ್ತಾ ಹೊರಟುಹೋದರೆ ಮುಂದೆ ನಮಗೆ ಅನ್ನ ಹಾಕುವವರಾರು? ಇವಳ ಭೋಜನ ಕೂಟಗಳಲ್ಲಿ ಉಳಿಯುತ್ತಿದ್ದ ಆಹಾರದಿಂದ ನಾವು ನೂರಾರು ಜನರು ಹೊಟ್ಟೆ ತುಂಬಿಸಿಕೊಳ್ಳುತ್ತಿದ್ದೆವು. ಇವಳಿಂದ ಸುಖಪಡೆದು ಪ್ರಸನ್ನರಾಗಿ ಹೋಗುತ್ತಿದ್ದ ರಸಿಕರು ನಮಗೆ ಮುಷ್ಟಿತುಂಬಾ ಹಣ ಕೊಡುತ್ತಿದ್ದರು. ಇನ್ನಾರು ನಮಗೆ ಹೀಗೆ ಕೊಡುವವರು?"

ನಗರದ ಕಳ್ಳರೂ ಅಲ್ಲಿಗೆ ಬಂದು ಗದ್ದಲದಲ್ಲಿ ಜನರನ್ನು ಅತ್ತಿತ್ತ ನೂಕುತ್ತ ಕೈಗೆ ಸಿಕ್ಕಿದ ವಸ್ತುಗಳನ್ನೆತ್ತಿಕೊಂಡು ಹೋಗಲು ಹೊಂಚು ಹಾಕುತ್ತಿದ್ದರು.

ಈ ಎಲ್ಲ ಗಲಭೆಯ ಮಧ್ಯೆ ಕೇವಲ ಒಬ್ಬನೇ ಒಬ್ಬ ವ್ಯಕ್ತಿ ಶಾಂತವಾಗಿಯೂ ಸ್ಥಿರವಾಗಿಯೂ ನಿಂತುಕೊಂಡಿದ್ದ. ಆ ವೃದ್ಧನನ್ನು ಜನರು ರಾಮದಾಸ ಎಂದು ಕರೆಯುತ್ತಿದ್ದರು. ಅವನೂ ಕೂಡಾ ಮುಕ್ತಾದೇವಿಯ ಮೋಹಜಾಲದಲ್ಲಿ ಸಿಲುಕಿ ಅವಳಿಗಾಗಿ ತನ್ನೆಲ್ಲ ಆಸ್ತಿಯನ್ನು ಹಾಳು ಮಾಡಿದ್ದ. ಚೆಂಕಿಯ ಜ್ವಾಲೆಗಳನ್ನು ದಿಟ್ಟಿಸುತ್ತ, ತನ್ನ ನೀಳವಾದ ಗಡ್ಡವನ್ನು ನೀವಿ

ಕೊಳ್ಳುತ್ತ ಆತ ನಿಂತಿದ್ದ ಹಾಗೆ ಯುವಕನೊಬ್ಬ ಅವನನ್ನು ಗುರುತಿಸಿ ಹತ್ತಿರ ಬಂದು ಹೇಳಿದ:

"ತಾತ ರಾಮದಾಸ್, ಮುಕ್ತಾದೇವಿಗೂ ನಿಮಗೂ ಒಳ್ಳೆಯ ಸ್ನೇಹ ವಿದೆಯಲ್ಲವೆ? ಅವಳು ನಿಮ್ಮ ಮಾತಿಗಾದರೂ ಮನ್ನಣೆ ಕೊಡಬಹುದು. ಸಾಧುವಿನ ಸಂಗಡ ಹೋಗಬಾರದೆಂದು ನೀವಾದರೂ ಹೇಳಬಾರದೇ ಅವಳಿಗೆ ?"

ರಾಮದಾಸ ತಲೆ ಕೊಡವಿ ಹೇಳಿದ:

"ಮುಕ್ತಾದೇವಿಯನ್ನು ಬಿಡುವುದುಂಟೇ? ನಮ್ಮನ್ನು ಬಿಟ್ಟು ಹ್ಯಾಗೆ ಹೋಗುತ್ತಾಳವಳು? ಅವಳೊಡನೆ ಮಾತಾಡಿ ನೋಡುತ್ತೇನೆ. ಈ ಕರಿಯ ಸಾಧುವಿಗಿಂತ ಹೆಚ್ಚಾಗಿ ಅವಳು ನನ್ನ ಮಾತಿಗೇ ಬೆಲೆ ಕೊಡಬಹುದು. ಮೊದಲು ಈ ಜನರನ್ನೆಲ್ಲಾ ದೂರ ಸರಿಸು."

ಜನರನ್ನು ಅತ್ತಿತ್ತ ನೂಕುತ್ತ, ಮುದುಕಿಯರನ್ನು ಕೆಡಹುತ್ತ, ಮಕ್ಕಳನ್ನು ತುಳಿಯುತ್ತ ಆತ ಮುಕ್ತಾದೇವಿಯ ಹತ್ತಿರ ಹೋಗಿ ಅವಳನ್ನೊಂದು ಕಡೆಗೆಳೆದೊಯ್ದು ಹೇಳಿದ:

"ಸುಂದರೀ, ನನ್ನನ್ನು ನೋಡು. ನನ್ನೊಡನೆ ಆಡಿದ ಮಾತುಗಳನ್ನು ಜ್ಞಾಪಿಸಿಕೋ. ನಿಜವಾಗಿಯೂ ಪ್ರೇಮ ಮಾಡುವುದನ್ನು ತ್ಯಜಿಸಿಬಿಡುತ್ತೀಯಾ ನೀನು?"

ಸಿದ್ಧನಾಥ ಧಾವಿಸಿ ಬಂದು ಮುಕ್ತಾ ಮತ್ತು ರಾಮದಾಸರ ನಡುವೆ ನಿಂತು ಕೂಗಿ ಹೇಳಿದ:

"ನೀಚಾ, ನೀನಿವಳನ್ನು ಮುಟ್ಟಿದೆಯೆಂದರೆ ನಿನ್ನ ಸಾವು ನಿಶ್ಚಿತವೆಂದು ತಿಳಿದುಕೋ. ಅವಳು ಪವಿತ್ರಳಾಗಿದಾಳೆ, ಭಗವಂತನ ವಸ್ತುವಾಗಿದಾಳೆ."

ಯುವಕ ಕೋಪದಿಂದ ಕೂಗಿಕೊಂಡ:

"ಏ ಮೂರ್ಖ ಬೈರಾಗೀ, ಮೊದಲು ಇಲ್ಲಿಂದ ಹೊರಟುಹೋಗು. ಮುಕ್ತಾ ನಮ್ಮವಳು. ಅವಳೊಡನೆ ಮಾತನಾಡುವ ಹಕ್ಕು ನಮಗುಂಟು. ನೀನೇನಾದರೂ ಅಡ್ಡಬಂದಿಯೆಂದರೆ ನಿನ್ನ ಗಡ್ಡ ಹಿಡಿದೆಳೆದು ಈ ಬೆಂಕಿಯಲ್ಲೊಗೆದು ಜೀವಸಹಿತ ಸುಟ್ಟುಬಿಡಬೇಕಾದೀತು."

ಮುಕ್ತಾದೇವಿಯನ್ನು ಹಿಡಿದುಕೊಳ್ಳಲೆಂದು ಯುವಕ ಅವಳತ್ತ ಹೆಜ್ಜೆಯಿಡುವಷ್ಟರಲ್ಲಿಯೆ ಸಿದ್ಧನಾಥ ಆ ಯುವಕನನ್ನು ಹಿಡಿದೆಳೆದು ರಭಸದಿಂದ ನೂಕಿದ. ಯುವಕ ಹತ್ತು ಹೆಜ್ಜೆ ದೂರ, ಬೆಂಕಿಯ ಸಮೀಪದಲ್ಲಿ ಸಿಡಿದುಬಿದ್ದ.

ಮುದುಕ ರಾಮದಾಸ್ ಸುಮ್ಮನೆ ನಿಂತುಕೊಂಡಿರಲಿಲ್ಲ. ಆತ ಜನಸಮೂಹವನ್ನು ಸಿದ್ಧನಾಥನ ವಿರುದ್ಧವಾಗಿ ಉದ್ರೇಕಿಸತೊಡಗಿದ್ದ.

"ಈ ಬೈರಾಗಿಯನ್ನು ಬಡಿದಟ್ಟದಿದ್ದರೆ ಉಳಿಗಾಲವಿಲ್ಲ. ಮೊದಲು ಅವನನ್ನು ಒದ್ದು ಕಳಿಸಬೇಕು." ಎಂದು ಜನರು ಕೂಗತೊಡಗಿದರು. ಬಿದ್ದುಕೊಂಡಿದ್ದ ಯುವಕನೂ ಕೆಂಪೇರಿದ ಕಣ್ಣುಗಳಿಂದ ಮೇಲೆದ್ದು ಸಿದ್ಧನಾಥನನ್ನೂ ದೇವತೆಗಳನ್ನೂ ಸಂನ್ಯಾಸಿಗಳನ್ನೂ ಬಯ್ಯುತ್ತ ಮತ್ತೆ ಸಾಧುವಿನತ್ತ ನುಗ್ಗಿದ.

"ಈ ಬೈರಾಗಿಯನ್ನು ಬೆಂಕಿಯಲ್ಲಿ ಹಾಕಿರಿ."

"ಕಲ್ಲುಗಳಿಂದ ಹೊಡೆದು ಕೊಲ್ಲಿರಿ."

ನಾಲ್ಕೂ ಕಡೆಗಳಿಂದ ಸಿದ್ಧನಾಥನ ಮೇಲೆ ಕಲ್ಲು ಹಾರಿ ಬೀಳತೊಡಗಿದುವು. ಕೆಲವರು ಅವನ ಅಂಗವಸ್ತ್ರವನ್ನು ಹಿಡಿದೆಳೆದರು. ಕೆಲವರು ಗಡ್ಡ ಕೀಳತೊಡಗಿದರು. ಮುಕ್ತಾದೇವಿಯ ಮೇಲೂ ಒಂದು ಕಲ್ಲು ಬಿತ್ತು. ಸಿದ್ಧನಾಥ ಅವಳನ್ನು ತನ್ನ ಎದೆಯಲ್ಲಿ ಅಡಗಿಸಿಕೊಂಡು ಕೆರಳಿದ ಮೇಘದಂತೆ ಗರ್ಜಿಸಿದ:

"ಈ ಪಾರಿವಾಳವನ್ನು ಪರಮಾತ್ಮನ ಪ್ರೇಮಪಂಜರದಿಂದ ಬಿಡಿಸಿಕೊಳ್ಳಲು ಯತ್ನಿಸಬೇಡಿ. ನೀವೂ ಇವಳನ್ನೇ ಅನುಸರಿಸಿ. ನಿಮ್ಮ ಪಾಪಗಳೂ ತೊಳೆದುಹೋಗಲಿ. ಇವಳ ಆದರ್ಶವನ್ನನುಕರಿಸಿ ನೀವೂ ನಿಮ್ಮ ಧನಸಂಪತ್ತುಗಳನ್ನು ತ್ಯಜಿಸಿಬಿಡಿ. ಅವುಗಳಿಂದ ಏನೂ ಉಪಯೋಗವಿಲ್ಲ. ಪರಮಾತ್ಮನ ಸಹನೆ ತೀರುವ ಸಮಯ ಬಂದಿದೆ. ಪ್ರಾಯಶ್ಚಿತ್ತ ಮಾಡಿಕೊಳ್ಳಿ. ನಿಮ್ಮ ಪಾಪಗಳನ್ನೊಪ್ಪಿಕೊಳ್ಳಿ. ಕಣ್ಣೀರು ಸುರಿಸಿರಿ. ಭಗವಂತನನ್ನು ಪ್ರಾರ್ಥಿಸಿರಿ. ಮುಕ್ತಾಳ ಚರಣಚಿಹ್ನಗಳನ್ನನುಸರಿಸಿ ನಡೆಯಿರಿ. ಅವಳ ಪಾಪಗಳಿಗಿಂತ ನಿಮ್ಮ ಪಾಪಗಳೇನೂ ಕಡಿಮೆಯಲ್ಲ. ಅವುಗಳ ಬಗ್ಗೆ ನಿಮಗೆ ಅಸಹ್ಯವೆನಿಸಲಿ. ನಿಮಗೂ ವೇಶ್ಯೆಯರಿಗೂ ಹೆಚ್ಚು ಅಂತರವೇನೂ ಇಲ್ಲ. ನೀವು ಯಾರೇ ಇರಲಿ, ಗುಲಾಮನಿರಲಿ, ರಾಜನಿರಲಿ, ವ್ಯಾಪಾರಿಯಿರಲಿ, ಸಿಪಾಯಿ

ಯಿರಲಿ, ನಾಗರಿಕನಿರಲಿ, ಅನಾಗರಿಕನಿರಲಿ,—ನೀವೆಲ್ಲರೂ ಪಾಪಿಗಳೇ ಆಗಿದ್ದೀರಿ."

ಆತ ಮಾತಾಡುತ್ತಿದ್ದಂತೆ ಆತನ ಕಣ್ಣುಗಳಿಂದ ಜ್ವಾಲೆಗಳು ಹೊರ ಬೀಳುತ್ತಿದ್ದ ಹಾಗಿತ್ತು. ಎಲ್ಲ ಜನರೂ ಇಷ್ಟವಿಲ್ಲದಿದ್ದರೂ ಮಂತ್ರಮುಗ್ಧರಾದವರಂತೆ ನಿಂತುಕೊಂಡಿದ್ದರು.

ಆದರೆ ಮುದುಕ ರಾಮದಾಸ ಮಾತ್ರ ಮೂಕನಂತೆ ನಿಂತಿರದೆ ಕಲ್ಲುಗಳ ತುಂಡುಗಳನ್ನು ಕೂಡಿಸಿ ತನ್ನ ವಸ್ತ್ರದಲ್ಲಿ ಅಡಗಿಸಿಟ್ಟುಕೊಳ್ಳುವುದರಲ್ಲಿ ನಿರತನಾಗಿದ್ದ. ಸ್ವತಃ ತಾನೇ ಅವುಗಳನ್ನೆಸೆಯುವ ಧೈರ್ಯ ಅವನಿಗಿರಲಿಲ್ಲವಾದುದರಿಂದ ಆತ ಅವುಗಳನ್ನು ಭಿಕ್ಷುಕರಿಗೆ ಹಂಚಿಕೊಟ್ಟ. ಮತ್ತೆ ಶಿಲಾವೃಷ್ಟಿಗಾರಂಭವಾಯಿತು. ಗುರಿಯಿಟ್ಟು ಎಸೆಯಲ್ಪಟ್ಟ ಒಂದು ಕಲ್ಲು ಸಿದ್ಧನಾಥನ ಹಣೆಗೆ ಸರಿಯಾಗಿ ತಾಕಿತು. ಅವನ ಹಣೆಯಿಂದ ರಕ್ತ ಸುರಿದು ಮುಕ್ತಾದೇವಿಯ ಮೈಮೇಲೆ ಬೀಳತೊಡಗಿತು. ಸಿದ್ಧನಾಥನ ಆಲಿಂಗನದ ಬಿಗಿತದಲ್ಲಿ ಕಷ್ಟದಿಂದ ಉಸಿರಾಡಿಸುತ್ತ ನಿಂತುಕೊಂಡಿದ್ದಳು ಮುಕ್ತಾ. ಮತ್ತೆ ಅವಳ ಎದೆ ಭೀತಿಯಿಂದ ಕಂಪಿಸತೊಡಗಿತ್ತು.

ಅದೇ ಸಮಯದಲ್ಲಿ ಬೆಲೆಬಾಳುವ ಬಟ್ಟೆ ಧರಿಸಿದ್ದ ವ್ಯಕ್ತಿಯೊಂದು ಬಂದು ಕೂಗಿ ಹೇಳಿತು:

"ತಡೆಯಿರಿ, ತಡೆಯಿರಿ. ಹೊಡೆಯಬೇಡಿರಿ. ಈ ಸಾಧು ನನ್ನ ಸಹೋದರ."

ಸಿದ್ಧನಾಥ ಅತ್ತ ತಿರುಗಿ ನೋಡಿದ. ಮಾಧವರಸನನ್ನು ಅಲ್ಲಿ ಕಂಡು ಅವನಿಗೆ ಆಶ್ಚರ್ಯವೇನೂ ಉಂಟಾಗಲಿಲ್ಲ. ಅರಣ್ಯಕ್ಕೆ ಹೋಗಬಾರದೆಂದು ಮುಕ್ತಾಳ ಮನಸ್ಸೊಲಿಸಲು ಅವನೂ ಧಾವಿಸಿ ಬಂದಿರಬೇಕೆಂದು ಸಿದ್ಧನಾಥ ಭಾವಿಸಿದ.

ಮಾಧವರಸ ಕೊಂಚವೂ ದಿಗಿಲುಗೊಳ್ಳದೆ, ಉರಿಯುತ್ತಿದ್ದ ಚಿತೆಯನ್ನು ನೋಡಿದ. ಒರಟು ಬಟ್ಟೆ ಉಟ್ಟು ನಿಂತಿದ್ದ ಮುಕ್ತಾದೇವಿಯನ್ನು ನೋಡಿದ. ಸಿದ್ಧನಾಥನ ಮೇಲೆ ಕಲ್ಲು ಬೀಳುತ್ತಿದ್ದುದನ್ನೂ ನೋಡಿದ.

"ತಡೆಯಿರಿ. ತಡೆಯಿರಿ. ನನ್ನ ಸಹೋದರನನ್ನು ಬಿಟ್ಟುಬಿಡಿರಿ."

ಆದರೆ, ಜನತೆಯ ಮೇಲೆ ಪ್ರಭಾವ ಬೀರುವಷ್ಟು ಸಾಮರ್ಥ್ಯ ಮಾಧವ ರಸನಿಗಿರಲಿಲ್ಲ. ನೆರೆದ ಜನರಲ್ಲಿ ಯಾರೊಬ್ಬರೂ ಅವನ ಮಾತು ಕೇಳಲಿಲ್ಲ. ಮುಕ್ತಾದೇವಿಯನ್ನು ತನ್ನ ಶರೀರದಿಂದ ಮುಚ್ಚಿ ಪರಮಾತ್ಮನನ್ನು ಪ್ರಾರ್ಥಿಸುತ್ತ ನಿಂತಿದ್ದ ಸಿದ್ಧನಾಥನ ಮೇಲೆ ಮತ್ತೊಂದು ಬಾರಿ ಕಲ್ಲುಗಳ ಮಳೆ ಸುರಿಯಿತು. ತನ್ನ ಮಾತನ್ನು ಜನರು ಮನ್ನಿಸದಿದ್ದುದನ್ನು ಕಂಡು ನಿರಾಶನಾಗಿ ತನ್ನ ಮಿತ್ರನನ್ನು ಭಗವಂತನ ರಕ್ಷಣೆಗೇ ಬಿಟ್ಟು ಮಾಧವರಸ ಅಸಹಾಯನಾಗಿ ನಿಂತಿದ್ದ ಹಾಗೇ ಅವನಿಗೊಂದು ಉಪಾಯ ಹೊಳೆಯಿತು. ಸ್ವರ್ಣ-ರಜತ ಮುದ್ರೆಗಳಿಂದ ತುಂಬಿದ್ದ ತನ್ನ ಹಣದ ಚೀಲವನ್ನು ಆತ ಸೊಂಟದಿಂದ ತೆಗೆದು ಕಲ್ಲು ಬೀಸುತ್ತಿದ್ದ ಜನರ ಕಿವಿಗಳ ಹಿಂದೆ ಅದನ್ನು ಹಿಡಿದು ಅಲುಗಾಡಿಸತೊಡಗಿದ. ಉದ್ರೇಕಿತರಾಗಿದ್ದ ಜನರು ಕೆಲವು ನಿಮಿಷಗಳ ವರೆಗೆ ಅತ್ತ ಲಕ್ಷ್ಯವೀಯಲಿಲ್ಲ. ಆದರೆ ಒಂದೆರಡು ಕ್ಷಣ ಕಳೆಯುವಷ್ಟರಲ್ಲಿಯೇ ಬಂಗಾರದ ಖಣಖಣಾಟ ಅವರ ಚಿತ್ತವನ್ನು ಸೆಳೆದುಕೊಂಡಿತು. ಕಲ್ಲು ಹಿಡಿದಿದ್ದ ಕೈಗಳು ಅವುಗಳನ್ನು ಕೆಳಗೆ ಬಿಸುಟತೊಡಗಿದುವು. ಜನರ ಲಕ್ಷ್ಯ ಇತ್ತ ಹೊರಳಿದುದು ಗೊತ್ತಾಗುತ್ತಲೂ ಮಾಧವರಸ ಚೀಲದಿಂದ ಮುದ್ರೆಗಳನ್ನು ತೆಗೆದು ಗುಂಪಿನಲ್ಲಿ ತೂರತೊಡಗಿದ. ಅವುಗಳನ್ನೆತ್ತಿಕೊಳ್ಳಲೆಂದು ಲೋಭಿಗಳೆಲ್ಲರೂ ಮುಗಿಬೀಳತೊಡಗಿದರು. ದಾರ್ಶನಿಕ ಮಾಧವರಸ ತನ್ನ ಚಾತುರ್ಯವನ್ನು ತಾನೇ ಹೊಗಳಿಕೊಳ್ಳುತ್ತ ಹಣದ ಚೀಲ ಹಿಡಿದುಕೊಂಡು ಕೊಂಚ ದೂರ ನಡೆದ. ಅವನ ಹಿಂದೆಯೇ ಜನಸಮೂಹವೂ ನಡೆಯಿತು. ಕಲ್ಲುಗಳ ಮೇಲೆ ಬಂಗಾರದ ಮುದ್ರೆಗಳು ಬಿದ್ದ ಹಾಗೆಲ್ಲ ಅವುಗಳನ್ನೆತ್ತಿಕೊಳ್ಳಲು ನಾ ಮುಂದೆ ನೀ ಮುಂದೆ ಎಂದು ಜನ ಬಾಗತೊಡಗಿದರು. ಭಿಕ್ಷುಕರು, ಸೇವಕರು, ಮತ್ತಿನ್ನಿತರರು ಈರೀತಿಯಾಗಿ ಹಣದಗಲಭೆಯಲ್ಲಿ ಮಗ್ನರಾಗುತ್ತಲೂ ರಾಮದಾಸನಾದಿಯಾಗಿ ಅಲ್ಲಿ ನೆರೆದಿದ್ದ ಸಭ್ಯಗೃಹಸ್ಥರೆಲ್ಲ ಈ ದೃಶ್ಯವನ್ನು ನೋಡಿ ಬಿದ್ದುಬಿದ್ದು ನಗತೊಡಗಿದರು. ಸ್ವಯಂ ರಾಮದಾಸನೇ ತನ್ನ ರೋಷವನ್ನು ಮರೆತುಬಿಟ್ಟ. ಇನ್ನುಳಿದವರೂ ಸಿದ್ಧನಾಥನನ್ನು ಮರೆತುಬಿಟ್ಟಿದ್ದರು.

ಚೀಲದಲ್ಲಿನ ಮುದ್ರೆಗಳೆಲ್ಲವನ್ನೂ ಸೂರೆ ಮಾಡಿದ ಬಳಿಕ ಮಾಧವರಸ ಸಿದ್ಧನಾಥನ ಬಳಿ ಧಾವಿಸಿ ಬಂದು ತನ್ನ ಅಗಲವಾದ ನಿಲುವಂಗಿಯಲ್ಲಿ ಅವನನ್ನು ಅಡಗಿಸಿಕೊಂಡು, ಮುಕ್ತಾದೇವಿಯ ಕೈಹಿಡಿದು ಅವರಿಬ್ಬರನ್ನೂ ಆ ಸ್ಥಳ

ದಿಂದ ಸಾಗಿಸಿ ಜನರಿಲ್ಲದ ಬೀದಿಯೊಂದಕ್ಕೆ ಕರೆದು ತಂದ.

ಸಿದ್ಧನಾಥನನ್ನು ತನ್ನ ಅಂಗಿಯಿಂದ ಹೊರತೆಗೆಯುತ್ತಾ ಮಾಧವರಸ ವ್ಯಂಗ ಪೂರಿತ ಸ್ವರದಲ್ಲಿ ಹೇಳಿದ:

"ಇದೆಂಥ ತಮಾಷೆ! ನನ್ನನ್ನು ಬಿಟ್ಟು, ನನ್ನ ಮಿತ್ರನ ಜೊತೆಗೆ ಹೊರಟುಬಿಟ್ಟಳಲ್ಲ ಮುಕ್ತಾ!"

ಅದಕ್ಕುತ್ತರವಾಗಿ ಮುಕ್ತಾ ಹೇಳಿದಳು:

"ಹೌದು ಮಾಧವರಸಾ, ನಾನು ಸ್ವಸಂತೋಷದಿಂದಲೇ ಇವರ ಸಂಗಡ ಹೊರಟಿದ್ದೇನೆ. ನಿಮ್ಮಂಥವರ ಜೊತೆಯೆಂದರೇನೇ ನನಗೆ ಬೇಸರಕ್ಕಿಟ್ಟು ಕೊಂಡಿದೆ. ನೀವು ಯಾವಾಗಲೂ ಉಲ್ಲಾಸದಿಂದಿರುತ್ತೀರಿ, ನಗುನಗುತ್ತಾ ಇರುತ್ತೀರಿ, ಸುಗಂಧ ದ್ರವ್ಯಗಳಲ್ಲಿ ಮುಳುಗೇಳುತ್ತೀರಿ, ವಿಲಾಸ ಲಾಲಸೆಗಳಲ್ಲಿ ಬಿದ್ದುಕೊಂಡಿರುತ್ತೀರಿ. ಇದೆಲ್ಲದರ ಬಗೆಗೂ ನನಗೆ ಹೇಸಿಕೆ ಬಂದಿದೆ. ಎಂತಲೆ ಅಜ್ಞಾತವನ್ನು ಹುಡುಕುತ್ತ ಹೊರಟಿದ್ದೇನೆ. ಸಂಸಾರಿಕ ಸುಖವೆಂಬುದು ನಿಜವಾದ ಸುಖವಲ್ಲವೆನ್ನುವುದು ಅನುಭವದಿಂದಲೇ ಗೊತ್ತಾಯಿತು ನನಗೆ. ದುಃಖದಲ್ಲೇ ನಿಜವಾದ ಸುಖವಿರುತ್ತದೆಂದು ಈ ಮಹಾತ್ಮರು ಹೇಳುತ್ತಾರೆ. ಇವರ ಮಾತಿನ ಮೇಲೆ ನನಗೆ ನಂಬಿಗೆಯೂ ಇದೆ. ಇವರಂಥ ಸತ್ಯಜ್ಞಾನಿಗಳು ಇನ್ನೆಲ್ಲಿ ಸಿಕ್ಕಾರು?"

ಮಾಧವರಸ ಮುಗುಳ್ನಗುತ್ತ ಹೇಳಿದ:

"ಪ್ರಿಯೆ, ನಾನೇನು ಸತ್ಯಜ್ಞಾನಿಯಲ್ಲವೇ? ನಾನೇನು ಅಜ್ಞನೆಂದು ತಿಳಿದಿದ್ದೀಯಾ? ಸಿದ್ಧನಾಥನ ಹತ್ತಿರ ಒಂದೇ ಒಂದು ಸತ್ಯವಿದ್ದರೆ ನನ್ನ ಹತ್ತಿರ ಸಂಸಾರದ ಎಲ್ಲಾ ಸತ್ಯಗಳೂ ಇವೆ. ಅವನಿಗಿಂತ ನಾನೇ ಹೆಚ್ಚು ಜ್ಞಾನಿಯಾದಂತಾಗಲಿಲ್ಲವೇ? ಆದರೂ ನನಗೆ ಆಬಗ್ಗೆ ಅಹಂಕಾರವೇನೂ ಇಲ್ಲ. ಸಂತೋಷವೂ ಇಲ್ಲ."

ತನ್ನನ್ನು ಕೋಪದಿಂದ ದಿಟ್ಟಿಸುತ್ತಿದ್ದ ಸಿದ್ಧನಾಥನನ್ನು ಕುರಿತು ಆತ ನೆಂದ:

"ಪ್ರಿಯ ಮಿತ್ರಾ, ನೀನೊಬ್ಬ ಮೂರ್ಖನೆಂದಾಗಲಿ, ಹಾಸ್ಯಾಸ್ಪದ ವ್ಯಕ್ತಿಯೆಂದಾಗಲಿ ನಾನು ಭಾವಿಸುವುದಿಲ್ಲ. ನನ್ನ ಬಗ್ಗೆ ಸುಮ್ಮಸುಮ್ಮನೆ ಕೋಪ ಮಾಡಿಕೊಳ್ಳಬೇಡ. ನಿನ್ನ ಜೀವನದೊಡನೆ ನನ್ನ ಜೀವನವನ್ನು ತುಲನೆ

ಮಾಡಿದರೆ ಯಾರಿಗೆ ಹೆಚ್ಚು ಮಹತ್ವವುಂಟೆಂಬುದು ತಾನೇ ತಿಳಿಯುತ್ತದೆ. ಸರಿ. ನನಗೆ ಸ್ನಾನದ ವೇಳೆಯಾಯಿತು. ದಾಸಿಯರು ನನಗಾಗಿ ಸುಗಂಧಿತ ನೀರನ್ನೂ ಸಜ್ಜುಗೊಳಿಸಿರಬಹುದು. ನಾನು ಮನೆಗೆ ಹೊರಡುತ್ತೇನೆ. ಸ್ನಾನ ಮುಗಿಸಿದ ಬಳಿಕ ಕಾಳಿದಾಸನ ಮೇಘದೂತವನ್ನೋದುತ್ತಾ ನಿದ್ದೆ ಹೋಗುತ್ತೇನೆ. ನೀನು ನಿನ್ನ ಗುಡಿಸಲಿಗೆ ಹೋಗಿ ಒಂಟಿಯು ಹಾಗೆ ಬಗ್ಗಿ ಒಳಹೊಕ್ಕು ಹಳಸಿದ ಮಂತ್ರಗಳನ್ನು ಉರುಹೊಡೆದು ಕಂದಮೂಲಗಳನ್ನು ತಿಂದು ನೆಲದ ಮೇಲೆ ಬಿದ್ದುಕೊಳ್ಳಬಹುದು. ನನ್ನ ನಿನ್ನ ದಿನಚರಿಗಳು ಈ ರೀತಿಯಾಗಿ ಪರಸ್ಪರ ವಿರುದ್ಧವಾಗಿದ್ದರೂ ನಮ್ಮ ಮನೋಭಾವನೆಗಳು ಮಾತ್ರ ಒಂದೇ ಶಕ್ತಿಗೆ ಅಧೀನವಾಗಿವೆ. ಸಮಸ್ತ ಮಾನವೀಯ ಕರ್ಮಗಳನ್ನು ನಡೆಸುತ್ತಿರುವ ಶಕ್ತಿಯೇ ನಮ್ಮ ಕರ್ಮಗಳನ್ನು ನಡೆಸುತ್ತಿದೆ. ನಾವಿಬ್ಬರೂ ಹುಡುಕುತ್ತಿರುವುದು ಸುಖವನ್ನೇ ಅಲ್ಲವೆ? ನಮ್ಮೆದುರು ಇರುವ ಗುರಿಯೂ ಒಂದೇ—ಆನಂದ ಪ್ರಾಪ್ತಿ; ಅಸಂಭವವೂ ಅಸಾಧ್ಯವೂ ಆದ ಆನಂದ ಪ್ರಾಪ್ತಿ."

"ಇನ್ನು ನಿನಗೊಂದು ಮಾತು ಮುಕ್ತಾ, ಧನವಿಲಾಸಗಳ ಮಡಿಲಲ್ಲಿ ಆಡುವಾಗ ನಿನಗೆ ದೊರೆತ ಸುಖಕ್ಕಿಂತ ಹೆಚ್ಚಿನದಾದ ಸುಖ ಸಂಯಮಜೀವನದಲ್ಲಿ, ತಪಸ್ಸಿನಲ್ಲಿ ದೊರೆಯುವಂತಿದ್ದರೆ ಹೋಗು, ಸಂತೋಷಪಡು, ಸುಖಿಯಾಗು. ನಿನ್ನ ಬಗ್ಗೆ ಯಾರಿಗಾದರೂ ಅಸೂಯೆಯೆನ್ನಿಸುವಂತಿದೆ. ನಮ್ಮ ನಮ್ಮ ಪ್ರವೃತ್ತಿಗಳಂತೆ ನಡೆದುಬಂದುದರಿಂದ ನನಗೂ ಸಿದ್ಧನಾಥನಿಗೂ ಒಂದೇ ಪ್ರಕಾರದ ಸಂತೋಷ ಪ್ರಾಪ್ತವಾಯಿತು. ಆದರೆ, ಮುಕ್ತಾ, ನಿನಗೆ ಮಾತ್ರ ಇನ್ನಾರಿಗೂ ದೊರೆಯದಂಥ ಭಿನ್ನ ರೀತಿಯ ಆನಂದ ಸಿಕ್ಕಿದೆ. ಇನ್ನೂ ಸಿಕಬಹುದು. ನನ್ನ ಮನಸ್ಸಿನಲ್ಲಿದ್ದುದನ್ನು ಹೇಳಲೇ ? ಒಂದೇ ಒಂದು ತಾಸಿನ ಮಟ್ಟಿಗೆ ಸಿದ್ಧನಾಥನ ಹಾಗೆ ನಾನೂ ತಪಸ್ವಿಯಾಗಲು ಬಯಸುತ್ತೇನೆ. ಅದರಿಂದ ದೊರೆಯಬಹುದಾದ ಆನಂದವನ್ನು ಅನುಭವಿಸಲಿಚ್ಛಿಸುತ್ತೇನೆ. ಆದರೆ ಅದು ನನ್ನ ಹಣೆಯಲ್ಲಿ ಬರೆದಂತಿಲ್ಲ. ಹೋಗಿ ಬಾ ಮುಕ್ತಾ, ನಿನ್ನ ಅಂತರಾತ್ಮ ನಿನ್ನನ್ನು ಕೊಂಡೊಯ್ಯುವಲ್ಲಿಗೆ ಹೋಗು. ನಿನಗೆ ನನ್ನ ಶುಭಾಶಯಗಳು. ಇದೆಲ್ಲ ವ್ಯರ್ಥ ಎನ್ನುವುದೇನೋ ನನಗೆ ಗೊತ್ತು. ಆದರೂ ನಾನೊಮ್ಮೆ ನಿನ್ನನ್ನು ಪ್ರೀತಿಸಿದ್ದೆ. ಅದಕ್ಕೆ ಪ್ರತಿಯಾಗಿ ಶುಭಾಶಯಗಳನ್ನಲ್ಲದೆ ಬೇರೇನನ್ನು ನಾನು ಕೊಡಬಲ್ಲೆ? ಆ ಪ್ರೀತಿಯ ನೆನಪು ಇನ್ನೂ ಸುರಕ್ಷಿತವಾಗಿದೆ

ನನ್ನ ಎದೆಯಲ್ಲಿ. ನನ್ನ ಪ್ರೀತಿಪಾತ್ರಳಾದ ದೇವೀ, ಹೋಗಿ ಬಾ "

ಮಾಧವರಸ ಮಾತಾಡುತ್ತಿದ್ದ ಹಾಗೇ ಸಿದ್ಧನಾಥನ ಹೃದಯದ ಕ್ರೋಧ ನಿಮಿಷ ನಿಮಿಷಕ್ಕೂ ಹೆಚ್ಚುತ್ತಿತ್ತು. ಶಾಪ ಕೊಡುವಂಥ ತೀಕ್ಷ್ಣ ಸ್ವರದಲ್ಲಿ ಆತನೆಂದ:

"ನೀಚಾ, ನಡೆ ಹೋಗು ಇಲ್ಲಿಂದ. ನಿನ್ನ ಮಾತು ಕೇಳಿ ಕೇಳಿ ವಾಂತಿ ಯಾಗುವ ಹಾಗಾಗುತ್ತಿದೆ. ನರಕದ ಹುಳುವಿನಂಥವನು ನೀನು. ಈಗ ತಾನೆ ನನ್ನ ಮೇಲೆ ಕಲ್ಲೆಸೆಯುತ್ತಿದ್ದ ಆ ನಿರ್ಭಾಗ್ಯ ಅಪರಾಧಿಗಳಿಗಿಂತ ತುಚ್ಛ ನೀನು. ತಾವು ಮಾಡುತಿದ್ದುದೇನು ಎನ್ನುವುದು ಅವರಿಗೆ ಗೊತ್ತಿರಲಿಲ್ಲ. ಇಂದಿಲ್ಲ ನಾಳೆ ಪರಮಾತ್ಮನ ಕೃಪೆ ಅವರ ಕಣ್ಣು ತೆರೆಯಿಸಬಹುದೆಂದು ನನಗೆ ವಿಶ್ವಾಸವಿದೆ. ಆದರೆ ನೀನು ಮಾತ್ರ ವಿಶ್ವಾಸಘಾತಕಿಯಾಗಿದ್ದೀ, ಕಪಟಿಯಾ ಗಿದ್ದೀ. ನಿನ್ನ ನಾಲಗೆ ವಿಷದ ನಾಲಗೆ. ನಿನ್ನ ಮುಖದಿಂದ ಯಾವಾಗಲೂ ನಿರಾಸೆ ಮತ್ತು ಮೃತ್ಯುಗಳೇ ಹೊರಬೀಳುತ್ತವೆ. ಪಾಖಂಡಿಗಳ ಮುಖದಿಂದ ನೂರು ವರ್ಷಗಳಲ್ಲಿ ಹೊರಡುವ ಈಶ್ವರನಿಂದೆ ನಿನ್ನ ಒಂದು ಕುಟಿಲ ಹಾಸ್ಯ ದಲ್ಲಿಯೇ ತುಂಬಿಕೊಂಡಿರುತ್ತದೆ."

ಆತನನ್ನು ಸ್ನಿಗ್ಧ ದೃಷ್ಟಿಯಿಂದ ನೋಡುತ್ತ ಮಾಧವರಸ ಹೇಳಿದ:

"ಬಂಧು ಸಿದ್ಧನಾಥ, ಹೋಗಿ ಬಾ. ನಿನ್ನ ಧಾರ್ಮಿಕ ನಂಬಿಕೆಯ ಎರಡು ನಿಧಿಗಳಂತಿರುವ ತಿರಸ್ಕಾರ ಮತ್ತು ಪ್ರೇಮಗಳು ಕೊನೆಯ ವರೆಗೂ ನಿನ್ನ ಜೊತೆಗಿರಲಿ. ಇದೇ ನನ್ನ ಆಪೇಕ್ಷೆ. ಮುಕ್ತಾ, ನಮಸ್ಕಾರ. ನನ್ನನ್ನು ಮರೆತುಬಿಡಲು ನೀನು ಯತ್ನಿಸಿದರೂ ಅದು ವ್ಯರ್ಥವಾಗುವುದು. ಏಕೆಂದರೆ ನನ್ನ ನೆನಪಿನಲ್ಲಿ ನೀನು ಸಜೀವವಾಗಿರುತ್ತೀಯೆ."

ಅವರನ್ನು ಬೀಳ್ಕೊಂಡು ಕಲ್ಯಾಣ ನಗರದ ಸ್ಮಶಾನದ ಬಳಿಯಿದ್ದ ಬೀದಿ ಗಳಲ್ಲಿ ಹಾದು ಮಾಧವರಸ ಮನೆಗೆ ಹೊರಟ. ತನ್ನ ಮೃತ್ಯುವೂ ಸನ್ನಿಹಿತ ವಾಗಿರಬಹುದೇ? ಎಲ್ಲರಿಗೂ ಒಂದಿಲ್ಲೊಂದು ದಿನ ಮೃತ್ಯು ತಪ್ಪಿದ್ದಲ್ಲ; ಅದೇನೋ ನಿಜ. ಆದರೂ........

ಮಾಧವರಸ ಯೋಚಿಸತೊಡಗಿದ:

"ನಿಜವಾಗಿ ಕಾಲ ಎಂಬ ವಸ್ತುವಿನಲ್ಲಿ ಏನೂ ತಥ್ಯವಿಲ್ಲ. ಕೇವಲ ನಮ್ಮ ಮಿದುಳಿನ ಭ್ರಾಂತಿಯದು. ಕಾಲದ ಅಸ್ತಿತ್ವವೇ ಇಲ್ಲವೆಂದಾಗ ಅದು

ನನ್ನ ಮೃತ್ಯುವನ್ನು ಹೇಗೆ ಬರಮಾಡುತ್ತದೆ? ಹಾಗಾದರೆ ನಾನು ಅಮರನಾಗಿದೇನೆಯೆ? ಅರ್ಥಾತ್ ಇಲ್ಲ. ಇದರರ್ಥವಿಷ್ಟೆ. ನನ್ನ ಮೃತ್ಯುವೆನ್ನುವುದು ಹಿಂದೆಯೂ ಇತ್ತು, ಈಗಲೂ ಇದೆ, ಮುಂದೆಯೂ ಇರುತ್ತದೆ. ಇಷ್ಟು ದಿನಗಳ ವರೆಗೆ ನನಗೆ ಇದರ ಅರಿವಿರಲಿಲ್ಲವಾದರೂ ಅದು ಇದ್ದುದೇನೂ ಸುಳ್ಳಲ್ಲವಲ್ಲ? ಮೃತ್ಯುವಿಗಾಗಿ ನಾನು ಭಯಭೀತನಾಗುವ ಕಾರಣವಿಲ್ಲ. ಈಗಾಗಲೆ ಬಂದಿರುವ ವಸ್ತುವಿನ ಬಗ್ಗೆ ಅಂಜುವುದು ಮೂರ್ಖತನವೇ ಅಲ್ಲವೆ? ಒಂದು ಪುಸ್ತಕದ ಕೊನೆಯ ಪುಟದ ಹಾಗೆ ಮೃತ್ಯು ಉಪಸ್ಥಿತವಾಗಿರುತ್ತದೆ. ಪುಸ್ತಕವನ್ನು ನಾವು ಓದುತ್ತಿರುತ್ತೇವೆ. ಅದರ ಕೊನೆಯ ಪುಟದ ಅಸ್ತಿತ್ವದ ಅರಿವೂ ನಮಗಿರುತ್ತದೆ. ಆದರೆ ಆ ಪುಟವನ್ನು ಮಾತ್ರ ನಾವಿನ್ನೂ ಓದಿರುವುದಿಲ್ಲ."

ಈ ರೀತಿಯಾಗಿ ತರ್ಕನಿಮಗ್ನನಾಗಿದ್ದಾಗಲೂ ಅವನಿಗೆ ಸಮಾಧಾನ ಲಭಿಸಲಿಲ್ಲ. ಮನೆ ಮುಟ್ಟಿದಾಗಲೂ ಅವನ ಹೃದಯ ಭಾರವಾಗಿಯೇ ಇತ್ತು.

ಅವನ ನಿರೀಕ್ಷೆಯಲ್ಲಿ ಹಲವು ಗಂಟೆಗಳನ್ನು ಕಳೆದ ತರುವಾಯ ಬೇಸರಗೊಂಡು ದಾಸಿಯರು ಪಗಡೆಯಾಡುತ್ತ ಕುಳಿತಿದ್ದರು.

ಇತ್ತ ಸಿದ್ಧನಾಥನೂ ಮುಕ್ತಾದೇವಿಯೂ ನಗರವನ್ನು ತ್ಯಜಿಸಿ ಪರ್ವತದ ಹಾದಿ ಹಿಡಿದು ನಡೆಯುತ್ತಿದ್ದರು.

ಆಕಾಶದತ್ತ ಬೆರಳು ತೋರಿಸುತ್ತ ಸಿದ್ಧನಾಥ ಹೇಳಿದ:

"ಮುಕ್ತಾ, ಈ ವಿಶಾಲ ನೀಲ ಆಕಾಶವೂ ಕೂಡಾ ನಿನ್ನ ಕಲಂಕವನ್ನು ಪರಿಶುದ್ಧಗೊಳಿಸಲಾರದು."

ಕ್ರೋಧ ತಿರಸ್ಕಾರ ತುಂಬಿದ ಧ್ವನಿಯಲ್ಲಿ ಆತ ಮತ್ತೆ ಹೇಳಿದ:

"ನಾಯಿಗಳಿಗಿಂತ ಕಡೆಯಾಗಿ ಜೀವಿಸಿದ ಹೆಣ್ಣೇ! ಜಗತ್ತಿನಲ್ಲಿನ ಪರಮ ನೀಚರೆಲ್ಲರ ಜೊತೆಗೆ ನೀನು ವೇಶ್ಯಾವೃತ್ತಿ ನಡೆಸಿದೆ. ಭಗವಂತನಿಂದ ಸೃಷ್ಟಿಯಾದ ಪವಿತ್ರ ಶರೀರವನ್ನು ಭ್ರಷ್ಟಗೊಳಿಸಿದೆ. ನಿನ್ನ ಕಲಂಕ ಬಹು ಭೀಕರವಾದದ್ದು. ನಿನಗೆ ಸತ್ಯದ ಅರಿವು ಬಂದರೂ ಕೂಡಾ, ನಿನ್ನ ಬಗ್ಗೆ ನಿನಗೇ ತಿರಸ್ಕಾರ ಬರುವ ವರೆಗೆ ನೀನು ಭಗವಂತನನ್ನು ಪ್ರಾರ್ಥಿಸುವುದಕ್ಕೂ ಯೋಗ್ಯಳಾಗುವುದಿಲ್ಲ."

ಉರಿಯುತ್ತಿದ್ದ ಬಿಸಿಲಿನಲ್ಲಿ ಬರಿಗಾಲಿನಿಂದ ನಡೆಯುತ್ತ ಮುಕ್ತಾ ಸಿದ್ಧನಾಥನನ್ನು ಹಿಂಬಾಲಿಸಿಕೊಂಡು ಹೊರಟಿದ್ದಳು. ಆಯಾಸದಿಂದ ಅವಳ

ಕಾಲು ಸೋತುಹೋದುವು. ದಾಹದಿಂದ ಬಾಯಿ ಒಣಗಿಹೋಯಿತು. ಅವಳ ಅವಸ್ಥೆಯನ್ನು ಕಂಡು ಸಿದ್ಧನಾಥನ ಮನಸ್ಸಿನಲ್ಲಿ ಕನಿಕರವೇನೂ ಉತ್ಪನ್ನವಾಗಲಿಲ್ಲ. ಅದರ ಬದಲು, ಅವಳ ಅಪರಾಧೀ ದೇಹಕ್ಕೆ ಇದೇ ತಕ್ಕ ಪ್ರಾಯಶ್ಚಿತ್ತವೆನ್ನಿಸಿ ಅವನಿಗೆ ಸಮಾಧಾನವೇ ಆಯಿತು. ಧರ್ಮದ ಉತ್ಸಾಹ ದಲ್ಲಿ ವೈಮರೆತಿದ್ದ ಸಿದ್ಧನಾಥ ಮುಕ್ತಾದೇವಿಯ ದೇಹವನ್ನು ಸುಡುವ ಶಲಾಕೆ ಗಳಿಂದ ಇರಿಯುವುದಕ್ಕೂ ಹಿಂಜರಿಯುತ್ತಿರಲಿಲ್ಲ. ವಿಚಾರಗಳು ಅವನ ಉಗ್ರತೆಯನ್ನಿನ್ನೂ ಹೆಚ್ಚಿಸಿದುವು. ಮಾಧವರಸನ ಜೊತೆಗೆ ಮುಕ್ತಾ ಏಕ ಶಯ್ಯೆಯ ಮೇಲೆ ಮಲಗಿದ್ದ ದೃಶ್ಯವನ್ನಾತ ಜ್ಞಾಪಿಸಿಕೊಂಡ. ಅದರೊಡನೆಯೆ ಅವಳ ಅಪರಾಧದ ಭಯಂಕರತೆಯ ಅರಿವಾಗಿ ಅವನ ದೇಹದಲ್ಲಿನ ರಕ್ತವೆಲ್ಲವೂ ಹೃದಯದಲ್ಲಿ ಒಟ್ಟುಗೂಡಿದ ಹಾಗಾಯಿತು. ಅದರಿಂದಾಗಿ ಅವನ ಎದೆಯೇ ಒಡೆದುಹೋಗುವಂತೆ ತೋರುತ್ತಿತ್ತು. ಶಾಪವಾಣಿ ಕಂಠದವರೆಗೂ ಚಿಮ್ಮಿ ಬಂದು ಅಲ್ಲಿಯೆ ತಡೆದು ನಿಂತಿತು. ಆತ ಔಡುಗಚ್ಚಿದ. ಆ ಸಮಯದ ಅವನ ವಿಕೃತ ರೂಪವನ್ನು ನೋಡಿದರೆ ಯಾರಿಗಾದರೂ ಅಂಜಿಕೆ ಬರು ವಂತಿತ್ತು. ಆತ ಹಠಾತ್ತನೆ ಹಿಂದಿರುಗಿ ಮುಕ್ತಾಳ ಎದುರು ನಿಂತು ಭೇದಕ ದೃಷ್ಟಿಯಿಂದ ಅವಳನ್ನಿರಿಯುತ್ತ ಅವಳ ಮುಖದ ಮೇಲೆ ಉಗುಳಿದ.

ಮುಕ್ತಾ ಮಾತ್ರ ಕೊಂಚವೂ ಅಧೀರಳಾಗದೆ, ಕೋಪಿಸಿಕೊಳ್ಳದೆ ಮುಖ ವನ್ನೊರೆಸಿಕೊಂಡು ಮತ್ತೆ ಮುನ್ನಡೆಯತೊಡಗಿದಳು. ನರಕದ ಕೀಟ ವೊಂದನ್ನು ನೋಡುವಂತೆ ಅವಳನ್ನೇ ಆಗಾಗ ನೋಡುತ್ತ ಸಿದ್ಧನಾಥನೂ ನಡೆಯತೊಡಗಿದ. ಪವಿತ್ರವಾದ ಉದ್ವಿಗ್ನತೆಯಲ್ಲಿ ಅವನ ಮನಸ್ಸು ಮುಳು ಗೇಳುತ್ತಿತ್ತು. ಅದೇ ಸಮಯದಲ್ಲಿ, ಮುಕ್ತಾದೇವಿಯ ಕೋಮಲ ಪಾದ ಗಳಿಂದ ಹೊರಹೊರಟ ರಕ್ತಬಿಂದುವೊಂದು ಅವನ ದೃಷ್ಟಿಗೆ ಬಿತ್ತು. ಅದರೊ ಡನೆಯೆ ಅವನ ಹೃದಯದಲ್ಲಿ ಏನೋ ಬದಲಾವಣೆಯಾದ ಹಾಗಾಯಿತು. ಅವನ ಕೊರಳು ಬಿಗಿಯಿತು, ಹಿಂದೆ ಹೊರಳಿ ಅಳುತ್ತಳುತ್ತ ಅವಳ ಮುಂದೆ ಬಿದ್ದು, ಅವಳ ರಕ್ತರಂಜಿತ ಚರಣಗಳನ್ನು ಚುಂಬಿಸಿದ.

"ನನ್ನ ಸಹೋದರಿ, ನನ್ನ ಮಾತೆ, ಪರಮ ಪವಿತ್ರ ಮುಕ್ತಾ!"

ಮುಕ್ತಾಗೆ ಯಾವುದೂ ಅರ್ಥವಾಗಲಿಲ್ಲ. ಅದುವರೆಗೆ ಅತ್ಯಂತ ಕಠೋರವಾಗಿ ವರ್ತಿಸುತ್ತಿದ್ದ ಸಿದ್ಧನಾಥ ಒಮ್ಮಿಂದೊಮ್ಮೆಲೆ ಹೀಗೆ ಆಚರಿಸಲು

ಕಾರಣವೇನು? ಇಷ್ಟು ಬೇಗ ತನ್ನ ಪಾಪವೆಲ್ಲಾ ತೊಳೆದುಹೋಯಿತೇ? ನರಕದ ನಾಯಿಯಾಗಿದ್ದ ತಾನು ಇಷ್ಟು ಬೇಗ ಪವಿತ್ರಳಾದಳೇ? ಅಥವಾ, ಈ ಸಾಧುವಿನ ತಲೆಯೇನಾದರೂ ಕೆಟ್ಟಿತೇ?

ಸಿದ್ಧನಾಥ ಪ್ರಾರ್ಥಿಸಲಾರಂಭಿಸಿದ್ದ:

"ದೇವದೂತರೆ, ಈ ಅಮೂಲ್ಯ ರಕ್ತಬಿಂದುವನ್ನು ಸರ್ವಶಕ್ತಿವಂತನಾದ ಪರಮೇಶ್ವರನ ಸಿಂಹಾಸನದ ಹತ್ತಿರ ಕೊಂಡೊಯ್ಯಿರಿ. ಈ ರಕ್ತ ಬಿದ್ದ ಸ್ಥಳ ದಲ್ಲಿ ಹೂಗಿಡವೊಂದು ಬೆಳೆಯಲಿ, ಅದರ ಪುಷ್ಪಗಳನ್ನು ದೃಷ್ಟಿಸುವವರ ಮನಸ್ಸು, ಮಿದುಳು ಪವಿತ್ರವಾಗಲಿ. ಹೇ ಪರಮ ಪವಿತ್ರೆ, ಪೂಜ್ಯ ಮುಕ್ತಾ!"

ಅದೇ ಸಮಯದಲ್ಲಿ, ಕತ್ತೆಯೊಂದರ ಮೇಲೆ ಕುಳಿತು ಹೊರಟಿದ್ದ ಒಬ್ಬ ಹುಡುಗ ಅಲ್ಲಿಗೆ ಬಂದ. ಸಿದ್ಧನಾಥ ಆ ಹುಡುಗನನ್ನು ಕತ್ತೆಯಿಂದಿಳಿಸಿ ಅವನ ಬದಲು ಮುಕ್ತಾದೇವಿಯನ್ನು ಅದರ ಮೇಲೆ ಕೂಡ್ರಿಸಿ, ದಾರವನ್ನು ತಾನೇ ಹಿಡಿದುಕೊಂಡು ಯಾತ್ರೆಯನ್ನು ಮುಂದುವರಿಸಿದ. ಸಾಯಂಕಾಲ ಮನೋ ಹರ ವೃಕ್ಷಗಳ ಛಾಯೆಯಲ್ಲಿ ಹರಿದುಹೋಗುತ್ತಿದ್ದ ಕಾಲುವೆಯೊಂದರ ಬಳಿ ಕತ್ತೆಯನ್ನು ನಿಲ್ಲಿಸಿ ಮುಕ್ತಾದೇವಿಯನ್ನಿಳಿಸಿ ತಾನೂ ಕುಳಿತುಕೊಂಡ.

"ಬುತ್ತಿ ತಂದಿದೀಯಾ ಮಗೂ?"

"ತಂದಿದ್ದೇನೆ ಸಾಧು ಮಹಾರಾಜ್. ನಿಮಗೆ ಬೇಕೇನು?" ಎಂದ ಹುಡುಗ.

"ನಿನಗೆ ಸಾಕಾಗಿ ಉಳಿಯುವಂತಿದ್ದರೆ ಸ್ವಲ್ಪ ಕೊಡು. ದೇವರು ನಿನಗೆ ಕಲ್ಯಾಣ ಮಾಡುವನು."

ಹುಡುಗ ಬುತ್ತಿಯನ್ನು ಬಿಚ್ಚಿ ರೊಟ್ಟಿ ಪಲ್ಯ ತೆಗೆದುಕೊಟ್ಟ. ಮತ್ತೆ ಮುಕ್ತಾಗೆ ತನ್ನ ಬಾಲ್ಯಕಾಲದ ನೆನಪು ಬಂತು. ಆಗಲೂ ಇಂಥ ಸಾಧಾರಣ ಆಹಾರವನ್ನೆ ಆಕೆ ಉಣ್ಣುತ್ತಿದ್ದಳು. ಅನಂತರದ ಕೆಲವು ವರ್ಷಗಳ ವರೆಗೆ ಪಂಚ ಪಕ್ವಾನ್ನಗಳನ್ನು ಸೇವಿಸಿದುದಾಗಿತ್ತು. ಆ ಎಲ್ಲ ಪಕ್ವಾನ್ನಗಳಿಗಿಂತಲೂ ಈ ರೊಟ್ಟಿ ಪಲ್ಯಗಳೇ ಹೆಚ್ಚು ರುಚಿಕರವೆಂದು ಅವಳಿಗೆ ಸಿತು.

ಕಾಲುವೆಯ ನಿರ್ಮಲ ಜಲವನ್ನು ಸೇವಿಸಿ ತೃಪ್ತಿಯಿಂದ ಉಸಿರುಬಿಡುತ್ತ ಅವಳೆಂದಳು:

"ಇಂಥಾ ಸ್ವಚ್ಛ ಸಿಹಿ ನೀರನ್ನು ನಾನೆಂದೂ ಕುಡಿದಿರಲಿಲ್ಲ. ಇಂಥ ಸುಖ

ಕಾರಕ ವಾಯುವನ್ನೂ ಸೇವಿಸಿರಲಿಲ್ಲ. ಸ್ವಯಂ ಭಗವಂತನೇ ಈ ಹವೆಯಲ್ಲಿ ಉಯ್ಯಾಲೆಯಾಡುತ್ತಿರುವನೆಂದು ನನಗನ್ನಿಸುತ್ತಿದೆ."

ಸಿದ್ಧನಾಥ ಹೇಳಿದ:

"ಸಹೋದರಿ, ನಿನ್ನ ಮಾತು ನಿಜ. ಸಂಧ್ಯಾ ಸಮಯವಾಗಿದೆ. ಬೆಟ್ಟಗಳ ಮೇಲೆ ರಾತ್ರಿಯ ಕಪ್ಪು ಛಾಯೆ ಹರಡುತ್ತಿದೆ. ಸ್ವಲ್ಪ ಹೊತ್ತಿನಲ್ಲೇ ಕತ್ತಲೆಯೂ ಪಸರಿಸುತ್ತದೆ. ಆದರೆ ಮತ್ತೆ ಸ್ವಲ್ಪ ವೇಳೆಯಲ್ಲೇ ಉಷಃ ಪ್ರಕಾಶದಲ್ಲಿ ಜೀವನದ ಹೊಳಪನ್ನು ನೋಡಬಹುದು. ಅನಂತ ಪ್ರಭಾತದ ಗುಲಾಬಿ ಕಿರಣಗಳ ದರ್ಶನವಾಗಬಹುದು."

ರಾತ್ರಿಯಲ್ಲೂ ಅವರು ನಡೆಯುತ್ತಲೇ ಇದ್ದರು. ಆಕಾಶದಲ್ಲಿ ಅರ್ಧ ಚಂದ್ರ ಬೆಳಗುತ್ತಿದ್ದ. ಭಜನೆಗಳನ್ನು ಹಾಡುತ್ತ ಅವರು ಹೆಜ್ಜೆಹಾಕುತ್ತಿದ್ದರು. ಹಾಗೆ ಎಷ್ಟೋ ದಿನಗಳ ವರೆಗೆ ಪ್ರವಾಸ ಮಾಡಿದ ಬಳಿಕ ಅವರು ಪರ್ವತದ ಹತ್ತಿರ ಬಂದರು.

"ಇದೇ ಶ್ರೀಶೈಲ ಪರ್ವತವಲ್ಲವೇ ತಂದೇ ?"

"ಹೌದು ಮುಕ್ತಾ. ಇದೇ ನಿನ್ನ ಮುಕ್ತಿಧಾಮ."

"ಅಲ್ಲಿ, ಬೆಟ್ಟದ ಮೇಲೆ, ಗಿಡಗಳ ಕೆಳಗೆ ಗುಡಿಸಲು ಕಾಣುತ್ತಿವೆಯಲ್ಲ, ಅಲ್ಲಿಯೇ ನಮ್ಮ ಆಶ್ರಮವಿದೆಯೇನು ?"

"ಹೌದು ಸಹೋದರಿ. ಹೈಮವತೀದೇವಿಯ ಆಶ್ರಮ ಅದೇ. ನಿನ್ನ ಭೂತಕಾಲವನ್ನೆಲ್ಲಾ ದಹಿಸಿ ಭವಿತವ್ಯವನ್ನು ಉಜ್ವಲಗೊಳಿಸುವ ಅಗ್ನಿಕುಂಡ ಅಲ್ಲಿದೆ."

ಅವರು ಬೆಟ್ಟವನ್ನೇರತೊಡಗಿದರು. ಮತ್ತೆ ಕೆಲವು ಕ್ಷಣಗಳಲ್ಲಿಯೇ ಗುಡಿಸಲುಗಳು ಸ್ಪಷ್ಟವಾಗಿ ಕಾಣಿಸತೊಡಗಿದುವು. ಅವುಗಳ ಸುತ್ತಲೂ ಸಂನ್ಯಾಸಿನಿಯರು ಜೇನುಹುಳುಗಳಂತೆ ಸುಳಿದಾಡುತ್ತಿದ್ದರು. ಕೆಲವರು ರೊಟ್ಟಿ ಸುಡುತ್ತಿದ್ದರು. ಕೆಲವರು ತರಕಾರಿ ಸಿದ್ಧಗೊಳಿಸುತ್ತಿದ್ದರು. ಇನ್ನು ಕೆಲವರು ನೂಲು ತೆಗೆಯುತ್ತಿದ್ದರು. ಮತ್ತೆ ಕೆಲವರು ತೋಟದಲ್ಲಿ ದುಡಿಯುತ್ತಿದ್ದರು. ಭಗವಂತನ ಮುಗುಳ್ನಗೆಯನ್ನು ನೆನಪಿಗೆ ತಂದುಕೊಡುವಂಥ ದೈವೀಜ್ಯೋತಿ ಅವರ ಮೇಲೆ ಸುರಿಯುತ್ತಿದ್ದ ಹಾಗಿತ್ತು. ಕೆಲವರು ವಿರಾಗಿಣಿಯರು ವೃಕ್ಷಗಳ ಅಡಿಯಲ್ಲಿ ಕುಳಿತು ಧ್ಯಾನ ಮಾಡುತ್ತಿದ್ದರು. ಪ್ರಾರ್ಥನೆ, ಚಿಂತನೆ, ತಪಸ್ಸು

ಗಳೇ ಅವರ ನಿತ್ಯಕರ್ಮಗಳಾಗಿದ್ದುವು. ಅವರು ಶ್ವೇತವಸ್ತ್ರಗಳನ್ನು ಧರಿಸಿದ್ದರು. ವೃದ್ಧೆಯೊಬ್ಬಳು ಕುಟೀರದ ಬಾಗಿಲಲ್ಲಿ ಕೋಲ ಮೇಲೆ ಕೈಯೂರಿ ನಿಂತುಕೊಂಡಿದ್ದಳು.

ಸಿದ್ಧನಾಥ ಅವಳ ಹತ್ತಿರ ಬಂದು ಆದರದಿಂದ ಬಾಗಿ ನಮಸ್ಕರಿಸುತ್ತ ಹೇಳಿದ:

"ಪೂಜ್ಯ ಹೈಮವತೀದೇವಿ, ನಿನಗೆ ಪ್ರಣಾಮ. ನಿನ್ನ ಜೇನುಹುಟ್ಟಿನಲ್ಲಿರಿಸುವುದಕ್ಕೆಂದು, ಪುಷ್ಪಗಳಿಲ್ಲದ ಕಡೆ ಹಾರಾಡುತ್ತಿದ್ದ ಜೇನ್ನೊಣವೊಂದನ್ನು ತಂದಿದ್ದೇನೆ. ನನ್ನ ಅಂಗೈಯಲ್ಲಿಟ್ಟುಕೊಂಡು ಇದನ್ನು ಇಲ್ಲಿಯವರೆಗೆ ತೆಗೆದುಕೊಂಡು ಬಂದಿದ್ದೇನೆ. ನನ್ನ ಶ್ವಾಸದಿಂದ ಇದಕ್ಕೆ ನವಜೀವನ ಕೊಟ್ಟಿದ್ದೇನೆ. ದಯೆಯಿಟ್ಟು ಇದನ್ನೀಗ ನೀನು ಒಪ್ಪಿಸಿಕೊಳ್ಳಬೇಕು."

ಆತ ಮುಕ್ತಾಳತ್ತ ಬೆರಳು ಮಾಡಿದ. ಅವಳಾಗಲೇ ಹೈಮವತೀದೇವಿಯ ಅಡಿಗೆರಗಿದ್ದಳು.

ಹೈಮವತೀದೇವಿ ಒಂದು ಗಳಿಗೆ ಮುಕ್ತಾಳನ್ನು ತೀಕ್ಷ್ಣ ದೃಷ್ಟಿಯಿಂದ ನಿಟ್ಟಿಸಿದಳು. ಅನಂತರ ಹೇಳಿದಳು:

"ಏಳು ಮಗಳೇ, ಮೇಲಕ್ಕೇಳು."

ಮುಕ್ತಾ ಮೇಲಕ್ಕೇಳುತ್ತಲೂ ಹೈಮವತೀದೇವಿಯೆಂದಳು:

"ಈಕೆಯನ್ನು ಕರೆದುಕೊಂಡು ಬಂದು ಬಹಳ ಒಳ್ಳೆಯ ಕೆಲಸ ಮಾಡಿದಿರಿ ತಂದೇ. ಒಂದು ಜೀವವನ್ನು ಉದ್ಧಾರ ಮಾಡಿದಿರಿ. ಇವಳಿಗೆ ಯಾವ ಕೆಲಸ ಒಪ್ಪಿಸೋಣ ?"

ಮುಕ್ತಾದೇವಿಯ ಇತಿಹಾಸವನ್ನು ಸ್ವಲ್ಪದರಲ್ಲಿಯೇ ವಿವರಿಸಿ ಹೇಳಿ ಸಿದ್ಧನಾಥನೆಂದ:

"ಇವಳನ್ನು ಈಗಲೇ ಇತರ ಸಂನ್ಯಾಸಿನಿಯರ ಸಂಗಡ ಸೇರಿಸದೆ ಪ್ರತ್ಯೇಕವಾದ ಕೋಣೆಯಲ್ಲಿರಿಸಬೇಕು. ಅಲ್ಲಿ ಇವಳು ಪ್ರಾಯಶ್ಚಿತ್ತ ಪಡೆದು ಪುನೀತಳಾದ ನಂತರ ಮುಂದಿನ ವಿಚಾರ ಮಾಡಬಹುದು."

"ಏನು ಮಗಳೇ, ನಿನ್ನ ಅಭಿಪ್ರಾಯವೇನು ?"

"ಈಗ ನನಗೆ ನನ್ನದೆನ್ನುವ ಅಭಿಪ್ರಾಯಗಳೇ ಉಳಿದಿಲ್ಲ. ತಮ್ಮ ಅಪ್ಪಣೆಯೇ ನನ್ನ ಇಚ್ಛೆ."

"ನಡೆ ಹಾಗಾದರೆ."

ತೆರವಿದ್ದ ಕುಟೀರವೊಂದಕ್ಕೆ ಅವಳನ್ನು ಕರೆದೊಯ್ದಳು ಹೈಮವತೀದೇವಿ. ಅಲ್ಲೊಂದು ಹುಲ್ಲಿನ ಚಾಪೆಯಿತ್ತು, ಒಂದು ಮಣ್ಣಿನ ಕೊಡವಿತ್ತು, ಒಂದು ಪಾತ್ರೆಯಿತ್ತು. ಹೊಸತಿಲಲ್ಲಿ ಅಡಿಯಿರಿಸುತ್ತಿದ್ದ ಹಾಗೆಯೇ ಮುಕ್ತಾ ಆನಂದಭರಿತಳಾದಳು.

"ಈ ಕುಟೀರದ ಬಾಗಿಲಿಗೆ ಬೀಗಮುದ್ರೆ ಹಾಕಬೇಕೆಂದು ನನ್ನ ಅಭಿಪ್ರಾಯ. ಇವಳು ತನ್ನ ಪಾಪಗಳಿಂದ ಮುಕ್ತಳಾದಾಗ ಸ್ವಯಂ ಪರಮೇಶ್ವರನೇ ಬಂದು ಬಾಗಿಲು ತೆಗೆಯಲಿ." ಎಂದ ಸಿದ್ಧನಾಥ.

ಆತ ಜಲಾಶಯದ ಹತ್ತಿರ ಹೋಗಿ ಅಲ್ಲಿನ ರಾಡಿಮಣ್ಣನ್ನೆತ್ತಿಕೊಂಡು ಅದಕ್ಕೆ ತನ್ನದೊಂದು ಕೂದಲನ್ನಂಟಿಸಿದ. ಅನಂತರ ಕುಟೀರಕ್ಕೆ ಬಂದು ಅದರ ಬಾಗಿಲಿಗೆ ಬೀಗ ಜಡಿದು, ಬೀಗದ ಮೇಲೆ ಆ ರಾಡಿಮಣ್ಣಿನ ಮುದ್ರೆಯೊತ್ತಿದ.

ಕುಟೀರದಲ್ಲಿ, ಕಿಟಕಿಯ ಹತ್ತಿರ ಶಾಂತಳಾಗಿ ಸಂತುಷ್ಟಳಾಗಿ ನಿಂತುಕೊಂಡಿದ್ದಳು ಮುಕ್ತಾ. ಸಿದ್ಧನಾಥ ಕಿಟಕಿಯ ಬಳಿ ಬಂದು ಮೊಳಕಾಲೂರಿ ಕುಳಿತು ಪರಮಾತ್ಮನನ್ನು ಪ್ರಾರ್ಥಿಸಿದ.

"ಜೀವನದ ಸರಿಯಾದ ಹಾದಿ ಹಿಡಿದು ಹೊರಟ ಮುಕ್ತಾ ಎಷ್ಟು ಪ್ರಿಯಳಾಗಿದ್ದಾಳೆ ! ಅವಳ ಚರಣಗಳೆಷ್ಟು ಮಧುರವಾಗಿವೆ ! ಎಷ್ಟು ತೇಜಃಪೂರ್ಣವಾಗಿದೆ ಅವಳ ಮುಖ !"

ಆತ ಎದ್ದ, ಅಂಗವಸ್ತ್ರವನ್ನು ತಲೆಯ ಮೇಲೆಳೆದುಕೊಂಡು ನಿದಾನವಾಗಿ ನಡೆದುಹೋದ.

ಹೈಮವತೀದೇವಿ ಸಂನ್ಯಾಸಿನಿಯೊಬ್ಬಳನ್ನು ಕೂಗಿ ಕರೆದು ಹೇಳಿದಳು:

"ಮಗಳೇ, ಮುಕ್ತಾಗೆ ದಿನವೂ ಬೇಕಾಗುವ ಆಹಾರ ಸಾಮಗ್ರಿಗಳನ ನೀನೇ ಪೂರೈಸುತ್ತಾ ಇರು."

"ಇನ್ನೊಂದು ಸಣ್ಣ ವಸ್ತುವನ್ನು ಕೊಡುವಿರಾ ಮಹಾತಾಯಿ ?" ಎಂದು ಮುಕ್ತಾ ಬೇಡಿಕೊಂಡಳು.

"ಏನಮ್ಮಾ, ಏನು ಬೇಕು ?"

"ಅಂಥಾ ದೊಡ್ಡದೇನೂ ಅಲ್ಲ ತಾಯಿ ಅದು. ನನಗೊಂದು ಸಣ್ಣ ಕೊಳಲು ಕೊಡಿ."

"ಸರಿ. ಇವಳಿಗೊಂದು ಬಿದಿರಿನ ಕೊಳಲು ತಂದು ಕೊಡು ಮಗಳೇ!" ಎಂದು ಸಂನ್ಯಾಸಿನಿಗೆ ಹೇಳಿ ಹೈಮವತೀದೇವಿ ಕೋಲನ್ನೂರುತ್ತ ತನ್ನ ಕುಟೀರಕ್ಕೆ ಹೊರಟಳು.

## ೭

ಸಿದ್ಧನಾಥ ತನ್ನ ಆಶ್ರಮಕ್ಕೆ ಹಿಂದಿರುಗಿ ಬರುತ್ತಲೂ ಅವನ ಜೊತೆಗಾರರಾದ ಸಂನ್ಯಾಸಿಗಳು ಆನಂದೋತ್ಸಾಹಗಳಿಂದ ಸ್ವಾಗತಿಸಿದರು. "ಜೈ ಗೌರೀ ಶಂಕರ್ !" ಎಂಬ ಘೋಷಣೆಗಳಿಂದ ಪರ್ವತದ ಮೂಲೆಮೂಲೆಗಳು ಪ್ರತಿಧ್ವನಿತವಾದುವು. ಕಲ್ಯಾಣನಗರಕ್ಕೆ ಹೋಗಿ ಸಿದ್ಧನಾಥ ಸಾಧಿಸಿದ ವಿಜಯದ ವಾರ್ತೆ ಆ ವೇಳೆಗಾಗಲೆ ಆಶ್ರಮದಲ್ಲೆಲ್ಲ ಪಸರಿಸಿತ್ತು.

ಸಿದ್ಧನಾಥನ ಕುಟೀರದೆದುರು ಎಲ್ಲರೂ ನೆರೆದು ಭಗವಂತನನ್ನು ಸ್ತುತಿಸತೊಡಗಿದರು.

"ಸಿದ್ಧನಾಥ ಬಂಧು, ನಮಗೆ ಆಶೀರ್ವಾದ ಮಾಡಿರಿ. ನೀವು ಇಲ್ಲಿಂದ ಹೋದಂದಿನಿಂದಲೂ ನಾವು ಅನಾಥರಾಗಿದ್ದೆವು."

ಸ್ವಲ್ಪ ಹುಚ್ಚನಂತೆ ವರ್ತಿಸುತ್ತಿದ್ದ, ಆತ್ಯಂತ ಮುಗ್ಧ ಹೃದಯದ ತರುಣ ಸಂನ್ಯಾಸಿ ಶಿಶು ಮಾತ್ರ ಸಿದ್ಧನಾಥನನ್ನು ಗುರುತಿಸಲು ಸಮರ್ಥನಾಗಲಿಲ್ಲ.

"ಈಗ ಬಂದಿರುವರಲ್ಲಾ, ಯಾರಿವರು ?" ಎಂದು ಆತ ಪ್ರಶ್ನಿಸಿದ.

ಅವನ ಪ್ರಶ್ನೆಗಳನ್ನು ಯಾರೂ ವಿಶೇಷವಾಗಿ ಲಕ್ಷಿಸುತ್ತಿರಲಿಲ್ಲ. ಆಗಲೂ ಅವನತ್ತ ಯಾರೂ ಗಮನವೀಯಲಿಲ್ಲ. ಅವನು ಭಕ್ತಿಪರಾಯಣನಾಗಿದ್ದನಾದರೂ ಅವನಿಗೆ ಬುದ್ಧಿಯಿಲ್ಲವೆಂಬ ವಿಚಾರ ಎಲ್ಲರಿಗೂ ಗೊತ್ತಿದ್ದುದೇ ಆಗಿತ್ತು.

ತನ್ನ ಕುಟೀರದಲ್ಲಿ ಏಕಾಕಿಯಾಗಿ ಕುಳಿತು ಸಿದ್ಧನಾಥ ಯೋಚಿಸತೊಡಗಿದ:

"ಭಗವಂತನ ಅಪ್ಪಣೆಯಂತೆ ಒಂದು ಕಾರ್ಯ ನೆರವೇರಿಸಿ ಪುನಃ ನನ್ನ ಶಾಂತಿಯ ಸ್ಥಳಕ್ಕೆ ಬಂದದ್ದಾಯಿತು. ನನ್ನ ಆನಂದಧಾಮಕ್ಕೇ ಮತ್ತೆ ಬಂದು ಸೇರಿದ್ದಾಯಿತು. ಆದರೆ ಏನೋ ವಿಚಿತ್ರಭಾವ ಬರುತ್ತಿದೆಯಲ್ಲ ? ಈ ಹುಲ್ಲಿನ ಗುಡಿಸಲು ಮೊದಲಿನಂತೆ ನನ್ನನ್ನು ಮಿತ್ರಭಾವದಿಂದ ನೋಡುತ್ತಿದ್ದಂತೆ ಕಾಣುವುದಿಲ್ಲ. ನನ್ನನ್ನು ಕಂಡೊಡನೆ ಗೋಡೆಗಳು ಸ್ವಾಗತ ಬಯಸಲಿಲ್ಲ. ನಾನಿಲ್ಲಿ ಇಲ್ಲದಿದ್ದಾಗ ಏನಾದರೂ ಬದಲಾವಣೆಯಾಗಿರಬಹುದೇ ? ಇಲ್ಲ. ಇದ್ದದ್ದೆಲ್ಲಾ

ಇದ್ದಂತೆಯೇ ಇದೆ. ನನ್ನ ಚಾಪೆ, ನನ್ನ ಹೊದಿಕೆ, ನನ್ನ ಪುಸ್ತಕ ಎಲ್ಲಾ ಇವೆ. ಆದರೂ, ಯಾವುದೋ ಒಂದು ವಸ್ತು ನನಗೆ ಗೊತ್ತಾಗದಂತೆಯೇ ಕಳೆದುಹೋದ ಹಾಗೆ ಭಾಸವಾಗುತ್ತಿದೆ. ಈ ಎಲ್ಲಾ ಸಾಮಗ್ರಿಗಳ ಸ್ವಾಭಾವಿಕ ಶೋಭೆಯೇ ನಷ್ಟವಾದಂತೆ ಕಾಣುತ್ತಿದೆ. ಇದೇ ಮೊದಲು ಬಾರಿ ನಾನು ಇವನ್ನು ನೋಡುತ್ತಿರುವೆನೇನೋ ಅನ್ನಿಸುತ್ತಿದೆ. ಮೃತವ್ಯಕ್ತಿಗಳ ಅವಶೇಷಗಳ ಹಾಗೆ ಇವು ಕಾಣಿಸುತ್ತಿವೆ. ಇಷ್ಟು ವರ್ಷಗಳ ಕಾಲ ಇವು ನನ್ನವಾಗಿದ್ದರೂ ಇಂದು ಇವುಗಳನ್ನು ಸರಿಯಾಗಿ ಗುರುತಿಸಲಾರದವನಾಗಿದ್ದೇನೆ........"

ಆತ ಮತ್ತೆ ಯೋಚಿಸಿದ:

"ಆದದ್ದಾದರೂ ಏನು? ಈ ವಸ್ತುಗಳಲ್ಲಿ ಬದಲಾವಣೆಯೇನೂ ಆಗಿಲ್ಲ. ವಾಸ್ತವವಾಗಿ ನಾನೇ ಬದಲಾಯಿಸಿದ ಹಾಗಿದೆ. ಮೊದಲಿದ್ದ ಹಾಗೆ ನಾನೀಗ ಉಳಿದಿಲ್ಲ. ನಾನು ನಾನಾಗಿರದೆ ಇನ್ನಾವುದೋ ವ್ಯಕ್ತಿಯಾದ ಹಾಗಿದೆ. ನನ್ನ ಮೊದಲಿನ ವ್ಯಕ್ತಿತ್ವ ಸತ್ತುಹೋಗಿದೆ. ಹಾಯ್ ದೇವರೆ, ಅದರ ಗತಿಯೇನಾಯಿತು? ಅದು ತನ್ನ ಜೊತೆಗೆ ಏನೇನನ್ನು ಕೊಂಡೊಯ್ದಿತು? ಅದು ಹೋದದ್ದರಿಂದ ನನಗೆ ಎಂಥ ರೂಪ ಬಂತು? ಹಾಗಾದರೆ ನಾನೀಗ ಯಾರು?"

ತನ್ನ ಗುಡಿಸಲು ಬಹಳ ಚಿಕ್ಕದೆಂದು ಅವನಿಗನ್ನಿಸಿತು, ತುಂಬಾ ಅಸಮಾಧಾನವೂ ಆಯಿತು. ಈ ಮೊದಲೆಂದೂ ಅವನಿಗೆ ಈ ವಿಚಾರ ಹೊಳೆದಿರಲಿಲ್ಲ. ಧಾರ್ಮಿಕ ದೃಷ್ಟಿಯಿಂದ ನೋಡುವವರಿಗೆ ಎಂಥ ಚಿಕ್ಕ ಸ್ಥಳವೂ ಅತ್ಯಂತ ವಿಶಾಲವಾಗಿ ಕಾಣಿಸುವುದು. ಈಶ್ವರನ ಅನಂತತೆಯ ಚಿಂತನೆ ಆರಂಭವಾಗುವುದೂ ಅಲ್ಲಿಂದಲೇ.

ಆತ ನೆಲದ ಮೇಲೆ ಕುಳಿತು ಪ್ರಾರ್ಥನೆಗಾರಂಭಿಸುತ್ತಲೂ ಮತ್ತೆ ಅವನ ಹೃದಯದಲ್ಲಿ ಆನಂದ ತುಂಬಿ ಬಂತು. ಆದರೆ ಒಂದು ತಾಸು ಕಳೆಯುವುದರೊಳಗಾಗಿ ಮುಕ್ತಾದೇವಿಯ ಮೂರ್ತಿ ಅವನೆದುರು ಕಾಣಿಸಿಕೊಂಡಿತು.

ಪರಮಾತ್ಮನಿಗೆ ಕೃತಜ್ಞತೆಯ ವಂದನೆಗಳನ್ನರ್ಪಿಸುತ್ತ ಆತನೆಂದ: "ಪ್ರಭು, ಇವಳನ್ನು ನೀನೇ ನನ್ನ ಬಳಿಗೆ ಕಳಿಸಿದ್ದೀಯೆ. ನಿನ್ನ ಕೃಪೆಯನ್ನು ನಾನರಿತುಕೊಂಡೆ. ನಾನು ನಿನಗರ್ಪಿಸಿದ ಈ ವ್ಯಕ್ತಿಯಿಂದ ನನಗೆ ಆನಂದ,

ಸಂತೋಷ, ಶಾಂತಿ ಲಭಿಸಬೇಕೆಂದೇ ನೀನು ಆಶಿಸುತ್ತಿರಬೇಕು. ಅವಳ ನಿರ್ದುಷ್ಟ ನಗೆಯನ್ನು, ನಿಷ್ಕಪಟ ಶೋಭೆಯನ್ನು, ವಿಷರಹಿತ ಸೌಂದರ್ಯ ವನ್ನು ನೀನು ನನ್ನ ಕಣ್ಣೆದುರು ಹಿಡಿಯುತ್ತಿದ್ದೀಯೆ. ಅವಳೀಗ ಪವಿತ್ರಳಾಗಿ ದ್ದಾಳೆ, ಪೂಜನೀಯಳಾಗಿದ್ದಾಳೆ. ನಿನ್ನ ಒಂದು ಸ್ಪರ್ಶಮಾತ್ರದಿಂದಲೇ ಅವಳ ಜನ್ಮಜನ್ಮಾಂತರದ ಪಾಪಗಳೆಲ್ಲಾ ತೊಳೆದುಹೋಗಿವೆ. ಎಂತಲೇ, ಈ ಪವಿತ್ರ ಮೂರ್ತಿಯನ್ನು ನಾನು ಆನಂದಿತನಾಗಿ ನೋಡುತ್ತಿದ್ದೇನೆ. ನಿನ್ನ ಪ್ರೇರಣೆ ಯಿಂದಲೇ ನನಗವಳ ದರ್ಶನವಾಗುತ್ತಿದೆಯೆನ್ನುವಲ್ಲಿ ಸಂಶಯವೇನೂ ಇಲ್ಲ. ಇವಳನ್ನು ನಾನೇ ನಿನಗರ್ಪಿಸಿದ ವಿಚಾರವನ್ನು ಎಂದೆಂದೂ ಮರೆಯಬಾರ ದೆಂದೇ ನಿನ್ನ ಇಚ್ಛೆ. ಆದರೆ ಭಗವಂತಾ, ಅವಳು ನನ್ನೆದುರು ಇರುವುದಕ್ಕಿಂತ ನಿನ್ನೆದುರು ಇರುವುದೇ ಒಳ್ಳೆಯದು. ನಿನ್ನ ಹೊರತು ಇನ್ನಾರೂ ಅವಳ ಸೌಂದರ್ಯದಿಂದ ಚಕಿತರಾಗಬಾರದು."

ರಾತ್ರೆಯಲ್ಲೆಲ್ಲ ಅವನಿಗೆ ನಿದ್ದೆ ಬರಲಿಲ್ಲ. ಕಲ್ಯಾಣನಗರದ ಕುಂಜವನ ದಲ್ಲಿ ಕಾಣಿಸಿದುದಕ್ಕೂ ಹೆಚ್ಚು ಸ್ಪಷ್ಟವಾದ ರೂಪದಲ್ಲಿ ಮುಕ್ತಾ ಕಾಣಿಸಿ ಕೊಳ್ಳುತ್ತಿದ್ದಳು. ಸಿದ್ಧನಾಥ ತನಗೆ ತಾನೇ ತಿಳಿದುಕೊಂಡ:

"ಇದೆಲ್ಲಾ ಆತನ ಪ್ರೇರಣೆಯೆಂಬುದೇ ನಿಜ. ನಾನು ಮಾಡಿದುದೆಲ್ಲಾ ಅವನಿಗಾಗೇ ಅಲ್ಲವೆ? ಅವನ ಯಶೋಭಿವೃದ್ಧಿಗಾಗೇ ಅಲ್ಲವೇ ?"

ಆದರೆ, ಅವನ ಹೃದಯದಲ್ಲಿ ಶಾಂತಿಯಿರಲಿಲ್ಲವೆಂಬುದೇ ಸೋಜಿಗದ ವಿಷಯುವಾಗಿತ್ತು.

"ಅಂತರಾತ್ಮಾ, ನೀನೇಕೆ ಇಷ್ಟು ಉದಾಸೀನವಾಗಿದ್ದೀ? ಇಷ್ಟೇಕೆ ಅಶಾಂತನಾಗಿದ್ದೀ ?" ಎಂದು ಆತ ಹಲುಬಿದ.

ಆದರೂ ಅವನ ಆತ್ಮ ಅಶಾಂತವಾಗಿಯೇ ಉಳಿಯಿತು. ಸಂನ್ಯಾಸಿಗಳ ತೀವ್ರ ಪರೀಕ್ಷೆಯ ಪೂರ್ವಲಕ್ಷಣವಾದ ಇದೇ ಉದಾಸೀನತೆ ಆತನನ್ನು ಒಂದು ತಿಂಗಳ ವರೆಗೂ ಮುತ್ತಿಕೊಂಡಿತ್ತು. ಆ ಅವಧಿಯಲ್ಲೆಲ್ಲಾ ಮುಕ್ತಾದೇವಿಯ ಮೂರ್ತಿ ಅವನನ್ನು ಬಿಟ್ಟು ಕದಲಲಿಲ್ಲ. ಆ ಮೂರ್ತಿಯನ್ನು ಬಲವಂತದಿಂದ ದೂರಗೊಳಿಸುವ ಯತ್ನವನ್ನು ಅವನೂ ಮಾಡಲಿಲ್ಲ. ಈಶ್ವರೀ ಸಂಕೇತ ದಿಂದಲೇ ಆ ಮೂರ್ತಿ ಬಂದಿರಬೇಕೆಂದು ಆತ ಆಗಲೂ ಭಾವಿಸಿದ್ದ.

ಒಂದು ಬೆಳಿಗ್ಗೆ ಮುಕ್ತಾ ಅವನ ಕನಸಿನಲ್ಲೂ ಕಾಣಿಸಿಕೊಂಡಳು. ಅವಳ ಕೇಶರಾಶಿಯ ಮೇಲೆ ಕಿರೀಟವಿತ್ತು. ದಿವ್ಯವಾದ ಸೌಂದರ್ಯ, ಸುತ್ತಲೂ ಪ್ರಭಾವಲಯ ರಚಿಸಿತ್ತು. ಆತ ಭೀತಿಯಿಂದ ಕಿರಿಚಿಕೊಂಡು ಎಚ್ಚತ್ತು ಕೊಂಡ. ಬೆವರಿನಿಂದ ಮೈಯೆಲ್ಲಾ ತೊಯ್ದು ಹೋಗಿತ್ತು. ನಿದ್ರೆಯಿಂದ ಜಡ ವಾಗಿದ್ದ ಕಣ್ಣುಗಳನ್ನು ಅತ್ತಿತ್ತ ಹೊರಳಿಸುತ್ತಿದ್ದ ಹಾಗೇ ಅವನ ಮುಖದ ಬಳಿಯಲ್ಲಿ ಎರಡು ಮರುಳುಗಳು ಕುಳಿತು ಬಿಸಿಯುಸಿರು ಬಿಡುತ್ತಿದ್ದಂತೆ ಭಾಸ ವಾಯಿತು.

ಸಿದ್ಧನಾಥ ಚಕಿತನಾಗಿ ಎದ್ದು ಕುಳಿತ. ಭೂಮಿ ಇಬ್ಭಾಗವಾಗುವಂತೆ ಭಾಸವಾಯಿತು. ಅವನ ಆತ್ಮಶಕ್ತಿಯೆಲ್ಲವೂ ಎಲ್ಲಿಯೋ ಅದೃಶ್ಯವಾದಂತಾ ಯಿತು. ಕೊಂಚ ಕಾಲ ಮೂಢನಂತೆ ಕುಳಿತಿದ್ದ ತರುವಾಯ ಆತ ಮತ್ತೆ ಚೇತರಿಸಿಕೊಂಡ. ಆ ಸ್ವಪ್ನ....ಮುಕ್ತಾ....ಆ ಮರುಳುಗಳು....

ಆತ ಯೋಚಿಸಿದ:

"ಇದೆಲ್ಲಾ ನಡೆಯಲು ಎರಡು ಕಾರಣಗಳಿರಬಹುದು. ಮೊದಲನೆಯ ದೆಂದರೆ, ಹಿಂದಿನ ಅನೇಕ ಸ್ವಪ್ನಗಳ ಹಾಗೆ ಇದೂ ಕೂಡಾ ಈಶ್ವರೀ ಸಂಕೇತ ದಂತೆಯೇ ಬಿದ್ದಿರಬೇಕು. ಕೊಳೆಯಾದ ಬಟ್ಟಲು ಮದಿರೆಯನ್ನು ಕೆಡಿಸು ವಂತೆ, ನನ್ನ ಭ್ರಷ್ಟ ಮನಸ್ಸು ಈ ಸ್ವಪ್ನದ ಪಾವಿತ್ರ್ಯವನ್ನು ನಷ್ಟಗೊಳಿಸಿತು. ನಾನು ಮೂರ್ಖನಾಗಿ, ನೈತಿಕ ಉಪದೇಶಕ್ಕೆ ಕಲಂಕ ಸವರಿದೆ. ಮಾಯೆಯಿಂದ ಕಳಿಸಲ್ಪಟ್ಟ ಮರುಳುಗಳು ನನ್ನ ಸ್ಥಿತಿಯ ದುರುಪಯೋಗ ಮಾಡಿಕೊಂಡುವು. ಎರಡನೆಯದೆಂದರೆ—ಇದು ಪರಮಾತ್ಮನ ಪ್ರೇರಣೆಯಿಂದ ಬಿದ್ದ ಸ್ವಪ್ನವಾಗಿರ ಲಾರದು. ಮಾಯೆಯೇ ಇದನ್ನು ಪ್ರೇರಿಸಿರಬೇಕು. ಇದೊಂದು ದುಃಸ್ವಪ್ನವೇ ಆಗಿರಬೇಕು. ಇದೇ ನಿಜವಿದ್ದಲ್ಲಿ, ಹಿಂದೆ ನಾನು ಕಂಡ ಕನಸುಗಳೂ ಕೂಡಾ ನಾನು ತಿಳಿದಂತೆ ಈಶ್ವರೀಯವಾಗಿರಲಿಲ್ಲವೆಂದೇ ಹೇಳಬೇಕಾಗುತ್ತದೆ. ತಪಸ್ವಿ ಗಳಲ್ಲಿ ಆವಶ್ಯಕವಾಗಿ ಇರಬೇಕಾದ ವಿವೇಕಬುದ್ಧಿ ನನ್ನಲ್ಲಿಲ್ಲವೆಂದೇ ಇದರಿಂದ ವ್ಯಕ್ತವಾಗುತ್ತದೆ. ಈ ಎರಡು ಕಾರಣಗಳಲ್ಲಿ ಯಾವುದು ನಿಜವಿದ್ದರೂ ಸರಿಯೆ. ಅಂತೂ ಪರಮಾತ್ಮ ನನ್ನಿಂದ ವಿಮುಖನಾಗಿರುವುದು ಮಾತು ಸ್ಪಷ್ಟವಾಗಿದೆ."

ಈ ಬಗೆಯ ತರ್ಕವಿತರ್ಕಗಳಲ್ಲಿ ಮಗ್ನನಾಗಿ ಆತ ಭಗವಂತನನ್ನು ಪ್ರಾರ್ಥಿಸಿದ:

"ಹೇ ದಯಾಳು ಪರಮಾತ್ಮ, ನಿನ್ನೀ ಸೇವಕನನ್ನು ಏಕೆ ಪರೀಕ್ಷಿಸುತ್ತಿರುವೆ ? ಯಾವುದಾದರೊಂದು ಸ್ಪಷ್ಟ ಸಂಕೇತದಿಂದ ನಿನ್ನ ಅಪ್ಪಣೆಯನ್ನೇಕೆ ತಿಳಿಸುತ್ತಿಲ್ಲ?"

ಭಗವಂತನ ಲೀಲೆ ಅಗಾಧವಾದುದೆಂದು ಎಲ್ಲರೂ ಹೇಳುವುದಿಲ್ಲವೆ? ತನ್ನ ಈ ಸೇವಕನಿಗೆ ಸ್ಪಷ್ಟವಾಗಿ ಯಾವುದನ್ನೂ ತಿಳಿಸಲು ಭಗವಂತನಿಗಿಷ್ಟ ವಿರಲಿಲ್ಲವೆಂದೇ ತೋರುತ್ತದೆ. ಭ್ರಾಂತಿಗೆ ಸಿಲುಕಿಕೊಂಡ ಸಿದ್ಧನಾಥ ತಾನಿನ್ನು ಮುಂದೆ ಮುಕ್ತಾಳ ಬಗೆಗೆ ಯೋಚಿಸುವುದನ್ನೇ ನಿಲ್ಲಿಸುವುದಾಗಿ ನಿಶ್ಚಯಸಿದ. ಆದರೆ ಆ ನಿಶ್ಚಯ ಕೃತಿಗಿಳಿಯಲಿಲ್ಲ. ಅವನ ವಿಚಾರಗಳಲ್ಲಿ ಮುಕ್ತಾ ಯಾವಾಗಲೂ ಉಪಸ್ಥಿತಳಾಗಿರುತ್ತಿದ್ದಳು. ಅವನು ಓದುತ್ತ ಕುಳಿತಿದ್ದಾಗ, ಧ್ಯಾನಸ್ಥನಾಗಿದ್ದಾಗ, ಪ್ರಾರ್ಥನೆ ಮಾಡುತ್ತಿದ್ದಾಗ, ಊಟ ಮಾಡುತ್ತಿದ್ದಾಗ, ಪ್ರತಿಯೊಂದು ಸಮಯದಲ್ಲಿ ಅವಳು ಅವನನ್ನು ದಿಟ್ಟಿಸುತ್ತ ನಿಂತುಬಿಡುತ್ತಿದ್ದಳು. ಅವಳ ಆಗಮನಕ್ಕೆ ಮುನ್ನ, ಸ್ತ್ರೀಯರ ಬಟ್ಟೆಗಳಿಂದಾಗುವ ಮೃದು ಧ್ವನಿಯಾಗುವುದು. ವಾಸ್ತವ ದೃಶ್ಯಗಳಲ್ಲೂ ಕಾಣಿಸದಂಥ ಸ್ಥಿರತೆಯೂ ಸ್ಪಷ್ಟತೆಯೂ ಆ ಸ್ವಪ್ನದಲ್ಲಿ ಕಾಣಿಸುವುದು. ಏಕಾಂತದಲ್ಲಿ ಕಾಣಿಸುವ ಛಾಯಾದೃಶ್ಯಗಳು ಸ್ಥಿರಸ್ವಭಾವದವುಗಳಾಗಿರುತ್ತವೆ. ಬೇರೆ ಬೇರೆ ರೂಪಗಳಲ್ಲಿ ಮುಕ್ತಾ ಆ ಕುಟೀರದಲ್ಲಿ ಕಾಣಿಸುತ್ತಿದ್ದಳು. ರೇಶಿಮೆ ಸೀರೆಯುಟ್ಟು ತಲೆಯ ಮೇಲೆ ಪುಟ್ಟ ಕಿರೀಟವಿಟ್ಟುಕೊಂಡು ಒಮ್ಮೆ ಕಾಣಿಸಿಕೊಂಡರೆ ಇನ್ನೊಮ್ಮೆ ಚಿಂತಾತುರ ಮುದ್ರೆಯಿಂದ, ಪಾರದರ್ಶಕ ವಸ್ತ್ರ ಧರಿಸಿಕೊಂಡು ಕಾಣಿಸಿಕೊಳ್ಳುತ್ತಿದ್ದಳು. ಕುಂಜವನದಲ್ಲಿ ವಿಷಯಾಸಕ್ತ ಮುದ್ರೆಯಲ್ಲಿ ಕುಳಿತ ಹಾಗೊಮ್ಮೆ, ಒರಟು ಬಟ್ಟೆ ಧರಿಸಿ ಪವಿತ್ರ ಮುದ್ರೆಯಲ್ಲಿ ಧ್ಯಾನಿಸುತ್ತಿದ್ದ ಹಾಗೊಮ್ಮೆ, ಮೃತ್ಯುವಿನ ಭೀತಿಯಿಂದ ಕುಗ್ಗಿದ ಮುಖಮುದ್ರೆಯಲ್ಲೊಮ್ಮೆ ಅವಳ ದರ್ಶನವಾಗುತ್ತಿತ್ತು. ಅಂದು, ಕಲ್ಯಾಣದಿಂದ ಹೊರಡುವ ಮುನ್ನ ಚಿತೆಯಲ್ಲಿ ಹಾಕಿ ಸುಟ್ಟ ಅವಳ ವಸ್ತ್ರಗಳೂ ಆಗಾಗ ಕಣ್ಣೆದುರು ಬರುತ್ತಿದ್ದುವು. ಆ ವಸ್ತುಗಳು ಅಮರವಾದವುಗಳೆಂದೇ ಅವನಿಗನ್ನಿಸಿ ತುಂಬಾ ಕಳವಳವುಂಟಾಗುವುದು. "ಮುಕ್ತಾದೇವಿಯ ಪಾಪದ ಅಗಣಿತ ಮೂರ್ತಿಗಳು ನನ್ನ ಮೇಲೆ ದಾಳಿ ಮಾಡುತ್ತಿವೆ!"

ಎಂದು ಆತ ಕೂಗಿಕೊಳ್ಳುವನು.

ಒಂದು ಬಾರಿ ಆತ ಧ್ಯಾನಸ್ಥನಾಗಿದ್ದಾಗ ತನ್ನ ಹಿಂದೆಯೆ ಮುಕ್ತಾ ಬಂದಂತಾಗಲು ಬೆಚ್ಚಿ ಹೊರಳಿದ. ವಿಷಣ್ಣ ನಗು ಬೀರುತ್ತ ಅವಳು ಆವ ನನ್ನೆ ದಿಟ್ಟಿಸುತ್ತಿದ್ದಂತೆ ಕಾಣಿಸಿತು. ಅವನ ಮನಸ್ಸು ಉದ್ವಿಗ್ನವಾಯಿತು, ಹೃದಯ ಸಂಕಟಪಡತೊಡಗಿತು. ತನ್ನ ತನುಮನಗಳನ್ನು ಪವಿತ್ರವಾಗಿಯೆ ಇರಿಸಿಕೊಳ್ಳುವ ಉದ್ದೇಶದಿಂದ ಆತ ಭಗವಂತನನ್ನು ಬೇಡಿಕೊಂಡ.

"ಪರಮಾತ್ಮಾ, ಈ ನಾಸ್ತಿಕರ ಮಧ್ಯೆ ಅವಳನ್ನು ಹುಡುಕಿಕೊಂಡು ಬರಲು ನಾನು ಹೋದದ್ದು ನನಗಾಗಿಯಲ್ಲ, ನಿನಗಾಗಿಯೇ. ನಿನಗಾಗಿ ನಾನು ಮಾಡಿದ ಕೆಲಸಕ್ಕಾಗಿ ನಾನೇ ಕಷ್ಟಪಡುವುದು ಎಂಥ ನ್ಯಾಯ? ಓ ನನ್ನ ರಕ್ಷಕನೇ, ನನ್ನನ್ನುಳಿಸು. ನನ್ನ ಶರೀರ ಮಾಡದಿರುವ ಕಾರ್ಯಗಳು ದುಃಸ್ವಪ್ನದಲ್ಲಿ ನಡೆಯುವಂತಾಗದಿರಲಿ. ಶರೀರವನ್ನೇನೊ ನಾನು ಗೆದ್ದಿದ್ದೇನೆ. ಈಗ ಅದರ ಛಾಯೆ ನನ್ನನ್ನು ಸೋಲಿಸದಿರಲಿ. ಮೊದಲಿಗಿಂತಲೂ ಹೆಚ್ಚು ಸಂಕಟಗಳು ಈಗ ನನ್ನ ಮೇಲೆ ಕವಿದಿವೆಯೆಂಬುದನ್ನು ನಾನು ಬಲ್ಲೆ. ವಾಸ್ತ ವತೆಗಿಂದ ಸ್ವಪ್ನದಲ್ಲೇ ಹೆಚ್ಚು ಸಾಮರ್ಥ್ಯವುಂಟೆಂಬುದೂ ನನಗೆ ಅನುಭವ ದಿಂದ ಗೊತ್ತಾಗಿದೆ. ಸ್ವಪ್ನವೇ ಅತ್ಯುಚ್ಚ ಸತ್ಯದಂತಿದೆ. ಅದೇ ಸತ್ಯದ ಆತ್ಮ. ಪರಮಾತ್ಮಾ, ಅಂದು ಆ ದುಷ್ಟರು ಭೋಜನ ಕೂಟದ ಕಾಲಕ್ಕೆ, ಏಕಾಂತ ಚಿಂತನ ಮತ್ತು ತಪಸ್ಸುಗಳಿಂದ ಕಾಣಿಸಿಕೊಳ್ಳುವ ವಸ್ತುಗಳು ಸತ್ಯ ವಾದವುಗಳೆಂದು ಒಪ್ಪಿಕೊಂಡರು. ಅವರು ಪಾಪಿಗಳಾಗಿದ್ದರೂ ಬುದ್ಧಿಹೀನ ರಾಗಿರಲಿಲ್ಲ. ನಿನ್ನ ನೀತಿಗ್ರಂಥಗಳಲ್ಲೂ ಸ್ವಪ್ನಗಳ ಸದಾಶಯ ಮತ್ತು ಗುಣ ಗಳ ಪ್ರಮಾಣಗಳೆಷ್ಟೋ ಇವೆ. ಆ ಸ್ವಪ್ನಶಕ್ತಿ ನಿನ್ನದಾಗಿದ್ದರೂ ಸರಿಯೆ, ನಿನ್ನ ವಿರೋಧಿ ಶಕ್ತಿಗಳದಾಗಿದ್ದರೂ ಅರಿಯೆ. ಅಂತೂ ಸ್ವಪ್ನಗಳಿಗೂ ಅರ್ಥ ವುಂಟು."

ಭಗವಂತನೊಡನೆ ಹೀಗೆ ತರ್ಕಿಸುತ್ತಿದ್ದಾಗ ಆತನಲ್ಲಿ ಹೊಸ ವ್ಯಕ್ತಿತ್ವ ವೊಂದು ಸಂಚರಿಸಿದಂತೆ ಭಾಸವಾಗುತ್ತಿತ್ತು. ಆದರೆ ಭಗವಂತ ಅವನಿಗೆ ಬೆಳಕು ಬೀರಲಿಲ್ಲ. ಅವನ ರಾತ್ರಿಗಳು ದೀರ್ಘ ಸ್ವಪ್ನಗಳಾದುವು. ಹಗಲು ಗಳೂ ರಾತ್ರಿಯಂತಾದುವು. ಒಂದು ದಿನ ಎಚ್ಚರವಾದಾಗ, ಬೆಳುದಿಂಗಳ ರಾತ್ರಿಯಲ್ಲಿ ಸ್ಮಶಾನದಲ್ಲಿನ ಭೂತಗಳು ಕಿರಿಚಿಕೊಳ್ಳುವಂತೆ ಆತನೂ ಕಿರಿಚಿ

ಕೊಳ್ಳುತ್ತಿದ್ದ. ರಕ್ತರಂಜಿತ ಪಾದಗಳಿಂದ ಮುಕ್ತಾ ಅವನ ಬಳಿ ಬಂದು, ಆತ ಅಳುತ್ತಿದ್ದಾಗಲೇ ಅವನ ಹಾಸಿಗೆಯಲ್ಲಿ ಸೇರಿಕೊಂಡಂತಾಯಿತು. ಮುಕ್ತಾದೇವಿಯ ಆ ಮೂರ್ತಿ ಪಾಪಜನ್ಯವಾದುದೆಂಬುದರಲ್ಲಿ ಅವನಿಗೆ ಸಂದೇಹವುಳಿಯಲಿಲ್ಲ.

ತಿರಸ್ಕಾರದಿಂದ ಸಿಡಿದೆದ್ದಿತು ಅವನ ಹೃದಯ. ತನ್ನ ಭ್ರಷ್ಟ ಹಾಸಿಗೆಯಿಂದೆದ್ದು, ಹಗಲಿನ ಬೆಳಕಿನಿಂದ ತಪ್ಪಿಸಿಕೊಳ್ಳಲೆಂದು ಕೈಗಳಿಂದ ಮುಖ ಮುಚ್ಚಿಕೊಂಡ. ಗಂಟೆಗಳು ಕಳೆದುಹೋದರೂ ಅವನ ಲಜ್ಜೆ ದೂರವಾಗ ಲಿಲ್ಲ. ಆದರೂ ಅವನ ಕುಟೀರದಲ್ಲೆಲ್ಲ ಶಾಂತತೆಯಿತ್ತು. ಬಹಳ ದಿನಗಳ ತರುವಾಯ ಇಂದು ಮೊದಲ ಬಾರಿಗೆ ಸಿದ್ಧನಾಥ ಅಲ್ಲಿ ಏಕಾಕಿಯಾಗಿ ಕುಳಿತಿದ್ದ. ದುಃಸ್ವಪ್ನವೇನೋ ಕಳೆದುಹೋಗಿತ್ತು. ಆದರೆ ಅದರ ಅನುಪಸ್ಥಿತಿಯೂ ಹೆಚ್ಚು ಭೀಕರವಾಗಿತ್ತು. ಸ್ವಪ್ನದ ಸ್ಮೃತಿಯಿಂದ ದೂರವಾಗಲು ಯಾವ ಸಾಧನವೂ ಇರಲಿಲ್ಲ.

ಭೀತಿಯುಕ್ತನಾಗಿ ಆತ ಯೋಚಿಸಿದ:

"ಆಗಲೇ ನಾನೇಕೆ ಅವಳಿಂದ ದೂರವಾಗಲಿಲ್ಲ? ಅವಳ ಶೀತಲ ಬಾಹುಗಳಿಂದ, ಸುಡುಸುಡುವ ತೊಡೆಗಳಿಂದ ಆಗಲೇ ಏಕೆ ಪಾರಾಗಲಿಲ್ಲ?"

ಮುಕ್ತಾಳ ಮೂರ್ತಿಯ ಸ್ಪರ್ಶದಿಂದ ಭ್ರಷ್ಟವಾದ ಆ ಹಾಸಿಗೆಯ ಹತ್ತಿರ ಕುಳಿತು ಭಗವಂತನಲ್ಲಿ ಪ್ರಾರ್ಥಿಸುವುದಕ್ಕೂ ಆವನಿಗೆ ಧೈರ್ಯ ಬರಲಿಲ್ಲ. ತನ್ನ ಕುಟೀರ ಅಪವಿತ್ರವಾದುದರಿಂದ, ಯಾವ ನಿಮಿಷದಲ್ಲಾದರೂ ಅಲ್ಲಿಗೆ ಮರುಳುಗಳು ಪ್ರವೇಶಿಸಬಹುದೆಂದು ಅವನಿಗನ್ನಿಸಿತು. ಆತ ಹಾಗೇ ಯೋಚಿಸುತ್ತಿದ್ದಂತೆಯೇ ಏಳು ಮರುಳುಗಳು ಒಳನುಗ್ಗಿ ಅವನ ಹಾಸಿಗೆಯಲ್ಲಿ ಸೇರಿಕೊಂಡಂತಾಯಿತು. ಸಾಯಂಕಾಲದ ಪಾರ್ಥನೆಯ ವೇಳೆಗೆ ಎಂಟನೆಯ ಮರುಳೂ ಬಂತು. ಅದರ ದುರ್ಗಂಧದಿಂದಾಗಿ ಕುಟೀರವೆಲ್ಲ ನರಕಸದೃಶವಾಯಿತು.

ಎರಡನೆಯ ದಿನ ಒಂಬತ್ತನೆಯ ಮರುಳು ಬಂತು. ಮತ್ತೊಂದು ದಿನ ಕಳೆಯುವುದರೊಳಗಾಗಿ ಅವುಗಳ ಸಂಖ್ಯೆ ಇಪ್ಪತ್ತಕ್ಕೇರಿತು. ಕುಟೀರದಲ್ಲಿ ಅಡಿಯಿಡುತ್ತಲೂ ಅವುಗಳ ಆಕಾರ ಕಿರಿಯದಾಗಿ ಒಂದು ಇಲಿಯಷ್ಟಾಗುತ್ತಿತ್ತು. ಅಲ್ಲಿನ ನೆಲದ ಮೇಲೆಲ್ಲಾ ಕೇವಲ ಮರುಳುಗಳೇ ಕಾಣಿಸತೊಡಗಿ

ದುವು. ಸಿದ್ಧನಾಥ ಅಲ್ಲಿ ಉಸಿರಾಡಿಸುವುದೂ ಕಷ್ಟವಾಗತೊಡಗಿತು.

ಸ್ವಪ್ನಗಳಿಂದ ಬಿಡುಗಡೆ ಹೊಂದುವುದಕ್ಕಾಗಿ ಕಠೋರವಾದ ಪ್ರಾಯಶ್ಚಿತ್ತ ಅವಶ್ಯಕವೆಂದು ಅವನಿಗನ್ನಿಸಿತು. ಅಪವಿತ್ರ ವಿಚಾರಗಳಿಂದ ತನ್ನ ಮನಸ್ಸನ್ನು ದೂರವಿರಿಸಬೇಕಿದ್ದರೆ ಮೊದಲು ಈ ಕುಟೀರವನ್ನು ಬಿಟ್ಟುಬಿಡಬೇಕೆಂದು ಆತ ಯೋಚಿಸಿದ. ಘೋರಾರಣ್ಯಕ್ಕೆ ಹೋಗಿ ಅಲ್ಲಿ ಆಶ್ಚರ್ಯಕಾರಕವಾದ ರೀತಿಯಲ್ಲಿ ತಪಸ್ಸು ಮಾಡಬೇಕು. ಕಠೋರ ಪರಿಶ್ರಮ ಮಾಡಬೇಕು, ಹೊಸ ಹೊಸ ಪ್ರಾಯಶ್ಚಿತ್ತಗಳನ್ನು ಸಾಧಿಸಬೇಕು ಎಂದು ಆತ ಎಣಿಕೆ ಹಾಕಿದ. ಅರಣ್ಯಕ್ಕೆ ಹೊರಡುವ ಮೊದಲು ವೃದ್ಧ ಆದಿನಾಥನ ಸಲಹೆ ಪಡೆಯಲೆಂದು ಆತ ಅವನ ಹತ್ತಿರ ಬಂದ.

ಆದಿನಾಥ ಎಂದಿನಂತೆಯೆ ತನ್ನ ಗಿಡಗಳಿಗೆ ನೀರುಣ್ಣಿಸುತ್ತಲಿದ್ದ. ಸಂಧ್ಯಾಸಮಯವಾಗಿತ್ತು. ಆದಿನಾಥನ ಹೆಗಲ ಮೇಲೆ ಪಾರಿವಾಳವೊಂದು ಕುಳಿತುಕೊಂಡಿತ್ತು.

ಸಿದ್ಧನಾಥನನ್ನು ನೋಡುತ್ತಲೂ ಆದಿನಾಥನೆಂದ:

"ಬಂಧು ಸಿದ್ಧನಾಥ, ದೇವರು ನಿನ್ನ ಮೇಲೆ ಕೃಪೆ ಮಾಡಲಿ. ತಾನು ಸೃಷ್ಟಿಸಿದ ಪಶುಪಕ್ಷಿಗಳನ್ನಾತ ನನ್ನ ಹತ್ತಿರ ಕಳಿಸುತ್ತಾನೆ. ನಾನು ಅವುಗಳೊಡನೆ ಆತನ ವಿಚಾರವಾಗಿಯೆ ಮಾತಾಡುತ್ತೇನೆ. ವಾಯುವಿನಲ್ಲಿ ಹಾರಾಡುವ ಪಕ್ಷಿಗಳೆದುರಿಗೆ ಆತನ ಕೀರ್ತಿ ಗಾನ ಮಾಡುತ್ತೇನೆ. ಈ ಪಾರಿವಾಳವನ್ನು ನೋಡು. ಇದರ ಕೊರಳಿನ ಬಣ್ಣಗಳನ್ನು ನೋಡು. ಪರಮಾತ್ಮ ನಿರ್ಮಿಸಿದ ಸುಂದರ ಕಲಾಕೃತಿಗಳಲ್ಲಿ ಇದೂ ಒಂದು. ಅಲ್ಲವೇ? ಅದಿರಲಿ. ಯಾವುದೊಂದು ಪವಿತ್ರ ವಿಚಾರದ ಬಗ್ಗೆ ನನ್ನೊಡನೆ ಚರ್ಚಿಸಲು ಬಂದಂತಿದೆಯಲ್ಲ ನೀನು ? ಹಾಗಿದ್ದರೆ ಕೆಲಹೊತ್ತು ನನ್ನ ಕೆಲಸ ನಿಲ್ಲಿಸುತ್ತೇನೆ."

ತನ್ನ ಕಲ್ಯಾಣ ಯಾತ್ರೆ, ಪುನರಾಗಮನ, ಅನಂತರದ ಸ್ವಪ್ನಗಳ ವಿಚಾರ, ಮೂರ್ತಿಗಳ ಮತ್ತು ಮರುಳುಗಳ ದರ್ಶನದ ಬಗೆಗೆ ವಿವರವಾಗಿ ತಿಳಿಸಿ ಹೇಳಿ ಸಿದ್ಧನಾಥ ಕೇಳಿದ:

"ಈ ಅನಿಷ್ಟಗಳಿಂದ ದೂರವಾಗಲೆಂದು ನಾನು ಅರಣ್ಯಕ್ಕೆ ಹೋಗಿ ತಪಸ್ಸು ಮಾಡಬೇಕೆಂದಿದ್ದೇನೆ. ಇದರ ಬಗ್ಗೆ ನಿನ್ನ ಅಭಿಪ್ರಾಯವೇನು ?"

ಆದಿನಾಥ ಉತ್ತರವಿತ್ತ:

"ಬಂಧು ಸಿದ್ಧನಾಥ, ನಾನೊಬ್ಬ ಕ್ಷುದ್ರ, ಪಾಪಿ ವ್ಯಕ್ತಿ. ಹರಿಣಿ, ಪಾರಿವಾಳ, ಗುಬ್ಬಿ, ಕಾಗೆಗಳ ಸಹವಾಸದಲ್ಲಿ ನನ್ನ ಜೀವನವನ್ನೆಲ್ಲ ಈ ತೋಟದಲ್ಲಿಯೆ ಕಳೆದಿದ್ದಾಗಿದೆ. ಮಾನವ ಪ್ರಾಣಿಗಳ ಬಗ್ಗೆ ನನಗೆ ತಿಳಿದಿರುವುದು ಬಹಳ ಅಲ್ಪ. ನನ್ನ ಅಲ್ಪಬುದ್ಧಿಗೆ ಹೊಳೆದಷ್ಟು ಹೇಳಲೇ ? ಲೋಕದ ಕೋಲಾಹಲದ ಮಧ್ಯದಿಂದ ಒಮ್ಮೆಲೇ ಈ ನಿರ್ಜನವನದ ಶಾಂತತೆಗೆ ಬಂದದ್ದೇ ನಿನ್ನ ದುಃಖಕ್ಕೆ ಕಾರಣವಾಗಿರಬಹುದು. ಇಂಥ ಆಕಸ್ಮಿಕ ಪರಿವರ್ತನಗಳು ಆತ್ಮವನ್ನು ಅಸ್ವಸ್ಥಗೊಳಿಸುವುದುಂಟು. ಒಂದೇ ದಿನದಲ್ಲಿಯೆ ಉಷ್ಣತೆ ಮತ್ತು ಚಳಿಗಳ ಬಾಧೆಗೊಳಗಾಗುವ ಮನುಷ್ಯನಂತಾಗಿದೆ ನಿನ್ನ ಸ್ಥಿತಿ. ಒಂದು ಬಗೆಯ ನೆಗಡಿ ಜ್ವರದಿಂದ ನೀನು ಪೀಡಿತನಾಗಿರಬೇಕು. ಬಂಧು ಸಿದ್ಧನಾಥ, ನಿನ್ನ ಬದಲು ನನಗೇ ಹೀಗಾಗಿದ್ದಲ್ಲಿ ಭಯಂಕರ ಅರಣ್ಯದಲ್ಲಿ ಹೋಗುವ ವಿಚಾರಕ್ಕೆ ಬೀಳದೆ. ತಪಸ್ವಿಗಳಿಗುಪಯುಕ್ತವಾದುದೊಂದು ಕೆಲಸಕ್ಕೆ ಮಗ್ನನಾಗುತ್ತಿದ್ದೆ; ಅಕ್ಕಪಕ್ಕದಲ್ಲಿರುವ ಇತರ ಆಶ್ರಮಗಳಿಗೆ ಹೋಗುತ್ತಿದ್ದೆ; ಅವುಗಳಲ್ಲಿ ನಡೆಯುವ ಸೇವಾಕಾರ್ಯವನ್ನು ನಿರೀಕ್ಷಿಸುತ್ತಿದ್ದೆ. ಅವುಗಳಲ್ಲೆಷ್ಟೋ ಆಶ್ರಮಗಳು ಬಹಳ ಉತ್ತಮವಾಗಿ ಕೆಲಸ ಮಾಡುತ್ತಿವೆ. ಪೂಜ್ಯಪಾದ ಗುರುಮಹಾರಾಜರು ರಚಿಸಿದ ಧಾರ್ಮಿಕ ಗ್ರಂಥಗಳ ಪ್ರತಿ ತೆಗೆಯುವ ಮಹತ್ವದ ಕೆಲಸದಲ್ಲೂ ಮನಸ್ಸು ತೊಡಗಿಸಬಹುದಲ್ಲ ? ನಿನ್ನ ಅಕ್ಷರಗಳೂ ದುಂಡಗೆ ಸುಂದರವಾಗಿರುತ್ತವೆ. ನಿನ್ನಷ್ಟು ಚೆನ್ನಾಗಿ ಬೇರೆ ಯಾರೂ ಈ ಕೆಲಸ ಮಾಡಲಾರರು. ತಾಳೆಗರಿಗಳ ಮೇಲೆ ಲೆಕ್ಕಣಿಕೆಯೋಡಿಸುವುದಕ್ಕೂ ಬಹಳ ಕೌಶಲ್ಯ ಬೇಕು. ದೇವರು ನಿನಗೆ ಆ ಜಾಣ್ಮೆಯನ್ನು ನೀಡಿದ್ದಾನೆ. ಕೆಟ್ಟ ವಿಚಾರಗಳಿಂದ ತಪ್ಪಿಸಿಕೊಳ್ಳಲು ಓದುವುದೂ ಬರೆಯುವುದೂ ಉತ್ತಮ ಉಪಾಯ. ಈ ಪವಿತ್ರ ಕಾರ್ಯದಲ್ಲಿ ತೊಡಗಿದರೆ ನಿನಗೆ ನಿದಾನವಾಗಿ ಮನಸ್ಸಿನ ಮತ್ತು ಮೆದುಳಿನ ಶಾಂತಿ ಸಿಕ್ಕೀತು. ಮತ್ತೆ ಏಕಾಂತ ಸುಖಕರವಾದೀತು. ಪೂಜ್ಯಪಾದ ಗುರುಮಹಾರಾಜರು ನಮ್ಮೊಡನೆ ನೆಲಸಿದ್ದಾಗ ಹೇಳುತ್ತಿದ್ದುದು ನನಗಿನ್ನೂ ನೆನಪಿದೆ. "ವ್ರತದ ಅತಿಶಯತೆಯಿಂದ ದೌರ್ಬಲ್ಯ ಪ್ರಾಪ್ತವಾಗುತ್ತದೆ, ದೌರ್ಬಲ್ಯ ಜಡತೆಯನ್ನುಂಟು ಮಾಡುತ್ತದೆ. ವಿವೇಕರಹಿತ ದೀರ್ಘ ತಪಸ್ಸಿನಿಂದ ಸಂನ್ಯಾಸಿಗಳು ಶರೀರವನ್ನು ವ್ಯರ್ಥವಾಗಿ ನಾಶಗೊಳಿಸುತ್ತಾರೆ. ತಮ್ಮ ಎದೆಯಲ್ಲಿ ಚೂರಿ ತಿವಿದುಕೊಂಡು ಅವರು ಮಾಯೆಗೆ ವಶರಾಗುತ್ತಾರೆ." ಎಂದು ಅವರು

ಹೇಳುತ್ತಿದ್ದರು. ನಾನೊಬ್ಬ ಮೂರ್ಖ ಪ್ರಾಣಿ. ಆದರೂ ಪೂಜ್ಯ ಗುರುಗಳ ಈ ಮಾತು ನೆನಪಿನಲ್ಲುಳಿದಿದೆ.”

ಆದಿನಾಥನ ಸಲಹೆಗಾಗಿ ವಂದನೆಗಳನ್ನರ್ಪಿಸಿ, ಆ ಬಗೆಗೆ ವಿಚಾರ ಮಾಡುವುದಾಗಿ ವಚನವಿತ್ತು ಸಿದ್ಧನಾಥ ಅಲ್ಲಿಂದ ಹೊರಟ. ಕುಟೀರಕ್ಕೆ ಮರಳಿದಾಗ ಅವನಿಗೆ ವಿಚಿತ್ರ ದೃಶ್ಯವೊಂದು ಕಾಣಿಸಿತು. ಬಿರುಗಾಳಿಯೊಡನೆ ಹಾರಿ ಬಂದು ಬಿದ್ದ ಉಸುಕಿನ ಕಣಗಳಂತೆ ಕಾಣಿಸುತ್ತಿದ್ದ ಅಸಂಖ್ಯಾತ ಮರುಳುಗಳು ಅಲ್ಲಿ ತುಂಬಿಕೊಂಡಿದ್ದುವು.

ಆ ರಾತ್ರೆಯೂ ಕನಸು ಬಿತ್ತು, ಆ ಕನಸಿನಲ್ಲಿ ಬೃಹದಾಕಾರದ ಪಾಷಾಣ ಸ್ತಂಭವೊಂದು ಕಾಣಿಸಿತು. ಅದರ ಮೇಲೊಂದು ಮನುಷ್ಯಾಕೃತಿಯೂ ಇತ್ತು. “ ಈ ಸ್ತಂಭವನ್ನೇರು ” ಎಂದು ಯಾರೋ ಕೂಗಿ ಹೇಳಿದಂತಾಯಿತು.

ಈ ಕನಸು ದೈವೀ ಪ್ರೇರಣೆಯಿಂದಲೇ ಬಿದ್ದಿರಬೇಕೆಂದು ಎಚ್ಚರವಾದಾಗ ಅವನಿಗನ್ನಿಸಿತು. ತನ್ನ ಜೊತೆಗಾರರನ್ನೆಲ್ಲ ಬರಮಾಡಿಕೊಂಡು ಆತ ಹೇಳಿದ:

“ಕೆಲ ದಿನಗಳ ಮಟ್ಟಿಗೆ ಆಶ್ರಮವನ್ನು ತೊರೆದು ಬೇರೊಂದು ಕಡೆ ಇರಬೇಕೆಂದು ಭಗವಂತ ನನಗೆ ಅಪ್ಪಣೆ ಮಾಡಿದ್ದಾನೆ. ನಾನು ಇಂದೇ ಹೊರಟು ಬಿಡಬೇಕಾಗಿದೆ. ನಿಮ್ಮೆಲ್ಲರಿಗೂ ನನ್ನ ನಮಸ್ಕಾರ. ನಾನು ಹೋಗಿ ಬರುತ್ತೇನೆ.”

ಆತ ಹೊರಟು ನಿಂತಾಗ ಸಂನ್ಯಾಸಿಗಳೆಲ್ಲರೂ ಶಿರಬಾಗಿಸಿ ನಮಸ್ಕರಿಸಿದರು. ಕ್ಷಣಮಾತ್ರದಲ್ಲಿಯೆ ಸಿದ್ಧನಾಥನ ವಿಶಾಲ ಆಕೃತಿ ಬೆಟ್ಟವನ್ನಿಳಿದು ಕಣ್ಮರೆಯಾಯಿತು.

ಆತ ಹಗಲಿರುಳೂ ದಾರಿ ತುಳಿದು, ಸ್ವಪ್ನದಲ್ಲಿ ಕಾಣಿಸಿದ ಸ್ತಂಭವಿದ್ದ ದೇವಸ್ಥಾನಕ್ಕೆ ಬಂದು ಮುಟ್ಟಿದ. ಕಲ್ಯಾಣಕ್ಕೆ ಹೋಗುವ ಸಮಯದಲ್ಲಿ ಒಂದು ರಾತ್ರಿಯನ್ನಾತ ಆ ದೇವಾಲಯದಲ್ಲಿಯೇ ಕಳೆದಿದ್ದುದರ ನೆನಪಿತ್ತು. ಮಂತ್ರಗಾರಿಕೆಯ ಸಂಕೇತದಂತಿದ್ದ ಗೋಡೆಗಳು ಈಗಲೂ ಅಚಲವಾಗಿ ನಿಂತಿದ್ದುವು. ಮಾನವ ಪ್ರಾಣಿಗಳ ತಲೆಗಳನ್ನೂ ಕಮಲಪುಷ್ಪಗಳನ್ನೂ ಹೋಲುವ ಮೂವತ್ತು ವಿಶಾಲ ಸ್ತಂಭಗಳು ನೋಟಕರನ್ನು ಬೆರಗುಗೊಳಿಸುವಂತೆ ತಲೆಯೆತ್ತಿ ನಿಂತಿದ್ದುವು. ಹಾಳು ದೇವಾಲಯದ ಒಂದು ಕೊನೆಯಲ್ಲಿ ಸ್ತಂಭ

ವೊಂದು ಏಕಾಂಗಿಯಾಗಿ ನಿಂತಿತ್ತು. ವಿಶಾಲ ನೇತ್ರ, ದುಂಡಗಿನ ಕೆನ್ನೆ, ತಲೆಯ ಮೇಲೆ ಕೊಂಬುಗಳಿದ್ದ, ಹಸನ್ಮುಖದ ಸ್ತ್ರೀಯೊಬ್ಬಳ ಆಕೃತಿಯನ್ನು ಅದರ ಮೇಲೆ ಕೊರೆಯಲಾಗಿತ್ತು. ಅದನ್ನು ನೋಡುತ್ತಲೂ, ಅದೇ ಕನಸಿನಲ್ಲಿ ಕಾಣಿಸಿದ ಸ್ತಂಭವೆಂದು ಆತ ಗುರುತಿಸಿದ. ಆ ಸ್ತಂಭ ಮೂವತ್ತು ಅಡಿಗಳಷ್ಟು ಎತ್ತರವಾಗಿರಬಹುದೆಂದೂ ಆತನಿಗನ್ನಿಸಿತು. ಹಳ್ಳಿಗೆ ಹೋಗಿ ಅಷ್ಟು ಎತ್ತರದ ಏಣಿಯೊಂದನ್ನು ಮಾಡಿಸಿ ತಂದು ಸ್ತಂಭಕ್ಕೆ ಹೊಂದಿಸಿಟ್ಟು ಆತ ಅದರ ಮೇಲೇರಿದ, ಮಸ್ತಕ ಬಾಗಿಸಿ ಭಗವಂತನನ್ನು ಪ್ರಾರ್ಥಿಸಿದ:

"ಹೇ ಪರಮೇಶ್ವರಾ, ನನಗಾಗಿ ನೀನು ಸೂಚಿಸಿದ ಸ್ಥಳಕ್ಕಂತೂ ಬಂದು ಸೇರಿದ್ದಾಯಿತು. ಮುಂದೇನು ? ನಿನ್ನ ಕೃಪೆಯಿಂದ, ಸಾಯುವ ವರೆಗೂ ನಾನಿಲ್ಲಿಯೇ ಇರಬಲ್ಲೆನೇ ?"

ಭಗವಂತನ ಮೇಲೆ ಭರವಸೆಯಿಟ್ಟು ಆತ ಅಲ್ಲಿಯೆ ನೆಲೆಯೂರಿದ. ಆಹಾರ ಪದಾರ್ಥಗಳನ್ನು ಕೂಡಾ ಆತ ತೆಗೆದುಕೊಂಡು ಬಂದಿರಲಿಲ್ಲ. ಹತ್ತಿರದ ಹಳ್ಳಿಯಲ್ಲಿನ ಉದಾರ ಜನರು ತನಗೆ ಆವಶ್ಯವಿದ್ದ ವಸ್ತುಗಳನ್ನು ತಂದು ಕೊಡಬಹುದೆಂದು ಅವನಿಗನ್ನಿಸಿತ್ತು. ಎರಡನೆಯ ದಿನ ಪೂಜಾ ಕಾಲಕ್ಕೆ ಸ್ತ್ರೀಯರೂ ಮಕ್ಕಳೂ ನೈವೇದ್ಯ ತೆಗೆದುಕೊಂಡು ಬಂದಾಗ ಸ್ತಂಭದ ಮೇಲಿದ್ದ ಈ ತಪಸ್ವಿಯನ್ನು ಕಂಡು ನೈವೇದ್ಯದ ಪದಾರ್ಥಗಳನ್ನು ಅವನಿಗೇ ಒಪ್ಪಿಸಿದರು. ಚಿಕ್ಕ ಮಕ್ಕಳು ಓಡಿಹೋಗಿ ನೀರನ್ನು ತಂದುಕೊಟ್ಟರು.

ಕೈಕಾಲು ಚಾಚಿ ಮಲಗಿಕೊಳ್ಳುವಷ್ಟು ಅಗಲವಾದ ಸ್ಥಳವಿರಲಿಲ್ಲ ಸ್ತಂಭದ ಮೇಲೆ. ಎಂತಲೇ ಆತ, ಕಾಲುಗಳನ್ನು ಮಡಚಿಕೊಂಡು ಎದೆಯಲ್ಲಿ ತಲೆ ಹುದುಗಿಸಿ ಬಿದ್ದುಕೊಂಡಿರಬೇಕಾಯಿತು ಜಾಗರಣೆಗಿಂತ ಈ ಬಗೆಯ ನಿದ್ದೆ ಹೆಚ್ಚು ಕಷ್ಟದಾಯಕವೆನಿಸಿತು. ಬೆಳಗಿನ ಸಮಯದಲ್ಲಿ ಹಕ್ಕಿಗಳು ರೆಕ್ಕೆ ಬಡಿಯುತ್ತಾ ಅವನನ್ನು ಕುಕ್ಕುತ್ತಿದ್ದುವು. ಆತ ಭೀತಿಯಿಂದಲೂ ಕಷ್ಟದಿಂದಲೂ ಎಚ್ಚರಗೊಳ್ಳುತ್ತಿದ್ದ.

ಸುದೈವದಿಂದಾಗಿ ಆ ಏಣಿಯನ್ನು ಮಾಡಿಕೊಟ್ಟ ಬಡಗಿಯುವನೂ ಭಗವದ್ಭಕ್ತನಾಗಿದ್ದ. ಸ್ತಂಭದ ಮೇಲೆ ಚಪ್ಪರವಿರಲಿಲ್ಲವಾದುದರಿಂದ ಮಳೆಗಾಳಿ ಬಿಸಿಲುಗಳಿಂದಾಗಿ ಸಿದ್ಧನಾಥನಿಗೆ ತುಂಬಾ ತೊಂದರೆಯಾಗುತ್ತಿತ್ತು. ಅದನ್ನು ತಪ್ಪಿಸುವ ಉದ್ದೇಶದಿಂದ ಬಡಗಿಯುವ, ಸ್ತಂಭದ ಮೇಲೆ ಚಪ್ಪರವೊಂದನ್ನು

ಹಾಕಿಕೊಟ್ಟ.

ಸ್ತಂಭವನ್ನೇರಿ ಕುಳಿತ ಈ ಅಸಾಮಾನ್ಯ ಸಾಧುವಿನ ಪ್ರಶಂಸೆ ಹಳ್ಳಿ ಪಳ್ಳಿಗಳಲ್ಲೆಲ್ಲ ಹರಡತೊಡಗಿತು. ಸೋಮವಾರದ ಬಿಡುವಿನ ದಿನದಂದು ಸುತ್ತುಮುತ್ತಲಿನ ರೈತರೆಲ್ಲ ಸಾಧುವನ್ನು ನೋಡಲೆಂದು ಅಲ್ಲಿ ನೆರೆಯತೊಡಗಿದರು. ಸಿದ್ಧನಾಥನ ವಿರಾಮತಾಣದ ವಾರ್ತೆ ತಿಳಿಯುತ್ತಲೂ ಅವನ ಶಿಷ್ಯರೂ ಕೆಲವರು ಅಲ್ಲಿಗೇ ಬಂದು, ಸ್ತಂಭದ ಹತ್ತಿರವೇ ಗುಡಿಸಲುಗಳನ್ನು ಕಟ್ಟಿಕೊಂಡು ವಾಸಿಸಲು ಅವನ ಅನುಮತಿ ಪಡೆದುಕೊಂಡರು. ಪ್ರತಿದಿನವೂ ಪ್ರಾತಃಕಾಲ ಅವರು ಸ್ತಂಭದ ಬಳಿ ಬಂದು ವರ್ತುಲಾಕಾರವಾಗಿ ನಿಂತುಕೊಂಡು ತಮ್ಮ ಗುರುವಿನ ಉಪದೇಶವಾಣಿಯನ್ನಾಲಿಸತೊಡಗಿದರು.

ಅವರಿಗಾತ ಹೇಳುತ್ತಿದ್ದ:

"ನನ್ನ ಪ್ರಿಯ ಬಂಧುಗಳೇ, ಚಿಕ್ಕ ಮಕ್ಕಳ ಹಾಗೇ ನೀವೂ ಆಗಬೇಕು. ಮಕ್ಕಳಂಥ ಸರಳ ಮನಸ್ಸಿನವರನ್ನು ದೇವರು ಪ್ರೀತಿಸುತ್ತಾನೆ, ಅವರಿಗೆ ಮುಕ್ತಿಯನ್ನು ದಯಪಾಲಿಸುತ್ತಾನೆ. ಶಾರೀರಿಕ ವಾಸನೆಯೆ ಎಲ್ಲಾ ಪಾಪಗಳಿಗೂ ಮೂಲವಾಗಿದೆ. ಎಲ್ಲಾ ಕೆಡಕುಗಳೂ ಇದರಿಂದಲೇ ಉತ್ಪನ್ನವಾಗುತ್ತವೆ. ಗರ್ವ, ಲೋಭ, ಆಲಸ್ಯ, ಕ್ರೋಧ ಹಾಗೂ ಈರ್ಷೆಗಳಿಗೆಲ್ಲಾ ಮೋಹವೇ ತಾಯಿ. ಕಲ್ಯಾಣ ನಗರದಲ್ಲಿ ನಾನು ಕಂಡದ್ದೇನು ಬಲ್ಲಿರಾ? ವಿಲಾಸ ಲಾಲಸೆಯಲ್ಲಿ ಮುಳುಗಿ ಧನಿಕರು ಭ್ರಷ್ಟರಾಗುವುದನ್ನು ನಾನು ನೋಡಿದೆ. ಹೊಲಸು ನೀರಿನಂತೆ ಅವರು ನರಕಸಾಗರದ ಕಡೆಗೆ ಹರಿದುಹೋಗುತ್ತಿದ್ದಾರೆ."

ಅನೇಕ ರಾಜ್ಯಗಳ ಧರ್ಮಾಧಿಕಾರಿಗಳು ಸಿದ್ಧನಾಥನ ಈ ತಪಸ್ಸಿನ ಸಮಾಚಾರವನ್ನಾಲಿಸಿ ಅವನನ್ನು ಪ್ರತ್ಯಕ್ಷವಾಗಿ ನೋಡುವುದಕ್ಕೆಂದು ಅಲ್ಲಿಗೆ ಬರಲಾರಂಭಿಸಿದರು. ಸಂನ್ಯಾಸಿಗಳಿಗೆಲ್ಲ ಒಂದು ಆದರ್ಶವೆಂಬಂತೆ ಭಗವಂತ ತನ್ನನ್ನಿಲ್ಲಿ ಇರಿಸಿರಬೇಕೆಂದು ಸಿದ್ಧನಾಥ ಯೋಚಿಸಿದ. ಕೆಲವು ಧರ್ಮಾಧಿಕಾರಿಗಳು ಈ ವಿಚಿತ್ರ ತಪಸ್ಸನ್ನು ಕಂಡು ಆಶ್ಚರ್ಯಚಕಿತರಾಗದಿರಲಿಲ್ಲ. ಈ ಆಚರಣೆ ಅನುಚಿತವಾದುದೆಂದೇ ಅವರಿಗನ್ನಿಸಿತು. ಈ ಹುಚ್ಚನ್ನು ತ್ಯಜಿಸಿ ಸ್ತಂಭದಿಂದಿಳಿದು ಬರಬೇಕೆಂದು ಸಿದ್ಧನಾಥನಿಗೆ ಸೂಚಿಸಿದರು.

"ನಿನ್ನೀ ಜೀವನ ಎಲ್ಲಾ ನಿಯಮಗಳಿಗೂ ವಿರುದ್ಧವಾಗಿದೆ. ಇಂಥದನ್ನು ನಾವೆಲ್ಲೂ ನೋಡಿಲ್ಲ, ಕೇಳಿಲ್ಲ. ಇದೆಲ್ಲಾ ಅಸಂಗತವಾದದ್ದು." ಎಂದು

ಅವರು ಅಭಿಪ್ರಾಯಪಟ್ಟರು.

ಸಿದ್ಧನಾಥ ಉತ್ತರವಿತ್ತ:

"ಸಂನ್ಯಾಸಿಯು ಜೀವನವೆಂದರೇನೇ ಆಶ್ಚರ್ಯದ ಜೀವನವಾಗಿದೆ. ಅದರಂತೆಯೇ ಅವನ ಕೃತಿಗಳೂ ಅಸಾಮಾನ್ಯವಾದವುಗಳೇ ಆಗಿರಬೇಕಾಗುತ್ತದೆ. ಪರಮಾತ್ಮನ ಸಂಕೇತದ ಪ್ರಕಾರ ನಾನು ಈ ಸ್ತಂಭವನ್ನೇರಿ ಕುಳಿತಿದ್ದೇನೆ. ಮತ್ತೆ ಅವನ ಸಂಕೇತ ಬಂದಾಗ ಇಳಿದು ಬಂದೇನು."

ಈ ಹಠಯೋಗಿಯ ಕಥೆ ನಾಡಿನಲ್ಲೆಲ್ಲ ಹರಡುತ್ತಲೂ ದೂರ ದೂರದ ದೇಶಗಳಿಂದ ಸಂನ್ಯಾಸಿಗಳು ಬಂದು ಸಿದ್ಧನಾಥನ ಸ್ತಂಭದ ನಾಲ್ಕು ಕಡೆಗಳಲ್ಲೂ ಕುಟೀರಗಳನ್ನು ರಚಿಸಿಕೊಂಡು ನೆಲಸತೊಡಗಿದರು. ಅವರಲ್ಲಿ ಕೆಲವರು ಸಿದ್ಧನಾಥನನ್ನನುಕರಿಸಿ ದೇವಸ್ಥಾನದ ಇತರ ಸ್ತಂಭಗಳನ್ನೇರಿಕುಳಿತುಕೊಂಡರು ಸಾಮಾನ್ಯ ಸಾಧುಗಳು ಇಂಥ ಕಠಿಣ ವ್ರತ ಕೈಗೊಳ್ಳುವುದು ಅನುಚಿತವೆಂದು ಇತರ ಸಾಧುಗಳು ಆಕ್ಷೇಪಿಸಿದಾಗ ಅವರು ಸ್ತಂಭಗಳಿಂದಿಳಿದು ಬಂದರು. ಸಿದ್ಧನಾಥನ ಹಾಗೆ ಕಷ್ಟ ಸಹಿಸುವ ಸಾಮರ್ಥ್ಯವೂ ಅವರಲ್ಲಿರಲಿಲ್ಲ.

ದಿನಗಳುರುಳಿದ ಹಾಗೆ ಅದೊಂದು ಯಾತ್ರಾಸ್ಥಾನವೇ ಆಯಿತು. ಈ ಪ್ರಚಂಡ ಸಾಧುವನ್ನು ಸಂದರ್ಶಿಸಿ ಪುಣ್ಯ ಪಡೆದುಕೊಳ್ಳಲೆಂದು ಯಾತ್ರಿಕರು ಹಿಂಡು ಹಿಂಡಾಗಿ ಬರತೊಡಗಿದರು. ಅವರಿಗೆ ಅನ್ನ ನೀರು ಪೂರೈಸುವುದಕ್ಕಾಗಿ ಮುದುಕಿಯೊಬ್ಬಳು ಒಂದು ಉಪಾಹಾರ ಗೃಹವನ್ನು ಆರಂಭಿಸಿದಳು. ಅವಳ ಹತ್ತಿರದಲ್ಲಿಯೇ ಒಂದು ರೊಟ್ಟಿಯಂಗಡಿಯೂ ಎದ್ದು ನಿಂತಿತು. ಯಾತ್ರಿಕರ ಗದ್ದಲ ದಿನದಿಂದ ದಿನಕ್ಕೆ ಅಧಿಕವಾಗುತ್ತಿತ್ತು. ಭರತವರ್ಷದ ದೊಡ್ಡ ದೊಡ್ಡ ಪಟ್ಟಣಗಳ ಧನಿಕರೆಲ್ಲರೂ ಬರತೊಡಗಿದ್ದರು. ಅವರೆಲ್ಲರಿಗೂ ಅಲ್ಲಿ ಉಳಿದುಕೊಳ್ಳಲು ಅನುಕೂಲವಾಗಲೆಂದು ಲೋಭಿಯೊಬ್ಬ ಅಲ್ಲೊಂದು ವಸತಿ ಗೃಹವನ್ನು ಸ್ಥಾಪಿಸಿದ. ಹಾಗೆ ಅಲ್ಲಿ ಮನೆಗಳು ಬೆಳೆಯತೊಡಗಿದುವು. ಕೆಲ ದಿನಗಳಲ್ಲಿಯೇ ಅದಕ್ಕೊಂದು ಪೇಟೆಯ ಸ್ವರೂಪವೇ ಪ್ರಾಪ್ತವಾಯಿತು. ಮೀನುಗಾರರು ಮೀನುಗಳನ್ನು ತಂದು ವಿಕ್ರಯಿಸತೊಡಗಿದರು. ತೋಟಗಾರರು ತರಕಾರಿ ಬುಟ್ಟಿ ಹೊತ್ತು ತರತೊಡಗಿದರು. ಒಬ್ಬ ಕ್ಷೌರಿಕನೂ ಅಲ್ಲಿ ತನ್ನ ಅಂಗಡಿ ಹೂಡಿ ಕಾಯಕ ಆರಂಭಿಸಿದ. ಅಷ್ಟು ದಿನಗಳ ಕಾಲ ಶಾಂತವಾಗಿದ್ದ ಆ ಪ್ರಾಚೀನ ಮಂದಿರ ಈಗ ಪುನಃ ಜೀವನ ಚಿಹ್ನಗಳಿಂದ ಚೇತರಿಸಿ

ಕೊಂಡಿತು. ಭೂಗರ್ಭದಲ್ಲಿದ್ದ ಗುಹೆಗಳನ್ನು ಕೊಟಡಿಗಳಾಗಿ ಪರಿವರ್ತಿಸಿ ವ್ಯಾಪಾರಸ್ಥರು ಅಲ್ಲಿ ನೆಲೆಯೂರಿದರು ಪವಿತ್ರ ದೇವಸ್ಥಾನದ ಆವರಣದಲ್ಲಿ ಹೆಂಡದಂಗಡಿಯೂ ಮೆರೆಯತೊಡಗಿತು. ಸಾಯಂಕಾಲದ ಸಮಯದಲ್ಲಿ ಮಂದಿರದ ಸುತ್ತಲೂ ಗದ್ದಲವೋ ಗದ್ದಲ.

ಆ ಸ್ಥಾನವೊಂದು ಪಟ್ಟಣವೇ ಆಗಿ ಬೆಳೆಯುತ್ತಲೂ ರಾಜ್ಯಾಧಿಕಾರಿಗಳು ಅತ್ತ ಲಕ್ಷ್ಯಗೊಟ್ಟು ಸರಿಯಾದ ರಸ್ತೆಗಳನ್ನು ನಿರ್ಮಿಸಿದರು. ನೀರಿಗಾಗಿ ಒಂದು ಕೆರೆಯನ್ನು ಕಟ್ಟಿಸಿದರು. ಧರ್ಮಛತ್ರಗಳೆದ್ದು ನಿಂತುವು. ಎರಡು ಮೂರು ದೇವಾಲಯಗಳೂ ಹೊಸದಾಗಿ ಕಟ್ಟಿಸಲ್ಪಟ್ಟುವು. ಆರು ತಿಂಗಳುಗಳ ಅವಧಿ ಯಲ್ಲಿ ಅಲ್ಲೊಂದು ನ್ಯಾಯಾಲಯವೂ ಸ್ಥಾಪಿಸಲ್ಪಟ್ಟಿತು.

ಯಾತ್ರಿಕರ ಸಂಖ್ಯೆ ಅಗಣಿತವಾಗಿತ್ತು. ಸಿದ್ಧನಾಥನ ಕೀರ್ತಿಯನ್ನು ಕೇಳಿ ಮುಗ್ಧರಾದ ವೈಷ್ಣವ ಧರ್ಮಗುರುಗಳೂ ಬಂದುಹೋದರು. ಶೈವ ಪಂಥೀಯರಿಗಂತೂ ಲೆಕ್ಕವೇ ಇರಲಿಲ್ಲ. ಶೈವ ಸಂನ್ಯಾಸಿಗಳನ್ನು ಹಳಿಯುತ್ತಿದ್ದವರೂ ಬಂದು ಈ ಅಸಾಧಾರಣ ದೃಶ್ಯವನ್ನು ಕಂಡು ವಿಸ್ಮಿತರಾಗುತ್ತಿದ್ದರು. ಅಂಥವರೆಲ್ಲರಿಗೂ ಸಿದ್ಧನಾಥ ಹೇಳುತ್ತಿದ್ದ:

“ಪ್ರಲೋಭನಗಳನ್ನು ಗೆಲ್ಲುವುದಕ್ಕಾಗಿಯೇ ನಾನೀ ತಪಸ್ಸು ಮಾಡುತ್ತಿದ್ದೇನೆ. ಈ ಪ್ರಲೋಭನಗಳ ಸಂಖ್ಯೆಯೂ ಶಕ್ತಿಯೂ ನನ್ನನ್ನು ಚಕಿತಗೊಳಿಸಿದೆ. ಹೊರಗಿನಿಂದ ನೋಡಿದಾಗ ಮನುಷ್ಯ ಚಿಕ್ಕವನಾಗಿ ಕಾಣುತ್ತಾನೆ. ಪರಮಾತ್ಮನಿಂದ ಅಪ್ಪಣೆ ಹೊಂದಿ ಈ ಸ್ತಂಭದ ಮೇಲೆ ಕುಳಿತಿರುವ ನನಗೆ ಕೆಳಗಡೆ ಓಡಾಡುವ ಮನುಷ್ಯರೆಲ್ಲರೂ ಇಲಿಗಳಂತೆ ಕಾಣುತ್ತಾರೆ. ಆದರೆ ನಿಜವಾಗಿ ಮನುಷ್ಯ ಅಲ್ಪನಲ್ಲ. ಆತ ಅಂತರಂಗದಲ್ಲಿ ಬಹಳ ದೊಡ್ಡವನಾಗಿದ್ದಾನೆ. ಲೋಕದಂತೆಯೇ ಮಹತ್ತರವಾದ ವ್ಯಕ್ತಿಯಾಗಿದ್ದಾನೆ. ಇಡೀ ವಿಶ್ವವೇ ಅವನಲ್ಲಿದೆ. ನನ್ನೆದುರಿಗಿರುವ ಈ ವಸ್ತುಗಳು—ಈ ಅಂಗಡಿಗಳು, ಈ ಅತಿಥಿಗೃಹಗಳು, ಈ ಕೆರೆ, ಈ ಪಟ್ಟಣ, ಈ ಬಯಲು, ಈ ಪರ್ವತ ಇವ್ವುಗಳೆಲ್ಲಾ ಆ ಮಹತ್ತಿನೆದುರು ಏನೂ ಅಲ್ಲ. ನನ್ನ ಹೃದಯದಲ್ಲಿ ಅಸಂಖ್ಯಾತ ನಗರಗಳೂ ಅಸೀಮ ಪ್ರದೇಶಗಳೂ ತುಂಬಿಕೊಂಡಿವೆ. ಈ ವಿಶಾಲ ಸೃಷ್ಟಿಯ ಮೇಲೆಲ್ಲಾ ಕೆಡುಕು ಮತ್ತು ಸಾವುಗಳ ಛಾಯೆ ಪಸರಿಸಿದೆ—ಪೃಥ್ವಿಯ ಮೇಲೆ ರಾತ್ರಿಯ ಕತ್ತಲು ಪಸರಿಸುವ ಹಾಗೆ ಸ್ವಯಂ ನಾನೇ ದುರ್ಭಾವನೆಗಳ

ದೊಂದು ಸಂಸಾರದಂತಿದ್ದೇನೆ."

ಅವನ ಮನಸ್ಸಿನಲ್ಲಿ ಆಗಲೂ ವಿಷಯಾಸಕ್ತಿಯುಳಿದಿದ್ದುದೇ ಆತ ಹಾಗೆ ಮಾತಾಡಲು ಕಾರಣವಾಗಿತ್ತು.

ಏಳನೆಯ ತಿಂಗಳಲ್ಲಿ ಕಲ್ಯಾಣ ನಗರದಿಂದ ಬಂಜೆಯರಾದ ಸ್ತ್ರೀಯರಿಬ್ಬರು ಸಂತಾನಾಕಾಂಕ್ಷಿಗಳಾಗಿ ಅವನ ದರ್ಶನಕ್ಕೆ ಬಂದರು. ಸಿದ್ಧನಾಥನ ಹರಕೆಯಿಂದಲೂ ಆ ಸ್ತಂಭದ ಕೃಪೆಯಿಂದಲೂ ತಾವು ಪುತ್ರವತಿಯರಾಗಬಹುದೆಂದೇ ಅವರು ಭಾವಿಸಿದ್ದರು. ಸ್ತಂಭದ ಬಳಿ ಬಂದು ಅದಕ್ಕೆ ಪ್ರದಕ್ಷಿಣೆ ಹಾಕಿ ಅವರು ತಮ್ಮ ಶರೀರಗಳನ್ನು ಅದಕ್ಕೆ ತಿಕ್ಕಿದರು. ಅದೇ ಸಮಯದಲ್ಲಿ ದೂರದಿಂದ ರಥಗಳೂ ಪಲ್ಲಕ್ಕಿಗಳೂ ಬರುತ್ತಿದ್ದುದು ಕಾಣಬಂದಿತು. ಒಂದು ಪಲ್ಲಕ್ಕಿಯಿಂದ ಮಹಾರೋಗಿಯೊಬ್ಬ ಇಳಿದು ಬಂದ. ಇನ್ನೂ ಅನೇಕ ರೋಗಿಗಳು ಬಂದು ಸೇರಿದರು. ಸಿದ್ಧನಾಥನ ಮಹಿಮೆಯಿಂದ ತಮಗೆಲ್ಲ ಗುಣವಾಗುವುದೆಂದೇ ನಂಬಿ ಅವರು ಅಲ್ಲಿಗೆ ಧಾವಿಸಿದ್ದರು. ಅಂಗವಿಕಲರಾಗಿದ್ದ ಮಕ್ಕಳನ್ನು ಹೊತ್ತು ತಂದ ತಾಯಂದಿರು ಸ್ತಂಭದ ಕೆಳಕ್ಕಿರಿಸಿ ಸಾಧುವಿನ ದಯೆಯನ್ನು ಕೋರಿದರು. ಸಿದ್ಧನಾಥ ಪವಿತ್ರ ಭಾವದಿಂದಲೇ ಅವರನ್ನು ಹರಸಿದ. ಕೋಲುಗಳ ಆಧಾರದಿಂದ ನಡೆಯುತ್ತ ಬಂದ ಕುರುಡರು ತಮ್ಮ ದೃಷ್ಟಿಹೀನ ಕಣ್ಣುಗಳನ್ನು ಅವನತ್ತ ತಿರುಗಿಸಿ ದೃಷ್ಟಿದಾನ ಬೇಡಿದರು. ಪಾರ್ಶ್ವವಾಯುವಿನಿಂದ ಪೀಡಿತರಾದವರು ತಮ್ಮ ಗತಿಹೀನ, ಶುಷ್ಕ, ಸಂಕುಚಿತ ದೇಹ ತೋರಿಸಿದರು. ಈ ರೀತಿಯಾಗಿ ಅನೇಕ ಬಗೆಯ ರೋಗಿಗಳು ಸಿದ್ಧನಾಥನಿಂದ ಬಿಡುಗಡೆಯನ್ನಾಸಿಸಿದರು. ಆತ ಎಲ್ಲರಿಗೂ ಆಶೀರ್ವದಿಸಿದ.

ಆತನ ಅದ್ಭುತ ಪವಾಡಗಳ ವಾರ್ತೆ ದೂರದೂರದ ವರೆಗೂ ಹರಡುತ್ತಲೂ ಭರತಖಂಡದ ಎಲ್ಲಾ ಭಾಗಗಳಿಂದ ಉನ್ಮಾದಗ್ರಸ್ತರಾದ ರೋಗಿಗಳ ತಂಡ ಅಲ್ಲಿಗೆ ಬರತೊಡಗಿತು. ಸ್ತಂಭದ ದರ್ಶನವಾಗುತ್ತಲೂ ಅವರ ದೇಹ ಕಂಪಿಸುತ್ತಿತ್ತು. ಅವರು ಉನ್ಮತ್ತರಾಗಿ ಕುಣಿಯುತ್ತಿದ್ದರು. ಅದನ್ನು ಕಂಡು ಪ್ರಭಾವಿತರಾದ ಸಿದ್ಧನಾಥನ ಶಿಷ್ಯರೂ ಉನ್ಮಾದಗ್ರಸ್ತರಾಗಿ ಆ ರೋಗಿಗಳಂತೆಯೇ ವರ್ತಿಸತೊಡಗಿದರು. ಸಾಧುಗಳು ಯಾತ್ರಿಕರು ಸ್ತ್ರೀಯರು ಪುರುಷರು ಎಲ್ಲರೂ ನೆಲದ ಮೇಲೆ ಉರುಳಾಡುತ್ತ ಕೂಗಾಡುತ್ತ ಮುಷ್ಟಿಗಳಲ್ಲಿ ಮಣ್ಣೆತ್ತಿ ತೂರುತ್ತ ಮೈ ಪರಚಿಕೊಳ್ಳುತ್ತ ಕೂದಲು ಕಿತ್ತುಕೊಳ್ಳುತ್ತ ಗದ್ದಲ

ಮಾಡತೊಡಗಿದರು. ಇದೆಲ್ಲವನ್ನೂ ಕಂಡು ಸಿದ್ಧನಾಥನ ಎದೆಯಲ್ಲಿ ತಳಮಳ ವಾಗತೊಡಗಿತು. ಆತ ಪರಮಾತ್ಮನನ್ನು ಕುರಿತು ಪ್ರಾರ್ಥಿಸಿಕೊಂಡ:

"ಹೇ ಭಗವಂತಾ, ಇವರನ್ನು ಕ್ಷಮಿಸು. ಈ ಎಲ್ಲಾ ಪಾಪಗಳಿಗೆ ನಾನೇ ಉತ್ತರವಾದಿಯಾಗಿದ್ದೇನೆ. ಇವರ ಸಮಸ್ತ ಅಪರಾಧಗಳನ್ನು ನಾನೇ ವಹಿಸಿಕೊಳ್ಳುತ್ತೇನೆ. ನನ್ನ ದೇಹ ದುರಾತ್ಮರ ನಿವಾಸಸ್ಥಾನವಾಗಿದೆ. ಇನ್ನೇನು ಗತಿ ?"

ಯಾವನಾದರೊಬ್ಬ ರೋಗಿಗೆ ಸಹಜವಾಗಿ ಗುಣ ಕಂಡುಬಂದಾಗ ಸಿದ್ಧ ನಾಥನ ಶಿಷ್ಯರು ಅದನ್ನೆತ್ತಿ ಹಾಡಿ ಹೊಗಳುತ್ತಿದ್ದರು. "ನಮ್ಮ ಗುರುಮಹಾ ರಾಜರ ಮಹಿಮೆಯನ್ನೇನು ವರ್ಣಿಸೋಣ ! ಇವರು ಸಾಕ್ಷಾತ್ ಭಗವಂತನ ಅವತಾರವಾಗಿದ್ದಾರೆ." ತಿಳಿವಳಿಕೆಯಿಲ್ಲದ ಆ ಅಶಿಕ್ಷಿತರು ಆ ಮಾತನ್ನು ಸುಲಭ ವಾಗಿ ನಂಬುತ್ತಿದ್ದರು.

ಆ ಆಶ್ಚರ್ಯಕಾರಕ ಸ್ತಂಭಕ್ಕೆ ನೂರಾರು ಹೂಮಾಲೆಗಳನ್ನು ಕಟ್ಟಲಾ ಯಿತು. ಕೆಲವು ಭಕ್ತರು ಅದರ ಮೇಲೆ ಭಜನೆಗಳನ್ನು ಕೆತ್ತಿದರು. ಅಲ್ಲಿಗೆ ಬಂದ ಪ್ರತಿಯೊಬ್ಬ ಯಾತ್ರಿಕನೂ ಅದರ ಮೇಲೆ ತನ್ನ ಹೆಸರು ಬರೆದುಹೋಗು ತ್ತಿದ್ದ. ಅದರಿಂದಾಗಿ ಆ ಸ್ತಂಭ ಕೆಲ ದಿನಗಳಲ್ಲಿಯೇ ಭಾರತದ ಅನೇಕ ಲಿಪಿ ಗಳಿಂದ ತುಂಬಿಹೋಯಿತು.

ಶಿವರಾತ್ರಿಯ ಉತ್ಸವದ ದಿನಗಳಲ್ಲಂತೂ ಅಲ್ಲಿ ಪ್ರಚಂಡ ಜನಜಾತ್ರೆ ನೆರೆ ಯಿತು. ಪುರಾಣ ಕಾಲದ ಅದ್ಭುತ ದಿನಗಳೇ ಮತ್ತೆ ಮರುಕಳಿಸಿದುವೆಂದು ವೃದ್ಧರು ಭಾವಿಸಿದರು. ವಿಸ್ತೃತವಾದ ಬಯಲಿನಲ್ಲಿ ಭಾರತದ ವಿವಿಧ ಭಾಗ ಗಳ ವಿವಿಧ ಜಾತಿ ಜನಾಂಗಗಳ ಜನಗಳೆಲ್ಲ ಕಲೆತರು. ಪಲ್ಲಕ್ಕಿಗಳಲ್ಲಿ ಕುಳಿತು ಕೊಂಡು ಸ್ತ್ರೀಯರು ಆಗಮಿಸಿದರು. ಕತ್ತೆ, ಕುದುರೆ, ಒಂಟೆ, ಆನೆ, ಎತ್ತು, ಚಕ್ಕಡಿ, ರಥಗಳನ್ನೇರಿ ಯಾತ್ರಿಕರು ಬಂದರು. ಯಾತ್ರಿಕರ ಮನೋರಂಜನೆ ಮಾಡಿ ಕಾಸು ಸಂಪಾದಿಸಲು ಆಟಗಾರರೂ ಮಂತ್ರಗಾರರೂ ಬಂದರು. ಡೊಂಬರು ಬಂದರು, ಹಾವಾಡಿಗರು ಬಂದರು. ಅಂಥ ಜನಸಮ್ಮರ್ದವನ್ನು ಆ ಭಾಗದ ನಿವಾಸಿಗಳು ಹಿಂದೆಂದೂ ಕಂಡಿರಲಿಲ್ಲ. ಸಿದ್ಧನಾಥನ ಮಹಿಮೆ ಯಿಂದಾಗಿ ಆ ಹಳ್ಳಿಗೂ ಹೆಸರಾಯಿತು. ಹಳ್ಳಿಗರಿಗೆ ಸಾಕಷ್ಟು ಧನ ಪ್ರಾಪ್ತಿಯೂ ಆಯಿತು.

ರಾತ್ರಿಯಾಗುತ್ತಲೂ ನಾಲ್ಕೂ ಕಡೆಗಳಲ್ಲಿ ಶಿಬಿರಾಗ್ನಿ, ಹಿಲಾಲು, ಕೈದೀವಟಿಗೆಗಳುರಿಯತೊಡಗಿದುವು. ಬಯಲಿನಲ್ಲಿನ ಎಲ್ಲ ವಸ್ತುಗಳೂ ಕೆಂಪು ಛಾಯೆ ತಳೆದು ಕಪ್ಪು ಆಕೃತಿಗಳಲ್ಲಿ ಪರಿವರ್ತಿತವಾದುವು. ಸೆರೆಯಂಗಡಿಗಳಲ್ಲಿ ಮದ್ಯಪಾನ ಸುಖವಾಗಿ ನಡೆದಿತ್ತು. ಕುಡುಕರೆದುರಿಗೆ ನಿಂತು ಬಣ್ಣ ಬಳಿದ ಕಣ್ಣುಗಳ ಬತ್ತಲೆ ಎದೆಗಳ ನರ್ತಕಿಯರು ಧಾರ್ಮಿಕ ನೃತ್ಯಗಳನ್ನು ನರ್ತಿಸುತ್ತಿದ್ದರು. ಯುವಕರು ಪಗಡೆಯಾಡುತ್ತಿದ್ದರು. ವೃದ್ಧರು ವೇಶ್ಯೆಯರ ಬೆನ್ನುಹತ್ತಿ ಹೊರಟಿದ್ದರು. ಈ ಎಲ್ಲ ಗದ್ದಲದ ಮೇಲೆ ಆ ಸ್ತಂಭ ಅಚಲವಾಗಿ ನಿಂತಿತ್ತು. ಅದರ ಮುಖ ನೆರಳಿನಲ್ಲಿ ಮುಚ್ಚಿತ್ತು. ಅದರ ಮೇಲೆ ಸಿದ್ಧನಾಥ, ಪೃಥ್ವಿ ಮತ್ತು ಆಕಾಶಗಳ ಮಧ್ಯೆ ಜಾಗ್ರತನಾಗಿ ಕುಳಿತಿದ್ದ. ಸ್ವಲ್ಪ ಸಮಯ ಕಳೆದ ಬಳಿಕ ಬೆಟ್ಟದಾಚೆಯಿಂದ ಚಂದ್ರ ಏರಿ ಬಂದ. ಗುಡ್ಡಗಳ ಮೇಲೆ ಬೆಳಕಿನ ಬಣ್ಣ ಸೂರೆಯಾಯಿತು. ಹತ್ತಿರದ ಕೆರೆಯ ಮೇಲೆ ಬೀಳುತ್ತಿದ್ದ ಚಂದ್ರ ಪ್ರಕಾಶದಲ್ಲೂ ಮುಕ್ತಾಳ ಮೂರ್ತಿಯೇ ಕಾಣಿಸಿತು ಸಿದ್ಧನಾಥನಿಗೆ.

ಮತ್ತೂ ಹಲವು ದಿನ ಕಳೆದುವು. ಸಿದ್ಧನಾಥ ಆ ಸ್ತಂಭದ ಮೇಲೆಯೆ ಸ್ಥಿರವಾಗಿ ಕುಳಿತುಕೊಂಡಿದ್ದ. ಮಳೆಗಾಲಕ್ಕಾರಂಭವಾಯಿತು. ಮಳೆಯ ನೀರು ಚಪ್ಪರವನ್ನು ಭೇದಿಸಿಕೊಂಡು ಸುರಿದು ಅವನ ದೇಹವನ್ನು ತೋಯಿಸತೊಡಗಿತು. ಅವನ ಶಕ್ತಿಹೀನ ಅವಯವಗಳು ಅಲುಗಾಡುವುದಕ್ಕೂ ಅಸಮರ್ಥವಾದುವು. ಬಿಸಿಲಿನಿಂದ ಸುಟ್ಟು, ಮಳೆಯಿಂದ ತೊಯ್ದು ಅವನ ಚರ್ಮ ಬಿರಿಯತೊಡಗಿತು. ಬಾಹುಗಳ ಮೇಲೂ ಕಾಲುಗಳ ಮೇಲೂ ದೊಡ್ಡ ದೊಡ್ಡ ಗಾಯಗಳು ಕಾಣಿಸಿಕೊಂಡುವು. ಅಂಥ ಸ್ಥಿತಿಯಲ್ಲಿಯೂ ಮುಕ್ತಾಳ ಮೋಹ ಅವನ ಮನಸ್ಸನ್ನು ಒಳಗೇ ಕೊರೆಯುತ್ತಿತ್ತು. ಆತ ಉದ್ವೇಗದಿಂದ ಕೂಗಿಕೊಳ್ಳುತ್ತಿದ್ದ:

“ಹೇ ಶಕ್ತಿಶಾಲಿ ಪರಮಾತ್ಮಾ, ಈಗಲೂ ದಯೆ ಬಾರದೇ ನಿನಗೆ? ಇನ್ನೆಷ್ಟು ದಿನ ನನ್ನನ್ನು ಪೀಡಿಸುವೆ? ಈ ಮೋಹವನ್ನು ನನಗೇಕೆ ಅಂಟಿಸುತ್ತಿರುವೆ? ಹೊಲಸು ವಿಚಾರಗಳನ್ನೂ ಪಾಶವೀಯ ಬಯಕೆಗಳನ್ನೂ ಏಕೆ ಜಾಗೃತಗೊಳಿಸುವೆ? ನನ್ನನ್ನು ತೊಂದರೆಗೀಡು ಮಾಡಿ ಮೋಜು ನೋಡುವುದೇ ನಿನ್ನ ಇಚ್ಛೆಯೇ? ಹಾಗಿದ್ದರೆ ಮನುಷ್ಯರ ಸಮಸ್ತ ವಾಸನೆಗಳನ್ನೂ

ನನ್ನಲ್ಲಿ ತುಂಬು. ಅವೆಲ್ಲವುಗಳ ಪ್ರಾಯಶ್ಚಿತ್ತವೂ ನನಗಾಗಲಿ. ಸಂಸಾರದ ಸಮಸ್ತ ಪಾಪಗಳೆಲ್ಲವನ್ನೂ ಒಂದು ನಾಯಿ ತನ್ನ ಮೈಮೇಲೆ ತೆಗೆದುಕೊಂಡಿದ್ದಿತೆಂದು ನಾಸ್ತಿಕರು ಹೇಳುವುದನ್ನು ಕೇಳಿದ್ದೇನೆ. ಅದು ಅತಿಶಯೋಕ್ತಿಯಾಗಿರಬಹುದು. ಆದರೆ ಪೂರ್ತಿಯಾಗಿ ಸುಳ್ಳಲ್ಲ. ಅದರಲ್ಲಿ ಸ್ವಲ್ಪ ಸತ್ಯತೆಯೂ ಉಂಟೆಂಬುದು ಇಂದು ನನಗೆ ಮನವರಿಕೆಯಾಗುತ್ತಿದೆ. ಲೋಕದ ಜನರ ಪಾಪಗಳೆಲ್ಲ ಮಹಾತ್ಮರ ಹೃದಯ ಸೇರಿ ಅಲ್ಲೇ ಬಿದ್ದುಕೊಳ್ಳುತ್ತವೆಂಬುದೂ ನಿಜ. ಧಾರ್ಮಿಕ ಪುರುಷರ ಮನಸ್ಸಿನಲ್ಲಿದ್ದಷ್ಟು ಹೊಲಸು ಅಪರಾಧಿಗಳ ಮನಸ್ಸಿನಲ್ಲೂ ಇರುವುದಿಲ್ಲ. ನನ್ನನ್ನು ಇಡೀ ವಿಶ್ವದ ಮಲಾಶಯವನ್ನಾಗಿ ಮಾಡಿಬಿಟ್ಟಿರುವೆ ನೀನು. ಈ ಉಪಕಾರಕ್ಕಾಗಿ ನಾನು ನಿನ್ನ ಗುಣಗಾನ ಮಾಡುತ್ತೇನೆ. ”

ಕಲ್ಯಾಣದ ದಂಡನಾಯಕ ಸಿದ್ಧನಾಥನನ್ನು ಸಂದರ್ಶಿಸುವುದಕ್ಕಾಗಿ ಆ ಧಾರ್ಮಿಕ ನಗರಕ್ಕೆ ಆಗಮಿಸಲಿರುವನೆಂಬ ವಾರ್ತೆ ಒಂದು ದಿನ ಹರಡಿತು. ಅಲ್ಲಿನ ಜನರೆಲ್ಲರೂ ಕುತೂಹಲದಿಂದ ಆತನ ಆಗಮನವನ್ನಿದಿರು ನೋಡತೊಡಗಿದರು. ಎರಡು ಮೂರು ದಿನಗಳ ತರುವಾಯ ಒಂದು ಸಾಯಂಕಾಲ ಚಿಕ್ಕದೊಂದು ಸೈನ್ಯದ ಜೊತೆಗೆ ದಂಡನಾಯಕ ಬಂದಿಳಿದು, ಬಯಲಿನಲ್ಲಿ ಬಿಡಾರ ಹೂಡಿದ.

ಮಾರ್ಗಕ್ರಮಣದ ಆಯಾಸವನ್ನು ಕಳೆದುಕೊಂಡ ನಂತರ ದಂಡನಾಯಕ ತಪಸ್ವಿಯ ದರ್ಶನಕ್ಕೆ ಹೊರಟ. ಅವನ ಸುತ್ತಲೂ ಅವನ ಪರಿವಾರ ಹಿಂಡುಗಟ್ಟಿಕೊಂಡು ನಡೆಯಿತು. ಸ್ತಂಭದಿಂದ ತುಸು ದೂರದಲ್ಲಿಯೇ ನಿಂತುಕೊಂಡು ವೃದ್ಧ ದಂಡನಾಯಕ ಸಿದ್ಧನಾಥನನ್ನು ನೋಡತೊಡಗಿದ. ಕುತೂಹಲದ ಸ್ವಭಾವವಾಗಿದ್ದುದರಿಂದ ಇಂಥ ವಿಚಿತ್ರ ದೃಶ್ಯಗಳಲ್ಲಿ ಆತನಿಗೆ ತುಂಬಾ ಆಸಕ್ತಿಯಿತ್ತು.

“ಇದು ನಿಜವಾಗಿಯೂ ವಿಚಿತ್ರವೇ ಸರಿ. ಈ ವ್ಯಕ್ತಿ ಹಿಂದೊಂದು ದಿನ ನನ್ನ ಅತಿಥಿಯಾಗಿದ್ದನಲ್ಲವೆ? ಆ ಮಾತಿಗೆ ಎಷ್ಟು ದಿನವಾಗಿರಬಹುದು? ನೆನಪಾಯಿತು. ಒಂದು ವರ್ಷದ ಹಿಂದೆ ಮುಕ್ತಾಳ ಜೊತೆ ಈತ ಬಂದಿದ್ದ. ಅನಂತರ ಅವಳನ್ನು ಕಟ್ಟಿಕೊಂಡು ಓಡಿಹೋಗಿದ್ದ.”

ದಂಡನಾಯಕ ಮನಸ್ಸಿನಲ್ಲಿಯೆ ಆ ರೀತಿ ಯೋಚಿಸಿ ತನ್ನ ಅನುಚರನತ್ತ

ಹೊರಳಿ ಹೇಳಿದ:

"ಈ ದೃಶ್ಯದ ವಿವರಗಳನ್ನೆಲ್ಲಾ ಸರಿಯಾಗಿ ಬರೆದುಕೊಂಡು ಬಿಡು. ಸ್ತಂಭದ ಉದ್ದಗಲಗಳ ಅಳತೆಯನ್ನು ತೆಗೆದು ಅದನ್ನು ಗುರುತು ಹಾಕಿಕೋ. ಶಿಖರದ ಸ್ವರೂಪವನ್ನು ನೋಡಿಕೋ. ರಾಜಧಾನಿಗೆ ಹಿಂದಿರುಗಿದ ಬಳಿಕ ಮಹಾರಾಜರಿಗೆ ಈ ವಿಷಯವನ್ನೆಲ್ಲಾ ಕಥೆ ಮಾಡಿ ಹೇಳಬೇಕು."

ಹಣೆಯ ಮೇಲಿನ ಬೆವರನ್ನೊರೆಸಿಕೊಂಡು ದಂಡನಾಯಕ ಮತ್ತೆ ಹೇಳಿದ:

"ಈ ಸಾಧು ಒಂದು ವರ್ಷದಿಂದ ಈ ಸ್ತಂಭದ ಮೇಲೇ ಕೂತಿದ್ದಾನೆಂದು ಕೇಳಿದ್ದೇನೆ. ಅಂದಿನಿಂದ ಒಮ್ಮೆಯೂ ಕೆಳಗಿಳಿದಿಲ್ಲವಂತೆ. ಏನಯ್ಯಾ, ಇದೆಲ್ಲಾದರೂ ಸಾಧ್ಯವೆ ?"

"ಮೂರ್ಖರೂ ರೋಗಿಗಳೂ ಆದವರಿಗೆ ಸಾಧ್ಯವಾದೀತೋ ಏನೋ. ಆರೋಗ್ಯಶಾಲಿಗಳೂ ಬುದ್ಧಿವಂತರೂ ಆದವರಿಗೆ ಅದು ಅಸಾಧ್ಯವೇ ಸರಿ. ಆರೋಗ್ಯಶಾಲಿಗಳಾದವರಿಗೂ ಇಲ್ಲದಿರುವಂಥ ಶಕ್ತಿಯನ್ನು ಮನಸ್ಸಿನ ಮತ್ತು ಶರೀರದ ರೋಗಗಳು ಆಗಾಗ ತಂದುಕೊಡುವುದುಂಟು. ಒಳ್ಳೆಯ ಆರೋಗ್ಯ ಕೆಟ್ಟ ಆರೋಗ್ಯವೆಂಬುವು ಬೇರೆ ಬೇರೆ ವಿಷಯಗಳೂ ಅಲ್ಲ. ಅವಯವಗಳ ಬೇರೆ ಬೇರೆ ಅವಸ್ಥೆಗಳನ್ನೆ ನಾವು ಹೀಗೆ ಕರೆಯುವುದುಂಟು. ಜೀವನಕ್ಕೆ ಇವೂ ಕೂಡ ಅವಶ್ಯವಾಗಿವೆಯೆಂದು ರೋಗಗಳ ಅಧ್ಯಯನದಿಂದ ಗೊತ್ತಾಗುತ್ತದೆ. ಅವುಗಳ ಚಿಕಿತ್ಸೆಗಿಂತ ಅವುಗಳ ಅಧ್ಯಯನದಲ್ಲೇ ನನಗೆ ಹೆಚ್ಚು ಆನಂದವಾಗುತ್ತದೆ. ಕೆಲವು ರೋಗಗಳನ್ನು ನಾವು ಮೆಚ್ಚಿಕೊಳ್ಳಲೇಬೇಕಾಗುತ್ತದೆ. ಅವುಗಳಿಂದಾಗುವ ಹಾನಿಯ ಹಿಂದೆ ಮಹಾ ಮಂಗಲವಿರುತ್ತದೆ. ಕಾಹಿಲೆಯೆಂದರೆ ಅತ್ಯಂತ ಸುಂದರವಾದದ್ದು ! ಆಗಾಗ ಕೆಲವು ಶಾರೀರಿಕ ರೋಗಗಳು ಬುದ್ಧಿಶಕ್ತಿಯನ್ನು ಹೆಚ್ಚಿಸುತ್ತವೆ. ಕೀರ್ತಿವರ್ಮ ನಿನಗೆ ಗೊತ್ತು ತಾನೆ ? ಬಾಲ್ಯದಲ್ಲಿ ಆತ ಅಪ್ಪಟ ಮೂರ್ಖನಿದ್ದ. ಸರಿಯಾಗಿ ಮಾತಾಡಲಿಕ್ಕೂ ಬರುತ್ತಿರಲಿಲ್ಲ. ಆದರೊಮ್ಮೆ ಏಣಿಯಿಂದ ಜಾರಿ ಬಿದ್ದಾಗ ಮೆದುಳಿಗೆ ಪೆಟ್ಟು ಬಿತ್ತು. ಅಂದಿನಿಂದ ಅವನ ಬುದ್ಧಿ ಪ್ರಖರವಾಗಿ ಈಗ ಆತ ಪ್ರಚಂಡ ಬುದ್ಧಿವಂತನಾಗಿದ್ದಾನೆ. ಈ ಸಾಧುವಿನ ಯಾವುದೊಂದು ಅಂಗದಲ್ಲಿ ಏನಾದರೂ ದೋಷವಿರಲು ಸಾಕು. ಅದೇನೇ ಇದ್ದರೂ ಅವನನ್ನು ಕಂಡು ನಾವು

ಬೇರಗಾಗಬೇಕಾಗಿಲ್ಲ. ಒಂದು ವರ್ಷವೇಕೆ, ಹತ್ತಿಪ್ಪತ್ತು ನೂರಾರು ವರ್ಷಗಳ ವರೆಗೂ ಹೀಗೇ ಅಲುಗಾಡದೆ ಕುಳಿತು ತಪಸ್ಸು ಮಾಡುತ್ತಿದ್ದ ಯೋಗಿವರ್ಯ ರೆಷ್ಟು ಮಂದಿ ಆಗಿಹೋಗಿಲ್ಲ ನಮ್ಮ ದೇಶದಲ್ಲಿ!"

ದಂಡನಾಯಕ ಹೇಳಿದ:

"ನನಗಂತೂ ಇದೆಲ್ಲ ವಿಚಿತ್ರವಾಗಿಯೇ ಕಾಣುತ್ತಿದೆ. ಹೀಗೆಲ್ಲಾ ಆಚ ರಿಸುವುದು ಮಹಾ ಪ್ರಮಾದ. ಕರ್ಮ ಮಾಡುವುದಕ್ಕಾಗಿಯೆ ಮನುಷ್ಯ ಹುಟ್ಟಿ ಬಂದಿದ್ದಾನೆ. ಅಕರ್ಮವೊಂದು ಅಕ್ಷಮ್ಯವಾದ ಅಪರಾಧ. ಇಂಥ ಅಪರಾಧ ಮಾಡುವುದೆಂದರೆ ರಾಜ್ಯವನ್ನು ದ್ವೇಷಿಸಿದ ಹಾಗೆ. ಈ ರೀತಿಯ ಆಚರಣೆಗಳಿಗೆ ಒಪ್ಪಿಗೆ ಕೊಡುವ ಧರ್ಮ ದುಷ್ಟ ಧರ್ಮ. ಹತ್ತು ವರ್ಷಗಳ ಹಿಂದೊಮ್ಮೆ ಈ ಸಾಧುವಿನಂಥ ಹುಚ್ಚನೊಬ್ಬ ವರ್ಷದಲ್ಲೊಂದು ಬಾರಿ ಕಲ್ಯಾ ಣದ ದೀಪಸ್ತಂಭವನ್ನೇರಿ ಕೂಡುತ್ತಿದ್ದ. ಅದರಿಂದ ಕಲ್ಯಾಣ ರಾಜ್ಯಕ್ಕೆ ಮಂಗಲವಾಗುವುದೆಂದು ಜನರು ಭಾವಿಸುತ್ತಿದ್ದರು. ಆ ತಿಳಿವಳಿಕೆ ತರ್ಕ ವಿರೋಧಿಯಾಗಿದ್ದರೂ ನಾನು ಅದಕ್ಕೆ ಪ್ರತಿಬಂಧ ವಿಧಿಸದೆ ಸುಮ್ಮನಿದ್ದುಬಿಟ್ಟೆ. ಜನತೆಯಲ್ಲಿ ಪ್ರಚಲಿತವಿರುವ ಪದ್ಧತಿಗಳನ್ನು ನಷ್ಟಗೊಳಿಸುವುದು ಅಧಿಕಾರಿಗಳ ಕರ್ತವ್ಯವಲ್ಲ. ಆ ಪದ್ಧತಿಗಳು ಅಚ್ಚಳಿಯದಂತೆ ಉಳಿಯುವ ಹಾಗೆ ನೋಡಿ ಕೊಳ್ಳುವುದಷ್ಟೆ ನಮ್ಮ ಕರ್ತವ್ಯ. ಸರಕಾರ ಹೊಸ ಅಭಿಪ್ರಾಯಗಳನ್ನು ಪ್ರಸಾರಗೊಳಿಸಬಾರದು. ಕಾಲ ಸ್ಥಳಗಳ ಪ್ರಭಾವದಿಂದ ರೂಪುಗೊಂಡ ಅಭಿ ಪ್ರಾಯಗಳನ್ನು ರಕ್ಷಿಸಬೇಕು. ಅವು ಒಳ್ಳೆಯವೇ ಇರಲಿ, ಕೆಟ್ಟವೇ ಇರಲಿ. ಅವುಗಳ ಗೊಡವೆಗೇ ಹೋಗಬಾರದು. ಅವುಗಳನ್ನು ಸರಕಾರ ಕೊನೆಗೊಳಿ ಸಲು ಯತ್ನಿಸಿದರೆ ಅದು ಕ್ರಾಂತಿಯಾಗುವುದು, ಅತ್ಯಾಚಾರವಾಗುವುದು. ಆ ಮೇಲೆ ಜನರು ನಮ್ಮನ್ನು ದ್ವೇಷಿಸುವರು. ಅಂಧಶ್ರದ್ಧೆಗಳನ್ನು ಕೂಡಾ ನಾವು ಸಹಿಸಿಕೊಳ್ಳಲು ಕಲಿಯಬೇಕು. ಈ ಸ್ತಂಭದ ಮೇಲೆ ಬಿದ್ದುಕೊಂಡು ಕನಸು ಕಾಣುತ್ತಿರುವ ಈ ಹುಚ್ಚ ಸಾಧು ತನ್ನ ಮನಸ್ಸು ಬಂದಷ್ಟು ದಿನ ಇಲ್ಲೇ ಬಿದ್ದುಕೊಂಡಿರಲೊಲ್ಲನೇಕೆ. ಅವನನ್ನು ಬಲವಂತದಿಂದ ಕೆಳಗಿಳಿಸಿ ದರೆ ಆಗುವ ಲಾಭವಾದರೂ ಏನು? ಅದರ ಬದಲು ಅವನ ವಿಚಾರಗಳನ್ನೂ ಅಭಿಪ್ರಾಯಗಳನ್ನೂ ಅರಿತುಕೊಳ್ಳುವುದರಿಂದಲೇ ಲಾಭವುಂಟು."

ದಂಡನಾಯಕ ಕೆಮ್ಮಿದ. ಅನುಚರನ ಹೆಗಲ ಮೇಲೆ ಕೈಯಿಟ್ಟು ಮತ್ತೆ

ಹೇಳಿದ:

"ಶೈವ ಪಂಥೀಯರ ಕೆಲವು ಶಾಖೆಗಳಲ್ಲಿ ವೇಶ್ಯೆಯರನ್ನೋಡಿಸಿಕೊಂಡು ಹೋಗುವುದೂ ಸ್ತಂಭಗಳ ಮೇಲೆ ವಾಸಿಸುವುದೂ ಒಳ್ಳೆಯ ಪದ್ಧತಿಯೆಂದೇ ಗಣನೆಯಾಗಿರಲು ಸಾಕು. ವಿಲಾಸಿಗಳಾದ ದೇವತೆಗಳಿಂದಲೇ ಈ ಪದ್ಧತಿ ಆರಂಭವಾಗಿರಬಹುದೋ ಏನೊ."

"ಈ ಸಾಧುವನ್ನೇ ಯಾಕೆ ಕೇಳಬಾರದು?"

"ಹೌದು, ಹೌದು. ಹಾಗೇ ಮಾಡಬೇಕು." ಎಂದು ಹೇಳಿ ಸಿದ್ಧನಾಥನ ಕಡೆ ಮುಖ ತಿರುಗಿಸಿ ದಂಡನಾಯಕ ಕೂಗಿ ಹೇಳಿದ: "ಸಿದ್ಧನಾಥ, ಹಿಂದೊಂದು ದಿನ ನೀನು ನನ್ನ ಅತಿಥಿಯಾಗಿದ್ದುದರ ನೆನಪು ನಿನಗಿರಬಹುದಷ್ಟೆ? ಆ ಪರಿಚಯದ ಆಧಾರದಿಂದಲೇ ನಿನ್ನನ್ನು ಮಾತಾಡಿಸುವ ಸಾಹಸ ಮಾಡುತ್ತಿದ್ದೇನೆ. ನನ್ನ ಪ್ರಶ್ನೆಗಳಿಗೆ ಉತ್ತರ ಕೊಡುವಿಯಾ? ಅಲ್ಲಿ ಮೇಲೆ ಕೂತು ನೀನೇನನ್ನು ಮಾಡುತ್ತಿರುವೆ? ಈ ಕಂಬದಿಂದ ಕಲ್ಯಾಣವಾಗುವುದೆಂದು ನೀನು ಭಾವಿಸಿಲ್ಲವಷ್ಟೆ?"

ದಂಡನಾಯಕ ಶೈವಧರ್ಮ ವಿರೋಧಿಯೆಂದು ಸಿದ್ಧನಾಥ ಭಾವಿಸಿದ್ದುದರಿಂದ ಆತ ಉತ್ತರವೀಯಲಿಲ್ಲ. ಅವನ ಬದಲು ಅವನ ಶಿಷ್ಯನೊಬ್ಬ ದಂಡನಾಯಕನಿಗೆ ಹೇಳಿದ:

"ನಮ್ಮ ಗುರುಮಹಾರಾಜರು ಲೋಕದ ಪಾಪಗಳನ್ನೆಲ್ಲಾ ತಾವೇ ಭರಿಸಿಕೊಂಡಿದ್ದಾರೆ. ಸಂಸಾರದ ರೋಗಗಳನ್ನೆಲ್ಲ ಶಮನಗೊಳಿಸುತ್ತಾರೆ."

ದಂಡನಾಯಕ ತನ್ನ ಅನುಚರನತ್ತ ತಿರುಗಿ ಹೇಳಿದ:

"ಕೇಳಿದಿಯಾ! ನಿನ್ನ ಹಾಗೇ ಈ ಕನಸುಣಿಯೂ ಔಷಧ ಕೊಡುತ್ತಾನಂತೆ! ಈ ನಿನ್ನ ಸಹೋದ್ಯೋಗಿ ವೈದ್ಯನ ಬಗ್ಗೆ ನೀನೇನು ಹೇಳುವೆ?"

"ಕೆಲವು ರೋಗಗಳಿಗೆ ನನಗಿಂತ ಒಳ್ಳೆಯ ಔಷಧ ಕೊಡುತ್ತಿರಬಹುದು ಈತ. ಸಾಮಾನ್ಯವಾಗಿ ಎಲ್ಲಾ ರೋಗಗಳು ದೈವನಿರ್ಮಿತವಾದುವೇ. ಆದರೂ 'ದೇವರೋಗ' ವೆಂಬುದೊಂದು ವಿಶೇಷ ರೋಗವೂ ಇದೆ. ಅದನ್ನು ವಾಸಿ ಮಾಡುವುದು ಮಾತ್ರ ಬಹಳ ಕಷ್ಟ. ಈ ಸಾಧುವಿಗೆ ಅದೂ ಸಾಧಿಸಿದೆಯೋ ಏನೊ. ಮೆದುಳಿನಲ್ಲಿ ಹುಟ್ಟುವ ಕಲ್ಪನೆ ಎಂಬ ಕ್ರಿಮಿಯಿಂದಲೇ ಈ ರೋಗ ಉತ್ಪನ್ನವಾಗುತ್ತದೆ. ಸಾಧಾರಣವಾದ ಔಷಧಕ್ಕೆ ಅದು ಮಣಿ

ಯುವುದಿಲ್ಲ. ಶಿಲಾಸ್ತಂಭದ ಮೇಲೇರಿ ಕುಳಿತ ಇಂಥ ಸಿದ್ಧರೇ ಅದನ್ನು ಗುಣ ಪಡಿಸಬಲ್ಲರು. ನಿಮಗೆ ಗೊತ್ತಿಲ್ಲವೇ ದಂಡನಾಯಕರೆ? ವಿಜ್ಞಾನಕ್ಕಿಂತ ಪ್ರಭಾವಶಾಲಿಯಾದ ಕೆಲವು ಶಕ್ತಿಗಳೂ ಉಂಟು ಈ ಪ್ರಪಂಚದಲ್ಲಿ!"

"ಯಾವ ಶಕ್ತಿಗಳಯ್ಯಾ ಅವು?"

"ಅಜ್ಞಾನ ಮತ್ತು ಮೂರ್ಖತನ."

ದಂಡನಾಯಕ ಹೇಳಿದ:

"ಇಂಥ ಆಶ್ಚರ್ಯಕಾರಕ ದೃಶ್ಯಗಳನ್ನು ನಾನು ನೋಡಿದ್ದು ಕಡಿಮೆ. ಎಂದಾದರೊಂದು ದಿನ ಯಾರಾದರೊಬ್ಬ ಚತುರ ಲೇಖಕ ಈ ಮಹಾತ್ಮಾ ನಗರದ ಉತ್ಪತ್ತಿಯ ಇತಿಹಾಸ ಬರೆದಾನು. ಆಯಿತು. ನಾವಿನ್ನು ಹೋಗುವಾ. ಸಮಯವಾಯಿತು. ನಾವು ಹೊರಡೋಣವೇ ಸಿದ್ಧನಾಥ? ನಮಸ್ಕಾರ ಹಾಗಾದರೆ. ಎಂದಾದರೂ ನೀನು ಈ ಕಂಬದಿಂದ ಕೆಳಗಿಳಿದರೆ ಕಲ್ಯಾಣಕ್ಕೆ ಬಂದರೆ, ನನ್ನ ಮನೆಗೆ ಬಂದು ಊಟಮಾಡಿ ಹೋಗಲು ಮರೆಯ ಬೇಡ."

ಈ ಮಾತುಗಳನ್ನು ಕೇಳಿದ ಶಿಷ್ಯರು ಅವುಗಳನ್ನು ಎಲ್ಲ ಕಡೆಗೂ ಪ್ರಸಾರ ಮಾಡುತ್ತ ಹೊರಟರು. ಸಾಕ್ಷಾತ್ ಸಾಮ್ರಾಜ್ಯದ ದಂಡನಾಯಕನೇ ಸಿದ್ಧನಾಥನ ದರ್ಶನಕ್ಕೆ ಬಂದು ಆಶೀರ್ವಾದ ಪಡೆದು ಹೋದನಂತೆ! ಶೈವಪಂಥೀಯರು ಈ ವಾರ್ತೆಯನ್ನು ದೂರದೂರದ ವರೆಗೂ ಹರಡಿದರು. ಸಿದ್ಧನಾಥನ ಕೀರ್ತಿ ದ್ವಿಗುಣಿತವಾಯಿತು. ಜನತೆಯ ಬೇರೆ ಬೇರೆ ಭಾವನೆಗಳಿಗನುಸಾರವಾಗಿ ಈ ವಿಷಯ ಅನೇಕ ರೂಪಗಳಲ್ಲಿ ಪರಿವರ್ತಿತವಾಗಿ ಪೂಜಿಸಲ್ಪಡತೊಡಗಿತು.

ಶಿಲಾಸ್ತಂಭದ ಸಿದ್ಧನಾಥ ಮಹಾಯೋಗಿ, ಕಲ್ಯಾಣದ ದಂಡನಾಯಕನಿಗೆ ಶೈವದೀಕ್ಷೆ ಕೊಟ್ಟಿರುವನೆಂದೂ ಸುದ್ದಿಯಾಯಿತು. ದಂಡನಾಯಕನ ಕೊನೆಯ ಮಾತುಗಳಿಗೆ ಸಾಂಕೇತಿಕ ಅರ್ಥವನ್ನಿತ್ತು, ಆತನ ಆಮಂತ್ರಣವೆಂದರೆ ಶೈವಪಂಥೀಯರ ವಿಶೇಷೋತ್ಸವದ ಆಮಂತ್ರಣವೆಂದೇ ಸಾರಲಾಯಿತು. ಈ ಕಥೆ ಅನೇಕ ಅದ್ಭುತ ಘಟನೆಗಳಿಂದ ಬಣ್ಣ ತಳೆಯಿತು. ವಾದ ವಿವಾದ, ತರ್ಕ ವಿತರ್ಕಗಳ ತರುವಾಯ ದಂಡನಾಯಕ ಧರ್ಮದೀಕ್ಷೆ ವಹಿಸಿದಾಗ

ಆಕಾಶದಿಂದ ದೇವದೂತನೊಬ್ಬ ಇಳಿದು ಬಂದು ಅವನ ಹಣೆಯ ಮೇಲಿನ ಬೆವರನ್ನೊರೆಸಿದನೆಂದು ಹೇಳಲಾಯಿತು. ದಂಡನಾಯಕನ ಜೊತೆಯಲ್ಲಿ ಬಂದಿದ್ದ ಅವನ ಅನುಚರರೆಲ್ಲರೂ ಶೈವದೀಕ್ಷೆ ವಹಿಸಿದರೆಂದೂ ಹೇಳಲಾಯಿತು. ಈ ಅದ್ಭುತ ಕಥೆ ಹರಡಿದಂತೆಲ್ಲ ಅದರ ಬಗ್ಗೆ ಕಾವ್ಯಗಳನ್ನು ರಚಿಸಲಾಯಿತು. ಅಂದಿನಿಂದ ಇಡಿಯ ಭರತವರ್ಷವೆಲ್ಲವೂ ಸಿದ್ಧನಾಥನ ಕಡೆ ಪೂಜ್ಯಭಾವದಿಂದ ನೋಡತೊಡಗಿತು. ಉತ್ತರ ದಕ್ಷಿಣಗಳ ದೊಡ್ಡ ದೊಡ್ಡ ರಾಜ ಮಹಾರಾಜರೆಲ್ಲರೂ ಅವನ ಬಳಿಗೆ ತಮ್ಮ ಸಚಿವರನ್ನು ಕಳಿಸಿ ಆಶೀರ್ವಾದಗಳನ್ನು ಬೇಡಿಕೊಂಡರು.

## ೯

ಒಂದು ರಾತ್ರಿ ಆ ಮಹಾತ್ಮಾ ನಗರವೆಲ್ಲವೂ ನಿದ್ರಿಸುತ್ತಿದ್ದ ವೇಳೆಯಲ್ಲಿ ಸಿದ್ಧನಾಥನಿಗೊಂದು ಧ್ವನಿ ಕೇಳಿಸಿತು:

"ಸಿದ್ಧನಾಥ, ನಿನ್ನ ಅದ್ಭುತ ಕೃತಿಗಳಿಂದಾಗಿ ನೀನು ಪ್ರಸಿದ್ಧನಾದೆ. ನಿನ್ನ ಶಬ್ದಗಳಿಗೆ ಪ್ರಚಂಡ ಸಾಮರ್ಥ್ಯ ಬಂದಿದೆ. ತನ್ನ ಯಶೋವಿಸ್ತಾರಕ್ಕೆಂದೇ ಭಗವಂತ ನಿನ್ನನ್ನು ಇಂಥ ಎತ್ತರಕ್ಕೇರಿಸಿದ್ದಾನೆ. ಅದ್ಭುತ ಕಾರ್ಯಗಳನ್ನು ನೆರವೇರಿಸಲು, ರೋಗಿಗಳನ್ನು ಗುಣಪಡಿಸಲು, ಪಾಖಂಡಿಗಳಿಗೆ ದೀಕ್ಷೆಕೊಡಲು, ಅಜ್ಞಾನಿಗಳಿಗೆ ಜ್ಞಾನ ನೀಡಲು, ಲೋಕದಲ್ಲಿ ಧರ್ಮದ ಸುಖಶಾಂತಿಗಳನ್ನು ಸ್ಥಾಪಿಸಲು ದೇವರು ನಿನ್ನನ್ನು ನೇಮಿಸಿದ್ದಾನೆ."

"ಪರಮಾತ್ಮನ ಇಚ್ಛೆ ಪೂರ್ಣಗೊಳ್ಳುವುದು." ಎಂದ ಸಿದ್ಧನಾಥ.

ಧ್ವನಿ ಮತ್ತೆ ಹೇಳಿತು: "ಎದ್ದೇಳು ಸಿದ್ಧನಾಥ. ನಿನ್ನ ಮಹಾ ಕರ್ತವ್ಯವೊಂದು ಕಾದಿದೆ. ಕಲ್ಯಾಣದ ಚಕ್ರವರ್ತಿಗೆ ಶೈವದೀಕ್ಷೆ ಕೊಡು. ಏಳು, ನಗರದ ಮಹಾದ್ವಾರಗಳು ನಿನಗಾಗಿ ತೆರೆಯುವವು. ಅರಮನೆಯ ಅಂಗಳದಲ್ಲಿ ನಿನ್ನ ಪಾದಧ್ವನಿ ಪ್ರತಿಧ್ವನಿಸುವುದು. ಚಕ್ರವರ್ತಿಯ ಸಿಂಹಾಸನವೂ ನಿನ್ನೆದುರು ನಡುಗುವುದು. ನಿನ್ನ ಶಕ್ತಿವಂತ ಸ್ವರ ಚಕ್ರವರ್ತಿಯ ಹೃದಯವನ್ನು ಪರಿವರ್ತನಗೊಳಿಸುವುದು. ನಮ್ಮೊ ಶಾಂತ-ಪ್ರಭಾವ ಪೂರ್ಣ ಧರ್ಮದ ಮೇಲೆ ನಿನ್ನ ಅಧಿಕಾರ ನಡೆಯುವುದು. ಆತ್ಮವು ಶರೀರದ ಮೇಲೆ ರಾಜ್ಯ ನಡಸುವ ಹಾಗೆ ಧರ್ಮವು ಸಾಮ್ರಾಜ್ಯದ ಮೇಲೆ ಅಧಿಕಾರ ನಡಸುವುದು. ರಾಜ್ಯಾಧಿಕಾರಿಗಳು ಧನಿಕರು ಸಚಿವರೇ ಮೊದಲಾದವರಿಗಿಂತ ನಿನ್ನ ದರ್ಜೆ ಹೆಚ್ಚಿನದಾಗುವುದು. ಜನತೆಯ ಲೋಭ-ಲಾಲಸೆಗಳನ್ನೂ ಬರ್ಬರರ ಅಮಾನುಷತೆಯನ್ನೂ ನೀನು ನಿಲ್ಲಿಸಿಬಿಡುವೆ. ವೃದ್ಧ ದಂಡನಾಯಕ ನಿನ್ನನ್ನು ಪೂಜಿಸಿ ನಿನ್ನ ಚರಣಗಳನ್ನು ತೊಳೆಯುವನು. ನಿನ್ನ ಮೃತ್ಯುವಿನ ತರುವಾಯ ನಿನ್ನ ಅಂಗವಸ್ತ್ರ, ಒಬ್ಬ ಮಹಾತ್ಮನ ಸ್ಮೃತಿ ಚಿಹ್ನವೆಂದು ಪೂಜಿಸಲ್ಪಡುವುದು. ಏಳು ಸಿದ್ಧನಾಥ!"

"ಪರಮಾತ್ಮನ ಇಚ್ಛೆ ಪೂರ್ಣಗೊಳ್ಳುವುದು" ಎಂದ ಸಿದ್ಧನಾಥ.

ಆತ ಎದ್ದು, ಸ್ತಂಭದಿಂದಿಳಿಯುವ ಸಿದ್ಧತೆಗೆ ತೊಡಗಿದ.

ಧ್ವನಿಯೆಂದಿತು: "ಇಳಿಯಲು ಏಣಿಯನ್ನುಪಯೋಗಿಸಬೇಡ. ಹಾಗೆ ಮಾಡುವುದೆಂದರೆ ಸಾಮಾನ್ಯ ವ್ಯಕ್ತಿಗಳಂತೆ ಆಚರಿಸಿದಂತಾಗುವುದು. ನಿನ್ನ ಪ್ರತಿಭೆಗೆ ಅದು ಯೋಗ್ಯವಲ್ಲ. ದೇವರ ಕೃಪೆಗೆ ಪಾತ್ರನಾದ ಮಹಾ ತಪಸ್ವಿ ನೀನು. ನಿನ್ನ ನಿಜವಾದ ಸಾಮರ್ಥ್ಯವೇನೆಂದು ಸರಿಯಾಗಿ ತಿಳಿದುಕೋ. ನಿನ್ನಂಥ ಅದ್ಭುತ ವ್ಯಕ್ತಿ ಗಾಳಿಯಲ್ಲಿ ಹಾರಾಡಬೇಕು. ಸ್ತಂಭದಿಂದ ಜಿಗಿದು ಬಿಡು. ದೇವದೂತರು ನಿನ್ನನ್ನು ರಕ್ಷಿಸುವರು."

ಸಿದ್ಧನಾಥನೆಂದ: "ಆಕಾಶದಲ್ಲಿ ಪರಮಾತ್ಮನ ಇಚ್ಛೆ ನಡೆಯುವಂತೆಯೇ ಭೂಮಿಯ ಮೇಲೂ ನಡೆಯುವುದು."

ತನ್ನ ದೀರ್ಘ ಬಾಹುಗಳನ್ನು ರೋಗಗ್ರಸ್ತ ಪಕ್ಷಿಯೊಂದರ ಛಿದ್ರಮಯ ರೆಕ್ಕೆಗಳಂತೆ ಪಸರಿಸಿ ಆತ ಜಿಗಿಯುವುದರಲ್ಲಿದ್ದಾಗಲೆ ಭೀಕರ ಉಪಹಾಸಕಾರಕ ನಗೆಯೊಂದು ಗಾಳಿಯಲ್ಲಿ ದುಮುದುಮಿಸಿತು.

ಸಿದ್ಧನಾಥ ಹೆದರಿದ, ತನಗೆ ತಾನೆ ಕೇಳಿಕೊಂಡ:

"ಯಾರದು ಹೀಗೆ ನಗುತ್ತಿರುವವರು ?"

ಧ್ವನಿ ಮತ್ತೆ ನಕ್ಕು ಹೇಳಿತು:

"ಇನ್ನೂ ನನ್ನ ಗುರುತು ಸಿಕ್ಕಿಲ್ಲವೇನು ನಿನಗೆ ? ನನ್ನ ನಿನ್ನ ಸ್ನೇಹ ಇಲ್ಲಿಗೇ ಮುಗಿಯುವುದಿಲ್ಲ. ಇಂದಿಲ್ಲ ನಾಳೆಯಾದರೂ ನನ್ನ ನಿನ್ನ ಪರಿಚಯ ಗಾಢವಾದೀತು. ಪ್ರಿಯ ಗೆಳೆಯ, ನಿನ್ನನ್ನು ಈ ಸ್ತಂಭದ ಮೇಲೆ ಹತ್ತಿಸಿದವನೂ ನಾನೇ. ನೀನು ವಿನಯಪೂರ್ವಕವಾಗಿ ನನ್ನ ಆಜ್ಞೆ ಪಾಲಿಸಿದ್ದು ಕಂಡು ಬಹಳ ಸಂತೋಷವಾಯಿತು. ಸಿದ್ಧನಾಥ, ನಿನ್ನ ಮೇಲೆ ನಾನು ಬಹಳ ಪ್ರಸನ್ನನಾಗಿದ್ದೇನೆ."

ಭಯಗ್ರಸ್ತ ಸ್ವರದಲ್ಲಿ ಸಿದ್ಧನಾಥನೆಂದ:

"ನೀನಾರೆಂಬುದು ನನಗೆ ತಿಳಿಯದು. ಮೊದಲು ಇಲ್ಲಿಂದ ಹೊರಟು ಹೋಗು."

"ಹಾ! ಹಾ! ಹಾ! ನಾನಾರೆಂಬುದು ಇನ್ನೂ ತಿಳಿಯಲಿಲ್ಲವೆ !"

"ಈಗ ಗೊತ್ತಾಯಿತು. ದೇವದೂತರ ಮಹಾವೈರಿ ನೀನು. ಸಾಧುಗಳ ತಪಸ್ವಿಗಳ, ಋಷಿಗಳ, ಪುಣ್ಯಾತ್ಮರ ಪರಮಶತ್ರು ನೀನು. ನನಗೂ ವೈರಿಯಾಗಿ ಬಂದೆ." ಎಂದು ಹೇಳಿ ಸಿದ್ಧನಾಥ ನಿರಾಶನಾಗಿ ಮತ್ತೆ ಸ್ತಂಭದ ಮೇಲೆ ಬಿದ್ದುಕೊಂಡು ಯೋಚಿಸತೊಡಗಿದ:

"ಮೊದಲೇ ನಾನೇಕೆ ನಿನ್ನನ್ನು ಗುರುತಿಸಲಿಲ್ಲ? ನನ್ನ ಆತ್ಮಶಕ್ತಿಯಲ್ಲಿ ಶ್ರದ್ಧೆಯಿಟ್ಟುಕೊಂಡಿರುವ ಕುರುಡರು ಕಿವುಡರು ಮೂಕರಿಗಿಂತಲೂ ಕಡಿಮೆ ದರ್ಜೆಯವನು ನಾನು! ದೈವೀ ವಸ್ತುಗಳ ಜ್ಞಾನವೂ ನನಗುಳಿಯಲಿಲ್ಲ. ನೆಲದ ಮೇಲೆ ಹೊರಳಾಡುತ್ತ ಮಣ್ಣು ತೂರುವ, ಶವಗಳೊಡನೆ ಆಟವಾಡುವ ಹುಚ್ಚರಿಗಿಂತಲೂ ಹುಚ್ಚನಾದೆ ನಾನು. ನಾರಕೀಯ ಕೋಲಾಹಲಕ್ಕೂ ಸ್ವರ್ಗೀಯ ಸಂಗೀತಕ್ಕೂ ಇರುವ ಭೇದವನ್ನು ನಾನು ತಿಳಿದುಕೊಳ್ಳಲಿಲ್ಲ. ತಾಯ ಎದೆಯಲ್ಲಿ ಹುದುಗಿಕೊಂಡು ಅಳುವ ನವಜಾತ ಶಿಶುವಿನ ಸ್ವಾಭಾವಿಕ ಬುದ್ಧಿಯೂ ಈಗ ನನ್ನಲ್ಲುಳಿದಿಲ್ಲ. ಯಜಮಾನನ ವಾಸನೆ ಹಿಡಿಯುವ ನಾಯಿಯ ಬುದ್ಧಿ ಕೂಡಾ ನನಗಿಲ್ಲ. ನರಕದ ಭೂತಗಳ ಕೈಗೊಂಬೆಯಾದೆ ನಾನು. ಭೂತಗಳೇ ನನ್ನನ್ನಿಲ್ಲಿಗೆ ಕರೆದು ತಂದವು. ನನ್ನ ಜೊತೆಯಲ್ಲೇ ವಿಲಾಸ ವಿಭ್ರಮಗಳೂ ಈ ಸ್ತಂಭವನ್ನೇರಿ ಬಂದವು. ನನ್ನ ಅಸಂಖ್ಯ ಪ್ರಲೋಭನಗಳೂ ಈಗ ನನಗೆ ತೊಂದರೆ ಕೊಡುವುದಿಲ್ಲ. ಪೂಜ್ಯಪಾದ ಗುರುಮಹಾರಾಜರಿಗೂ ಇದೇ ಬಗೆಯ ಬಿಕ್ಕಟ್ಟು ಬಂದಿತ್ತು. ಈ ಭೂತಗಳ ಕತ್ತಿಗಳು, ದೇವದೂತರೆದುರಿನಲ್ಲೇ ನನ್ನ ಶರೀರವನ್ನು ತುಂಡರಿಸುತ್ತಿವೆ. ನನ್ನೀ ಸಂಕಟದ ಬಗೆಗೂ ನನಗೆ ಪ್ರೀತಿಯುಂಟಾಗಿದೆ. ಆದರೂ ಪರಮಾತ್ಮ ಮೌನದಿಂದಿದ್ದಾನೆ. ಅವನ ಈ ಮೌನ ನನ್ನನ್ನು ಚಕಿತಗೊಳಿಸುತ್ತಿದೆ. ನನ್ನ ಏಕಮಾತ್ರ ಆಧಾರವಾಗಿದ್ದ ಭಗವಂತನೇ ಇಂದು ನನ್ನನ್ನು ತ್ಯಜಿಸುತ್ತಿದ್ದಾನೆ. ನನ್ನನ್ನು ಅನಾಥನನ್ನಾಗಿ ಮಾಡಿ ಎಲ್ಲೋ ಅದೃಶ್ಯನಾಗಿದ್ದಾನೆ. ನನ್ನಿಂದ ದೂರ ದೂರ ಓಡುತ್ತಿರುವ ಆತನನ್ನು ನಾನು ಹಿಂಬಾಲಿಸಿಕೊಂಡು ಹೋಗಬೇಕು. ಈ ಸ್ತಂಭದ ಮೇಲೆ ಬಿದ್ದುಕೊಂಡಿರುವುದರಿಂದೇನು ಪ್ರಯೋಜನ? ಈ ಕಲ್ಲುಗಳೆಲ್ಲಾ ಎದ್ದು, ನನ್ನನ್ನು ನುಂಗಿಬಿಡುವ ಹಾಗೆ ಭಾಸವಾಗುತ್ತಿದೆ. ಸಮಯವನ್ನು ವ್ಯರ್ಥಗೊಳಿಸದೆ ನಾನು ಇಲ್ಲಿಂದ ಹೊರಡಬೇಕು. ಮತ್ತೆ ನನ್ನ ಭಗವಂತನನ್ನು ಹೊಂದಬೇಕು."

ಸ್ತಂಭಕ್ಕಾನಿಸಿಟ್ಟ ಏಣಿಯನ್ನು ಹಿಡಿದು ಆತ ಕೆಳಗಿಳಿದ. ಎದುರಿಗಿದ್ದ ಸ್ತ್ರೀಮುಖ ರಹಸ್ಯಪೂರ್ಣವಾಗಿ ನಗುತ್ತಿತ್ತು. ವಿಶ್ರಾಂತಿಗಾಗಿಯೂ ಯಶಸ್ಸಿಗಾಗಿಯೂ ತಾನು ಆರಿಸಿದ್ದ ಆ ಸ್ಥಳ ವಾಸ್ತವವಾಗಿ ಸಂಕಟ ಮತ್ತು ದುಃಖಗಳ ಸಾಧನವಾಗಿದ್ದಿತೆಂದು ಅವನಿಗೀಗ ಖಾತ್ರಿಯಾಯಿತು. ಆತ ಅವಸರದಿಂದ ನೆಲಕ್ಕಿಳಿದು ಬಂದ. ಕಾಲುಗಳೆರಡೂ ಕಂಪಿಸುತ್ತಿದ್ದುವು. ಆ ಸ್ತಂಭದ ನೆರಳು ತನ್ನ ಮೇಲೆ ಬೀಳುತ್ತಿದ್ದುದನ್ನು ಕಂಡೊಡನೆಯೆ ಆತ ಅಲ್ಲಿಂದ ಪಲಾಯನ ಮಾಡಿದ. ಸುತ್ತಲಿದ್ದ ಜನರೆಲ್ಲ ನಿದ್ರಾಧೀನರಾಗಿದ್ದರು. ಆತ ಅವಸರದಿಂದ ಹೆಜ್ಜೆ ಹಾಕುತ್ತ ಅಂಗಡಿ ಬೀದಿಗಳಲ್ಲಿ ಹಾದು ಬಯಲನ್ನು ದಾಟಿ, ತನ್ನ ಹೆಸರಿನಲ್ಲಿ ನಿರ್ಮಿತವಾಗಿದ್ದ ಆ ನಗರವನ್ನು ತ್ಯಜಿಸಿ ಬೆಟ್ಟಗಳತ್ತ ಧಾವಿಸಿದ. ನಾಯಿಯೊಂದು ಅವನನ್ನು ಕಂಡು ಬಗುಳುತ್ತಾ ಬಂದು ಬಯಲಿನ ಹತ್ತಿರ ನಿಂತುಕೊಂಡಿತು. ಸಿದ್ಧನಾಥ ಹಳ್ಳಿಗಳ ಹತ್ತಿರ ಹಾದು ಹಾಗೇ ನಡೆಯತೊಡಗಿದ.

ಕೊನೆಗೆ, ಹಸಿವು ದಾಹ ಆಯಾಸಗಳಿಂದ ಅರ್ಧ ಮೃತಾವಸ್ಥೆಗಿಳಿದು ಆತ ಒಂದು ನಿರ್ಜನನೀರವ ನಗರದ ಬಳಿ ಬಂದು ನಿಂತುಕೊಂಡ. ಯಾವುದೊ ಯುದ್ಧದ ಕಾಲಕ್ಕೆ ಹಾಳುಬಿದ್ದು ಜನಶೂನ್ಯವಾಗಿದ್ದ ನಗರವದು. ಒಂದು ದಿಕ್ಕಿನಲ್ಲಿ ವಿಸ್ತಾರವಾದ ಸ್ಮಶಾನ ಪಸರಿಸಿತ್ತು. ಆ ಸ್ಮಶಾನದಲ್ಲಿ ಹಾದು ಸಿದ್ಧನಾಥ ಒಂದು ಹಾಳು ದೇಗುಲಕ್ಕೆ ಬಂದು ಅಲ್ಲಿಯೆ ಬಿದ್ದುಕೊಂಡ. ಆ ದೇಗುಲದಲ್ಲಿಯೂ ಒಂದು ಸಮಾಧಿಯಿದ್ದಂತೆ ಕಾಣುತ್ತಿತ್ತು. ಹತ್ತಿರ ಹಾವು ಚೇಳುಗಳು ನಿರ್ಭೀತಿಯಿಂದ ಸಂಚರಿಸುತ್ತಿದ್ದುವು.

ಸಿದ್ಧನಾಥ ದೀರ್ಘವಾಗಿ ಉಸಿರು ಬಿಟ್ಟು ಹೇಳಿಕೊಂಡ: "ಇದೇ ನನಗೆ ಉಪಯುಕ್ತವಾದ ನಿವಾಸಸ್ಥಾನ. ಇಲ್ಲೇ ನಾನು ತಪಸ್ಸು ಮಾಡಬೇಕು, ಪ್ರಾಯಶ್ಚಿತ್ತ ಪಡೆಯಬೇಕು."

ಅಲ್ಲಿನ ಹಾವು ಚೇಳುಗಳನ್ನು ಹೊಡೆದೋಡಿಸಿ ಮಲಗಿಕೊಂಡ ಸಿದ್ಧನಾಥ ಮತ್ತೆ ಹದಿನೆಂಟು ತಾಸುಗಳ ವರೆಗೆ ಏಳಲಿಲ್ಲ. ಅನಂತರ ಎಚ್ಚತ್ತುಕೊಂಡು, ದೇಗುಲದ ಹಿಂಬದಿಯಲ್ಲಿದ್ದ ಬಾವಿಗೆ ಹೋಗಿ ಅಂಜಲಿಯಿಂದ ನೀರು ಕುಡಿದ, ಗಿಡಗಳಿಂದ ಹಣ್ಣು ತೆಗೆದು ಸೇವಿಸಿದ. ಈ ಜೀವನವೇ ಸರ್ವೋತ್ತಮವಾದುದೆಂದು ನಿಶ್ಚಯಿಸಿಕೊಂಡು ಇನ್ನು ಮುಂದೆ ಹಾಗೆಯೇ

ಜೀವಿಸುವುದಾಗಿ ನಿರ್ಧರಿಸಿದ. ಮತ್ತೆ ಬೆಳಗಿನಿಂದ ಸಂಜೆಯವರೆಗೂ ಆತ ದೇಗುಲದ ನೆಲದ ಮೇಲೆ ಬಿದ್ದುಕೊಂಡಿದ್ದ.

ಹೀಗೆ ಮಲಗಿದ್ದಾಗ ಒಂದು ದಿನ ಅಕಸ್ಮಾತ್ತಾಗಿ ಧ್ವನಿಯೊಂದು ಕೇಳ ಬಂದಿತು:

"ವ್ಯರ್ಥವಾಗಿ ಸಮಯವನ್ನೇಕೆ ಹಾಳು ಮಾಡುತ್ತೀಯೆ? ಈ ಚಿತ್ರ ಗಳನ್ನಾದರೂ ನೋಡಿ ಬುದ್ಧಿ ಕಲಿಯಬಾರದೇ?"

ಸಿದ್ಧನಾಥ ಚಕಿತನಾಗಿ ತಲೆಯೆತ್ತಿ ನೋಡಿದ. ಗೋಡೆಗಳ ಮೇಲೆಲ್ಲ ಹಾಸ್ಯಜನಕ ಪರಿಚಿತ ಚಿತ್ರಗಳಿದ್ದುವು. ಪ್ರಾಚೀನ ಕಾಲದ ಅದ್ಭುತ ಕಲಾ ಕೌಶಲ್ಯ ಅವುಗಳಲ್ಲಿ ಎದ್ದು ಕಾಣುತ್ತಿತ್ತು. ಕೆನ್ನೆಗಳನ್ನೂದಿಸಿಕೊಂಡ ಅಡುಗೆ ಯವರು ಬೆಂಕಿಯನ್ನೂದುತ್ತಿದ್ದರು. ಕೆಲವರು ತರಕಾರಿ ಹೆರಚುತ್ತಿದ್ದರು. ಕೆಲವರು ಪಾತ್ರೆಗಳಲ್ಲಿ ಅಡುಗೆ ಮಾಡುತ್ತಿದ್ದರು. ಒಂದು ಕಡೆ ಬೇಟೆಗಾರ ನೊಬ್ಬ ಹರಿಣವೊಂದನ್ನು ಹೊತ್ತು ನಡೆದಿದ್ದ. ಅದರ ಬೆನ್ನಿನಲ್ಲಿ ಬಾಣ ನಟ್ಟಿತ್ತು. ಇನ್ನೊಂದು ಕಡೆ ಒಕ್ಕಲಿಗರು ನೇಗಿಲು ಹೊಡೆಯುತ್ತಿದ್ದರು, ಬೀಜ ಬಿತ್ತುತ್ತಿದ್ದರು. ಇನ್ನೊಂದು ಕಡೆ, ವೀಣೆ, ಕೊಳಲು, ತಂಬೂರಿ ಬಾಜಿಸುತ್ತ ಯುವತಿಯರು ಕುಳಿತಿದ್ದರು. ಇಬ್ಬರು ತರುಣಿಯರು ಅವರೆ ದುರು ನಾಟ್ಯವಾಡುತ್ತಿದ್ದರು. ಯುವತಿಯೊಬ್ಬಳು ವೀಣೆ ನುಡಿಸುತ್ತಿದ್ದಳು. ಆವಳ ದಪ್ಪವಾದ ಕಪ್ಪು ಕೂದಲಲ್ಲಿ ಕಮಲ ಪುಷ್ಪವೊಂದು ಮೆರೆಯುತ್ತಿತ್ತು. ಪಾರದರ್ಶಕ ವಸ್ತ್ರಗಳಲ್ಲಿ ಅವಳ ದೇಹ ಎದ್ದು ಕಾಣುತ್ತಿತ್ತು. ಆವಳ ಸ್ತನಗಳೂ ಮುಖವೂ ಪುಷ್ಪಗಳನ್ನು ಹೋಲುವಂತಿದ್ದುವು. ಒಂದು ಕಡೆ ಬಾಗಿದ್ದ ಅವಳ ಮುಖದಲ್ಲಿನ ಸುಂದರ ನೇತ್ರಗಳು ಯಾವುದೋ ವಸ್ತುವನ್ನು ಕುತೂಹಲದಿಂದ ನೋಡುತ್ತಿದ್ದುವು. ಅವಳ ಆಕೃತಿ ಅತ್ಯಂತ ಸುಂದರವಾಗಿತ್ತು.

ಚಿತ್ರದ ಲಾವಣ್ಯವತಿಯನ್ನು ನೋಡಿ ಮುಗಿಸಿದ ಬಳಿಕ ಸಿದ್ಧನಾಥ, ತನ್ನೊಡನೆ ಮಾತನಾಡಿದ ಧ್ವನಿಯನ್ನುದ್ದೇಶಿಸಿ ಹೇಳಿದ:

"ಚಿತ್ರಗಳನ್ನು ನೋಡೆಂದು ನೀನು ನನಗೇಕೆ ಹೇಳುತ್ತಿದ್ದೀಯೆ? ದೇವ ರನ್ನು ಮರೆತು ಶಾರೀರಿಕ ಸುಖವೇ ಮಹಾಸುಖವೆಂದು ಭ್ರಮಿಸಿ ಪಾಪ ಕುಂಡದಲ್ಲಿ ಮುಳುಗಿ ಸತ್ತುಹೋದ ಧರ್ಮವಿರೋಧಿಗಳ ಕಾಲದ ಚಿತ್ರಗಳಿವು. ನನ್ನ ಕಾಲ ಕೆಳಗಿರುವ ಸಮಾಧಿಯಲ್ಲೂ ಇಂಥಾ ಪಾಪಿಯೊಬ್ಬನ ದೇಹ

ಕೊಳೆಯುತ್ತಾ ಬಿದ್ದಿರಬಹುದು. ಅಂಥವರ ನೆನಪು ಮಾಡಿಕೊಡುವ ಈ ಚಿತ್ರಗಳು ಚಿತ್ರವಿಚಿತ್ರವಾಗಿರುವುದೂ ಸಹಜವೇ. ಆದರೂ ಇದು ಕೇವಲ ಛಾಯೆ. ಮೃತರ ಜೀವನ.....ಅವರ ವ್ಯರ್ಥ ಅಹಂಕಾರ....."

ಧ್ವನಿ ಉತ್ತರವಿತ್ತಿತು: "ಸಮಾಧಿಯಲ್ಲಿರುವ ಆ ವ್ಯಕ್ತಿ ಮೃತನಾಗಿರುವುದೇನೊ ನಿಜ. ಆದರೆ ಅವನ ಜೀವನ ಸಫಲವಾಗಿತ್ತು. ನೀನೂ ಇಂದಿಲ್ಲ ನಾಳೆ ಸಾಯುವವನೆ. ನಿನ್ನ ಜೊತೆಯಲ್ಲೇ ನಿನ್ನ ಹೆಸರೂ ಸಾಯುವುದು."

ಅಂದಿನಿಂದ ಸಿದ್ಧನಾಥನಿಗೆ ಒಂದುಕ್ಷಣವೂ ಶಾಂತಿ ಲಭಿಸದಂತಾಯಿತು. ಆ ಧ್ವನಿ ಮತ್ತೆ ಮತ್ತೆ ಮಾತನಾಡುತ್ತಲೇ ಇತ್ತು. ಆ ವೀಣಾವಾದಿನಿ ಉದ್ದವಾದ ಕಣ್ಣೆವೆಗಳನ್ನು ಕದಲಿಸದೆ ಅವನನ್ನೇ ದೃಷ್ಟಿಸುತ್ತಿದ್ದಳು. ಆಗಾಗ ಮೋಹಕವಾದ ನಗು ತುಳುಕಿಸುತ್ತ ಅವಳು ಹೇಳುವಳು:

"ನೋಡು, ನಾನೆಷ್ಟು ರಹಸ್ಯಮಯಿಯಾಗಿದೇನೆ! ಎಷ್ಟು ಸುಂದರಿಯಾಗಿದೇನೆ! ನನ್ನನ್ನು ಪ್ರೀತಿಸಬಾರದೇಕೆ? ನಿನ್ನನ್ನು ಪೀಡಿಸುತ್ತಿರುವ ಪ್ರೇಮವನ್ನು ನನ್ನ ಆಲಿಂಗನದಲ್ಲಿ ಶಾಂತಗೊಳಿಸಬಾರದೇಕೆ? ನೀನು ಅಂಜುವುದಾದರೂ ಏಕೆ? ನನ್ನಿಂದ ತಪ್ಪಿಸಿಕೊಂಡು ನೀನೆಂದೂ ಓಡಿಹೋಗಲಾರೆ. ಲೋಕದ ಸಮಸ್ತ ಸ್ತ್ರೀಯರ ಸೌಂದರ್ಯವೇ ನಾನು! ಹುಚ್ಚಾ, ಎತ್ತ ಓಡಿಹೋಗುವವ ನೀನು? ಎಲ್ಲಿ ಹೋದರೂ ನಾನು ನಿನಗೆ ಕಾಣಿಸಿಕೊಳ್ಳುವವಳೇ. ಹೂವುಗಳ ಸೌಂದರ್ಯದಲ್ಲಿ, ಹಣ್ಣುಗಳ ಶೋಭೆಯಲ್ಲಿ, ಪಾರಿವಾಳಗಳ ಹಾರಾಟದಲ್ಲಿ, ಹರಿಣಗಳ ನೆಗೆತದಲ್ಲಿ, ಝರಿಗಳ ನೀರಿನ ಲಹರಿಯಲ್ಲಿ, ಚಂದ್ರನ ಮಂದ ಪ್ರಕಾಶದಲ್ಲಿ, ಎಲ್ಲೆಲ್ಲೂ ನಾನಿದ್ದೇನೆ. ಸ್ವತಃ ನೀನೇ ಕಣ್ಣು ಮುಚ್ಚಿಕೊಂಡು ನೋಡಿದಿಯಾದರೆ ನಿನ್ನಲ್ಲೂ ನಾನಿರುವುದು ಕಾಣಿಸೀತು. ಇಲ್ಲಿ, ಶಿಲೆಗಳ ಅಡಿಯಲ್ಲಿ ಬಿದ್ದುಕೊಂಡಿರುವ ಈ ಮನುಷ್ಯ ಸಾವಿರಾರು ವರ್ಷಗಳ ಹಿಂದೆ ನನ್ನನ್ನು ಎದೆಗೊತ್ತಿಕೊಂಡಿದ್ದ. ಸಾವಿರಾರು ವರ್ಷಗಳ ಹಿಂದೆ ಆತ ನನ್ನನ್ನು ಕೊನೆಯ ಬಾರಿಗೆ ಚುಂಬಿಸಿದ್ದ. ಇದುವರೆಗೂ ಅವನ ಅನಂತ ನಿದ್ರೆ ನನ್ನ ಚುಂಬನದ ಸುಗಂಧದಿಂದ ಸುವಾಸಿತವಾಗಿದೆ. ಸಿದ್ಧನಾಥ, ನೀನು ನನ್ನನ್ನು ಚೆನ್ನಾಗಿ ಬಲ್ಲೆ. ಆದರೂ ನನ್ನನ್ನೇಕೆ ಗುರುತಿಸಲೊಲ್ಲೆ? ನಾನಾರೆಂಬುದು ಗೊತ್ತಾಗಲಿಲ್ಲವೆ? ಮುಕ್ತಾದೇವಿಯ ಅಸಂಖ್ಯ ಅವತಾರಗಳಲ್ಲಿ ನಾನೊಬ್ಬಳು. ನೀನೊಬ್ಬ ವಿದ್ವಾಂಸ, ಜ್ಞಾನಿ, ಸಾಧು.

ನೀನು ಯಾತ್ರೆಗಳನ್ನು ಮಾಡಿರುವೆ. ಅವುಗಳಿಂದಲೂ ಸಾಕಷ್ಟು ಜ್ಞಾನಪಡೆದಿರುವೆ. ಮನೆಯಲ್ಲಿ ಕಳೆದ ಹತ್ತು ವರ್ಷಗಳಲ್ಲಾಗದಂಥ ಚಮತ್ಕಾರಗಳು ಯಾತ್ರಾ ಕಾಲದಲ್ಲಿ ಒಂದೇ ಒಂದು ದಿನದಲ್ಲೂ ಸಂಭವಿಸುವುದುಂಟು. ಎಷ್ಟೋ ಸಹಸ್ರ ವರ್ಷಗಳ ಹಿಂದೆಯೆ ಮುಕ್ತಾ ಶಕುಂತಲೆಯಾಗಿ ಜನ್ಮ ತಳೆದಿದ್ದಳೆಂದು ನಿನಗೆ ಗೊತ್ತಿದೆಯೊ ಇಲ್ಲವೊ. ರಾಮಾಯಣದ ಸೀತೆಯೂ ಇವಳೇ. ಭಾರತದ ದ್ರೌಪದಿಯೂ ಇವಳೇ. ನಾನೂ ಅವಳ ಅವತಾರವೇ ಆಗಿದ್ದೇನೆ. ನಿನಗೇಕೆ ತಿಳಿಯುತ್ತಿಲ್ಲ ಈ ವಿಷಯ? ಲೋಕದ ಅನೇಕ ಪಾಪಗಳು ನನಗಾಗಿ ನಡೆದಿವೆ. ನಾನೂ ಅನೇಕ ಪಾಪಗಳಲ್ಲಿ ಭಾಗ ವಹಿಸಿದ್ದೇನೆ. ಈಗ ನಾನು ಕೇವಲ ಛಾಯಾಮೂರ್ತಿಯಾಗಿ ಉಳಿದಿರುವೆನಾದರೂ ನಿನ್ನ ಪಾಪಗಳಲ್ಲೂ ಭಾಗ ವಹಿಸುವ ಶಕ್ತಿ ನನಗುಂಟು. ಆಶ್ಚರ್ಯವಾಗುವುದೇನು ನಿನಗೆ? ನನ್ನ ಸಹವಾಸ ಬೇಡವೆಂದು ಓಡಿಹೋಗಬಯಸುವೆಯಾ? ನೀನೆಲ್ಲಿಗೆ ಹೋದರೂ ಮುಕ್ತಾ ನಿನ್ನ ಬೆನ್ನು ಬಿಡುವುದಿಲ್ಲವೆಂದು ತಿಳಿದುಕೋ."

ಸಿದ್ಧನಾಥ ಶಿಲೆಯ ಮೇಲೆ ಹಣೆ ಚೆಲ್ಲಿ ಭೀತಿಯಿಂದ ಚೀರಿಕೊಂಡ. ಪ್ರತಿ ರಾತ್ರಿಯೂ ಆ ವೀಣಾವಾದಿನಿ ಗೋಡೆಯಿಂದಿಳಿದು ಅವನ ಬಳಿ ಬಂದು ಸ್ಪಷ್ಟ ಶಬ್ದಗಳಲ್ಲಿ ಮಾತನಾಡುತ್ತಿದ್ದಳು. ಅವಳ ಶೀತಲ ಶ್ವಾಸವೂ ಅವನ ಮುಖದ ಮೇಲೆ ಬೀಳುತ್ತಿತ್ತು. ಅವಳ ಪ್ರಲೋಭನಗಳನ್ನು ಸಿದ್ಧನಾಥ ಬಾರಿ ಬಾರಿಗೂ ತಿರಸ್ಕರಿಸಿದ. ಆದರೂ ಆಕೆ, ಮತ್ತೆ ಮತ್ತೆ ಆಗ್ರಹಪಡಿತ್ತಲೇ ಇದ್ದಳು.

"ನನ್ನನ್ನು ಪ್ರೀತಿಸು, ನನ್ನನ್ನು ಮನ್ನಿಸು, ನನ್ನನ್ನು ಚುಂಬಿಸು. ಪ್ರಿಯ ಮಿತ್ರಾ, ನನ್ನಿಂದ ನೀನು ದೂರವಿರುವಷ್ಟು ಕಾಲವೂ ನಾನು ನಿನಗೆ ತೊಂದರೆ ಕೊಡುತ್ತಲೇ ಇರುವೆ. ಮೃತ ಸ್ತ್ರೀಯರ ಧೈರ್ಯವೆಷ್ಟೆಂಬುದನ್ನು ನೀನಿನ್ನೂ ತಿಳಿದಿಲ್ಲ. ಅಗತ್ಯವೆನಿಸಿದಲ್ಲಿ ನಿನ್ನ ಅಂತ್ಯ ಕಾಲದ ವರೆಗೂ ನಾನು ಪ್ರತೀಕ್ಷೆ ಮಾಡುತ್ತಿರುವೆ. ನಾನು ಮಾಟಗಾತಿ. ಮನಸು ಮಾಡಿದರೆ ಇಂದೇ, ಈ ಕ್ಷಣವೇ ನಿನ್ನನ್ನು ಬಲವಂತದಿಂದ ವಶಪಡಿಸಿಕೊಳ್ಳಬಲ್ಲೆ. ನಿನ್ನ ಮೃತ್ಯುವಿನ ತರುವಾಯವೂ ನಿನ್ನ ಮೃತ ದೇಹದಲ್ಲಿ ಶಕ್ತಿಯನ್ನು ತುಂಬ ಬಲ್ಲೆ. ನನ್ನಿಂದ ಪುನರ್ಜೀವಿತವಾದ ನಿನ್ನ ದೇಹವೇ ನನ್ನ ಬಯಕೆಯನ್ನು ಪೂರ್ಣಗೊಳಿಸುವುದು. ಅಂಥ ಶಕ್ತಿ ನನ್ನಲ್ಲಿದ್ದರೂ ಈಗ ನಾನು ನಿನ್ನನ್ನು ವ್ಯರ್ಥವಾಗಿ ಬೇಡಿ

ಕೊಳ್ಳುತ್ತಿದ್ದೇನೆ. ಸಿದ್ಧನಾಥ, ವಿಚಾರ ಮಾಡು. ನೀನು ಸತ್ತ ಬಳಿಕ ನಿನ್ನ ದೇಹ ಪಾಪಾಚರಣೆಯಲ್ಲಿ ತೊಡಗಿದ್ದುದನ್ನು ಕಂಡು ಆಕಾಶದಲ್ಲಿರುವ ನಿನ್ನ ಆತ್ಮ ಎಷ್ಟು ವ್ಯಾಕುಲಗೊಂಡೀತು! ಅದನ್ನು ನೋಡಿ ನಿನ್ನ ಪರಮಾತ್ಮನೂ ಗಾಬರಿಗೊಳ್ಳಬಹುದು. ಈ ಪೀಕಲಾಟದ ಬಗ್ಗೆ ನೀನು ವಿಚಾರ ಮಾಡಿಲ್ಲ, ನಿನ್ನ ಪರಮಾತ್ಮನೂ ಮಾಡಿಲ್ಲ. ನಾನು ಹೇಳಲೇ? ಭಗವಂತ ಅಷ್ಟೇನೂ ವಿವೇಕಶಾಲಿಯಾಗಿಲ್ಲ. ನನ್ನಂಥ ಒಬ್ಬ ಸಾಧಾರಣ ಮಾಟಗಾತಿಯೂ ಅವನನ್ನು ಪೀಡಿಸಬಲ್ಲಳು. ಅವನ ಹತ್ತಿರ ಮಿಂಚು ಸಿಡಲಿನ ಆಯುಧಗಳಿರದಿದ್ದ ಪಕ್ಷಕ್ಕೆ ಹಳ್ಳಿಯ ಹುಡುಗರು ಕೂಡಾ ಅವನನ್ನು ಹಿಡಿದೆಳೆದು ಅವನ ಗಡ್ಡ ಮೀಸೆ ಕೀಳಬಹುದಾಗಿತ್ತು. ವಾಸ್ತವವಾಗಿ ಆತ ಅಷ್ಟು ಚತುರನೂ ಅಲ್ಲ. ಆವನ ವಿರೋಧಿಯಾದ ಭೂತರಾಜ ಮಾತ್ರ ತುಂಬ ಚಪಲನಾಗಿದ್ದಾನೆ. ಭೂತರಾಜನ ರಾಣಿಯೇ ನಾನು. ಅವನ ಪ್ರಬಲಾಸ್ತ್ರವಾದ ಸರ್ಪದ ಆಕೃತಿಯೇ ನನ್ನದು. ಹಾವಿನಂತೆಯೆ ವಕ್ರವಕ್ರವಾದ ನುಣುಪಾದ ದೇಹ ನನಗಿದೆ. ನನ್ನ ತಲೆಗೂದಲೆಂದರೆ ಹಾವಿನ ಪ್ರತೀಕವೇ ಸರಿ. ಭೂತರಾಜನ ಈ ಮುಖ್ಯ ಸೇವಕರನ್ನು ನೀನು ಬಹಳ ದಿನಗಳಿಂದ ಅವಮಾನಿಸುತ್ತ ಬಂದಿದ್ದೀಯೆ. ನೀನು ಈ ದೇಗುಲಕ್ಕೆ ಬರುತ್ತಲೂ ಮೊತ್ತಮೊದಲು ಇಲ್ಲಿನ ಹಾವುಗಳನ್ನೆಲ್ಲ ಓಡಿಸಿಬಿಟ್ಟೆ. ಅವುಗಳ ಮೊಟ್ಟೆಗಳನ್ನು ತುಳಿದು ಒಡೆದೆಸೆದೆ. ಅವುಗಳೆಲ್ಲಾ ನನ್ನ ಪರಿವಾರಕ್ಕೆ ಸೇರಿದವುಗಳೆಂಬುದು ನಿನಗೆ ಹೊಳೆಯಲಿಲ್ಲ. ಪ್ರಿಯ ಮಿತ್ರಾ, ನೀನು ದೊಡ್ಡದೊಂದು ವಿಪತ್ತಿನಲ್ಲಿ ಸಿಲುಕಿಕೊಂಡಿದ್ದೀಯೆ. ಈಗ ನಿನ್ನ ಭಗವಂತ ಬಂದು ನಿನ್ನನ್ನುಳಿಸಲಾರ. ಕಲೆ ಸೌಂದರ್ಯ ಎರಡನ್ನೂ ನೀನು ತಿರಸ್ಕರಿಸಿದ್ದೀಯೆ. ಈಗ ದೇವರು ನಿನಗೇನೂ ಸಹಾಯ ಮಾಡಲಾರ. ಅವನು ಇಲ್ಲಿಗೆ ಬರುವುದು ಅಸಂಭವವೇ ಸರಿ. ಎಲ್ಲಾ ವಸ್ತುಗಳ ಹಾಗೇ ಅವನ ಆಕಾರವೂ ಉಂಟು. ಆತ ಕೊಂಚವಾದರೂ ಅಲುಗಾಡಿದರೆ ಸಮಸ್ತ ಸೃಷ್ಟಿಯೇ ಧ್ವಂಸವಾದೀತು."

ಮಂತ್ರ ತಂತ್ರಗಳು ಸಿದ್ಧನಾಥನಿಗೆ ಅಪರಿಚಿತವಾದವುಗಳೇನೂ ಆಗಿರಲಿಲ್ಲ. ಭಯಂಕರ ನಿರಾಸೆಯಿಂದ ಆತ ಯೋಚಿಸಿದ: "ನನ್ನ ಕಾಲ ಕೆಳಗೆ, ನೆಲದಲ್ಲಿನ ಸಮಾಧಿಯಲ್ಲಿ ಮಲಗಿರುವ ಮೃತವ್ಯಕ್ತಿ ಮಂತ್ರವಾದಿಯಾಗಿದ್ದರೂ ಇರಬಹುದು. ಮಂತ್ರಗಳ ಬಲದಿಂದ ಮೃತವ್ಯಕ್ತಿಗಳು ತಮ್ಮ ಪೂರ್ವಾಕೃತಿ

ಗಳನ್ನು ಮತ್ತೆ ತಂದುಕೊಳ್ಳಬಲ್ಲರು. ಸೂರ್ಯನ ಪ್ರಕಾಶವನ್ನೂ ರಮಣಿಯರ ವಿಲಾಸವನ್ನೂ ಮತ್ತೆ ನೋಡಬಲ್ಲರು."

ಆ ಮೃತವ್ಯಕ್ತಿ, ಆ ವೀಣಾವಾದಿನಿಯನ್ನು ಆಲಿಂಗಿಸಿಕೊಳ್ಳುವ ದೃಶ್ಯ ತನಗೆ ಕಾಣಿಸುವುದೊ ಏನೊ ಎಂದು ಅವನಿಗೆ ಭಯವಾಯಿತು. ಚುಂಬನಗಳ ಸೂಕ್ಷ್ಮರವ ಆಗಾಗ ಕೇಳಿಸಿದಂತೆಯೂ ಅವನಿಗೆ ಭಾಸವಾಯಿತು.

ಅವನ ನಾಲ್ಕು ಕಡೆಗಳಲ್ಲೂ ವಿಪತ್ತುಗಳೇ ನಿಂತುಕೊಂಡಿದ್ದುವು. ಭಗವಂತನ ಅಸ್ತಿತ್ವದ ಅಭಾವದಿಂದಾಗಿ ಆತ ಚಿಂತನೆ ಮಾಡುವುದೂ ಕಷ್ಟಕರವಾಗಿತ್ತು. ಕಣ್ತೆರೆದು ಸುತ್ತಲೂ ದೃಷ್ಟಿ ಹೊರಳಿಸುವುದಕ್ಕೂ ಆತ ಹಿಂಜರಿಯತೊಡಗಿದ್ದ.

ಎಂದಿನಂತೆ ಒಂದು ದಿನ ಆತ ನೆಲದ ಮೇಲೆ ಬಿದ್ದುಕೊಂಡಿದ್ದಾಗ ಅಜ್ಞಾತ ಸ್ವರವೊಂದು ಹೇಳಿತು:

"ಸಿದ್ಧನಾಥ, ನೀನು ತಿಳಿದಿರುವುದಕ್ಕಿಂತಲೂ ಹೆಚ್ಚು ಪ್ರಾಣಿಗಳು ಪ್ರಪಂಚದಲ್ಲುಂಟು. ನಾನು ನೋಡಿರುವುದನ್ನೆಲ್ಲಾ ನಿನಗೆ ತೋರಿಸಿದರೆ ನೀನು ಭೀತಿಯಿಂದ ಸತ್ತುಹೋಗಬಹುದು. ಹಣೆಯಲ್ಲಿ ಒಂದೇ ಒಂದು ಕಣ್ಣಿರುವ ಎಷ್ಟೋ ಪ್ರಾಣಿಗಳೂ ಉಂಟು. ನಡೆಯುವ ಬದಲು ನೆಗೆಯುತ್ತ ಹೋಗುವ ಒಂದೇ ಕಾಲಿನ ಮನುಷ್ಯರುಂಟು. ಪುರುಷರಾಗಿ ಪರಿವರ್ತಿತವಾಗುವ ಸ್ತ್ರೀಯರುಂಟು, ಸ್ತ್ರೀಯರಾಗುವ ಪುರುಷರುಂಟು. ಗಿಡದ ಹಾಗಿರುವ ಪುರುಷರೂ ಇದ್ದಾರೆ, ಅವರ ಬೇರುಗಳು ಪೃಥ್ವಿಯಲ್ಲಿ ಬೆಳೆಯುತ್ತವೆ. ತಲೆಯಿಲ್ಲದ ವ್ಯಕ್ತಿಗಳಾಗಿದ್ದಾರೆ, ಅವರಿಗೆ ಎರಡು ಕಣ್ಣುಗಳಿವೆ, ಒಂದು ಮೂಗೂ ಇದೆ, ಎದೆಯ ಮೇಲೆ ಮುಖವಿದೆ. ಇವರಿಗಾಗಿ ದೇವರು ಏನು ಮಾಡಿದ್ದಾನೆ ? ಹೇಳಬಲ್ಲೆಯಾ ?"

ಸಿದ್ಧನಾಥ ಏನನ್ನು ಹೇಳಬಲ್ಲ ? ಆತ ಮೌನವಾಗಿಯೇ ಉಳಿದ.

ಒಂದು ರಾತ್ರೆ ಅವನಿಗೊಂದು ಕನಸು ಬಿತ್ತು. ತೀವ್ರ ಪ್ರಕಾಶದಲ್ಲಿ ಹೊಳೆಯುತ್ತಿದ್ದ ಉದ್ದನೆಯ ಬೀದಿಗಳೂ, ಕಾಲುವೆಗಳೂ, ಉದ್ಯಾನಗಳೂ ಕಾಣಿಸಿಕೊಂಡುವು. ಬೀದಿಯಲ್ಲಿ ರಾಜಕುಮಾರರು ಕುದುರೆಸವಾರಿ ಮಾಡುತ್ತಿದ್ದರು. ಅವರ ಮುಖದ ಮೇಲೆ ಉಲ್ಲಾಸ ತುಂಬಿ ತುಳುಕುತ್ತಿತ್ತು. ಒಂದು ಮನೆಯೆದುರು ಕಾಲಿದಾಸ ತನ್ನ ಕವಿತೆಗಳನ್ನೋದುತ್ತ ಕುಳಿತಿದ್ದ.

ಅವನ ಸ್ವರದಲ್ಲಿ ಸಂತೋಷಭರಿತ ಗರ್ವ ತುಂಬಿಕೊಂಡಿತ್ತು, ಕಣ್ಣುಗಳಲ್ಲಿ ಮದ ಕಾಣಿಸಿಕೊಂಡಿತ್ತು. ಉದ್ಯಾನವನದಲ್ಲೊಬ್ಬ ಪುರುಷ ಹಣ್ಣುಗಳನ್ನು ಒಂದುಗೂಡಿಸುತ್ತಿದ್ದ. ಋಷಿಯೊಬ್ಬ ಒಂದು ವೃಕ್ಷದಡಿಯಲ್ಲಿ ಕುಳಿತು ಧ್ಯಾನ ಮಾಡುತ್ತಿದ್ದ. ಕಾಲುವೆಯ ತೀರದಲ್ಲಿ ಕುಳಿತಿದ್ದ ಮಾಧವರಸ ನಕ್ಷತ್ರಗಳ ಚಲನೆಯನ್ನು ಕುರಿತು ಅಭ್ಯಾಸ ನಡಸಿದ್ದ........

ಅಷ್ಟರಲ್ಲಿ ಒಬ್ಬ ಹೆಂಗಸು ಸಿದ್ಧನಾಥನ ಹತ್ತಿರ ಬಂದು ಹೇಳಿದಳು:

"ಕೆಲವು ಜನರು ಅನಂತ ಸೌಂದರ್ಯ ಬಯಸುತ್ತಾರೆ, ತಮ್ಮ ನಶ್ವರ ಜೀವನವೇ ಅಮರವಾದುದೆಂದು ಭಾವಿಸುತ್ತಾರೆ. ಇನ್ನು ಕೆಲವರು ಚಿಂತಾ ರಹಿತರಾಗಿದ್ದು, ತಮ್ಮ ತಮ್ಮ ಸ್ವಭಾವಕ್ಕನುಸಾರವಾಗಿ ಆಚರಿಸಿ ಸುಖಿಗಳೂ ತೃಪ್ತರೂ ಆಗಿರುತ್ತಾರೆ. ಹಾಗೆ ಬದುಕಿ ಬಾಳಿ ಭಗವಂತನನ್ನು ಸಂತುಷ್ಟಗೊಳಿ ಸುತ್ತಾರೆ. ಮನುಷ್ಯ ಪ್ರಾಣಿಯೇ ಭಗವಂತನ ಮೂರ್ತಿಮಂತ ಪ್ರತೀಕ ವಲ್ಲವೇ? ಎಲ್ಲಾ ಸುಖಗಳೂ ನಿರ್ದುಷ್ಟವಾದವುಗಳೆಂದು ಅವರು ಭಾವಿಸು ತ್ತಾರೆ. ಆನಂದ ಸಂಪಾದಿಸುವುದರಲ್ಲಿ ತಪ್ಪೇನೂ ಇಲ್ಲವೆಂದೇ ತಿಳಿಯು ತ್ತಾರೆ. ಇವರ ವರ್ತನೆ ಸರಿಯಲ್ಲವೇ ಸಿದ್ಧನಾಥ? ವೃಥಾ ಕಷ್ಟ ಸಹಿಸು ತ್ತಿರುವ ನೀನೆಂಥ ಮೂರ್ಖ!"

ಸ್ವಪ್ನ ಕೊನೆಗೊಂಡಿತು. ಸಿದ್ಧನಾಥ ಗಡಬಡಿಸಿ ಕಣ್ದೆರೆದ.

ಹೀಗೆ, ಅವನ ಹೃದಯದ ಮೇಲೂ ಮೆದುಳಿನ ಮೇಲೂ ಪದೇ ಪದೇ ದಾಳಿ ನಡೆದುವು. ಮಾಯೆಯ ಮಾಟಗಾರಿಕೆಯಿಂದಾಗಿ ಒಂದು ಗಳಿಗೆಯೂ ಅವನಿಗೆ ನೆಮ್ಮದಿಯುಳಿಯಲಿಲ್ಲ. ಆದೊಂದು ಸಮಾಧಿಯಲ್ಲಿಯೆ, ಮಹಾ ನಗರವೊಂದರಲ್ಲಿನಗಿಂತ ಹೆಚ್ಚು ಜನ ನೆಲಸಿದ್ದ ಹಾಗೆ ತೋರುತ್ತಿತ್ತು. ಭೂತ ಪ್ರೇತಗಳು ಜೋರಾಗಿ ಅಟ್ಟಹಾಸ ಮಾಡುತ್ತಿದ್ದುವು. ಲಕ್ಷಾಂತರ ಕ್ರಿಮಿ ಕೀಟಗಳೂ ಜಂತುಗಳೂ ಸದಾಕಾಲವೂ ಕಿರಿಚಿಕೊಳ್ಳುತ್ತಿದ್ದುವು. ಸಾಯಂ ಕಾಲ ಆತ ಕಾಲುವೆಯ ಹತ್ತಿರ ಹೋಗುತ್ತಲೂ ಬಗೆಬಗೆಯ, ಪತಿತ ದೇವತೆ ಗಳು ಅವನ ಸುತ್ತಲೂ ನೆರೆದು ನರ್ತಿಸುತ್ತಿದ್ದರು. ತಮ್ಮ ಕಾಮುಕ ಕಾರ್ಯ ಗಳಲ್ಲಿ ಅವನನ್ನು ಎಳೆಯಲು ಯತ್ನಿಸುತ್ತಿದ್ದರು. ಈಗ ಭೂತಗಳಿಗೆ ಅವನ ಭೀತಿಯುಳಿದಿರಲಿಲ್ಲ. ಅವನನ್ನು ಕಂಡು ಅವು ನಗುತ್ತಿದ್ದುವು, ಅಶ್ಲೀಲವಾಗಿ ಆಡುತ್ತಿದ್ದುವು, ಆಗಾಗ ಏಟುಗಳನ್ನು ಹಾಕುತ್ತಿದ್ದುವು. ಒಂದು ದಿನ ಭೂತ

ವೊಂದು ಅವನ ಕೆನ್ನೆಯನ್ನೇ ಕಚ್ಚಿತು !

"ಅಯ್ಯೋ! ನಾನೆಂಥ ಅಧಃಪಾತಾಳಕ್ಕಿಳಿದೆನಲ್ಲ!" ಎಂದು ಸಿದ್ಧನಾಥ ಮನಸ್ಸಿನಲ್ಲಿಯೆ ಹೇಳಿಕೊಂಡ.

ತನ್ನ ಮೆದುಳಿಗೆ ಅವಶ್ಯಕವಾಗಿದ್ದ ಶಾಂತಿಯನ್ನು ಸಂಪಾದಿಸುವ ಉದ್ದೇಶದಿಂದ ಆತ ಕಾಯಕಷ್ಟದ ಕೆಲಸಮಾಡಲು ನಿಶ್ಚಯಿಸಿದ. ಕಾಲುವೆಯ ಸಮೀಪದಲ್ಲಿ, ವೃಕ್ಷಗಳ ಕೆಳಗೆ ಕೆಲವು ಬಾಳೆಯ ಗಿಡಗಳಿದ್ದುವು. ಅವುಗಳ ದೊಡ್ಡ ದೊಡ್ಡ ಎಲೆಗಳನ್ನು ಹರಿದು ತಂದು ಸಮಾಧಿಯ ಹತ್ತಿರ ಕುಳಿತು ಕೊಂಡು ಆತ ಹಗ್ಗಗಳನ್ನು ಸಿದ್ಧಗೊಳಿಸತೊಡಗಿದ. ಆತ ಕೆಲಸದಲ್ಲಿ ನಿರತ ನಾಗುತ್ತಲೂ ಪ್ರೇತಗಳಿಗೆ ಸಂಕಟಕ್ಕಿಟ್ಟುಕೊಂಡಿತು, ಅವುಗಳ ಕೂಗಾಟ ನಿಂತುಕೊಂಡಿತು. ಆ ವೀಣಾವಾದಿನಿಯೂ ತನ್ನ ಮಾಟಗಾರಿಕೆಯನ್ನು ನಿಲ್ಲಿಸಿ ಗೋಡೆಯ ಮೇಲಿನ ತನ್ನ ಸ್ಥಳದಲ್ಲಿಯೆ ಅಚಲಳಾಗಿ ನಿಂತುಕೊಂಡಳು. ಎಲೆಗಳನ್ನು ಕುಟ್ಟಿ ಹಗ್ಗಗಳನ್ನು ತಯಾರಿಸುತ್ತಿದ್ದ ಹಾಗೆಯೇ ಆತ ಹೇಳಿ ಕೊಳ್ಳುತ್ತಿದ್ದ.

"ಭಗವಂತನ ಸಹಾಯದಿಂದ ನನ್ನ ದೇಹವನ್ನು ನಾನು ಗೆದ್ದುಕೊಳ್ಳುವೆ. ನನ್ನ ಆತ್ಮವಂತೂ ಈಗಲೂ ನಿಷ್ಠಾವಂತವಾಗಿಯೆ ಇದೆ. ಈ ಪ್ರೇತಗಳೂ ಈ ಹೆಣ್ಣೂ ಸೇರಿಕೊಂಡು ಭಗವಂತನ ಬಗ್ಗೆ ನನ್ನಲ್ಲಿರುವ ನಂಬುಗೆಯನ್ನಳಿಸಲು ವ್ಯರ್ಥವಾಗಿ ಯತ್ನಿಸುತ್ತಿವೆ. ನನ್ನ ಶ್ರದ್ಧೆ ಅಳಿಯುವ ಬದಲು ದಿನ ದಿಂದ ದಿನಕ್ಕೆ ಗಟ್ಟಿಗೊಳ್ಳುತ್ತಿದೆ. ಭಗವಂತ ಇರುವುದೇ ಸುಳ್ಳೆಂದು ಈ ಪ್ರೇತಗಳು ಸಾರುತ್ತವೆ. ಇವು ಬೊಬ್ಬೆ ಹಾಕಿದಷ್ಟೂ ಆತನಲ್ಲಿ ನನ್ನ ನಂಬುಗೆ ಅಧಿಕವಾಗುತ್ತಿದೆ."

ಎಲೆಗಳನ್ನು ಕುಟ್ಟಿ ಬಿಸಿಲಲ್ಲಿ ಒಣಗಿಸಿ, ಕಾಲುವೆಯ ನೀರಲ್ಲಿ ಕೊಳೆಯಲು ಬಿಟ್ಟು, ಅನಂತರ ಮತ್ತೆ ತೆಗೆದು, ನೀರನ್ನು ಹಿಂಡಿ ಹಾಕಿ, ಪುನಃ ಒಣಗಿಸಿ ಹಗ್ಗ ತಯಾರಿಸುವ ಆ ಕಾರ್ಯದಲ್ಲಿ ಅವನಿಗೆ ಮಹದಾನಂದ ಲಭಿಸಿತು. ಎಳೆ ಮಕ್ಕಳಂಥ ಸರಳತೆ ತನ್ನಲ್ಲಿ ಉದಯವಾಗುತ್ತಿದ್ದುದನ್ನು ಕಂಡು ಅವನಿಗೆ ಹರ್ಷವೆನಿಸಿತು. ಹಗ್ಗಗಳನ್ನು ತಯಾರಿಸಿದ ಬಳಿಕ ಆತ ಲಕ್ಕಿಯ ಕಟ್ಟಿಗೆಗಳನ್ನು ಮುರಿದು ತಂದು ಚಾಪೆಗಳನ್ನೂ ಬುಟ್ಟಿಗಳನ್ನೂ ಹೆಣೆಯತೊಡಗಿದ. ಆ ದೇವಸ್ಥಾನ ಮೇದಾರನ ಮನೆಯಂತೆ ಕಾಣಿಸತೊಡಗಿತು. ದಿನದ ಕೆಲಸ

ಮುಗಿಯುತ್ತಲೂ ಆತ ಪ್ರಸನ್ನಚಿತ್ತದಿಂದ ಭಗವಂತನನ್ನು ಪ್ರಾರ್ಥಿಸುತ್ತಿದ್ದ. ಆದರೂ ದೇವರು ಅವನ ಹತ್ತಿರ ಸುಳಿಯಲಿಲ್ಲ.

ಒಂದು ರಾತ್ರೆ ಅಕಸ್ಮಾತ್ತಾಗಿ ಒಂದು ಧ್ವನಿ ಕೇಳಬಂದು, ಆತ ಎಚ್ಚರಗೊಂಡ. ಆ ಧ್ವನಿ ಅವನ ಶರೀರವೆಲ್ಲವನ್ನೂ ಶೀತಲವಾಗಿಸಿತು. ಆ ಧ್ವನಿ, ಆ ಮೃತ ವ್ಯಕ್ತಿಯದೇ ಆಗಿದ್ದಿತೆಂಬುವಲ್ಲಿ ಸಂಶಯವಿರಲಿಲ್ಲ.

ಧ್ವನಿ ಮೆಲ್ಲಗೆ ಹೇಳಿತು: "ಮಾಯಾ, ಬಾ, ಬೇಗ ಬಾ. ನನ್ನೊಡನೆ ಸ್ನಾನ ಮಾಡು ಬಾ. ಬೇಗ ಬಾ."

ಸಿದ್ಧನಾಥನ ಕಿವಿಯ ಬಳಿ ತನ್ನ ಮುಖವನ್ನಿರಿಸಿದ್ದ ಹೆಂಗಸು ಉತ್ತರವಿತ್ತಳು:

"ಪ್ರಿಯಾ, ನಾನು ಏಳಲಾರೆ. ನನ್ನ ಮೇಲೊಬ್ಬ ಮನುಷ್ಯ ಕೂತಿದ್ದಾನೆ."

ಆ ಸ್ತ್ರೀಯ ವಕ್ಷಸ್ಥಲದ ಮೇಲೆ ತನ್ನ ಕೆನ್ನೆ ಆಡುತ್ತಿದ್ದ ಹಾಗೆ ಭಾಸವಾಯಿತು ಸಿದ್ಧನಾಥನಿಗೆ. ಅವಳು ಬೇರಾರೂ ಆಗಿರದೆ, ಅದೇ ಆ ವೀಣಾವಾದಿನಿಯಾಗಿದ್ದಳು. ಅವಳು ತನ್ನ ದೇಹವನ್ನು ಅರ್ಧದ ವರೆಗೆ ಪ್ರತ್ಯೇಕಗೊಳಿಸಿ ಎದೆಯನ್ನು ಮೇಲೆತ್ತಿದಳು. ಸಿದ್ಧನಾಥ ಕಾಮಾತುರನಾಗಿ ೯ ಪತಿತ ಸುಂದರ ಸ್ತ್ರೀಯ ಶರೀರಪುಷ್ಪವನ್ನು ಬಿಗಿಯಾಗಿ ಅಪ್ಪಿಕೊಂಡು ಅತ್ಯಂತ ವಿಷಯಾಸಕ್ತನಾಗಿ ಕೂಗಿಕೊಂಡ: "ನನ್ನನ್ನು ಬಿಟ್ಟು ನೀನೆಲ್ಲಿಗೂ ಹೋಗಬೇಡ ಪ್ರಿಯೇ, ನಿಲ್ಲು, ನಿಲ್ಲು."

ಆದರೆ, ಅವಳಾಗಲೇ ಬಾಗಿಲ ವರೆಗೆ ಹೋಗಿದ್ದಳು. ಅವಳು ಹಿಂತಿರುಗಿ ನಕ್ಕಳು. ಚಂದ್ರಕಿರಣಗಳು ಅವಳ ನಗೆಯ ಮೇಲೆ ಬೆಳ್ಳಿಯ ಮಳೆಗರೆದುವು. ಅವಳೆಂದಳು:

"ಈಗ ನಿಂತು ನಾನೇನು ಮಾಡಬಲ್ಲೆ? ನಿನ್ನಿಂದ ನಾನಾವ ಸುಖ ಪಡೆಯಬಲ್ಲೆ? ನಿನ್ನಂಥ ಬೃಹತ್ ಕಲ್ಪನೆಯ ವ್ಯಕ್ತಿಗಳಿಗೆ ಛಾಯೆಯಷ್ಟೇ ಲಭಿಸುತ್ತದೆ. ಮತ್ತೆ, ನೀನು ಪಾಪವನ್ನು ಮಾಡಿದೆ. ಇನ್ನು ನಿನಗೆ ಬೇಕಾದುದೇನು ?"

ಸಿದ್ಧನಾಥ ರಾತ್ರಿಯಲ್ಲೆಲ್ಲ ಅಳುತ್ತಿದ್ದ; ಪ್ರಾತಃಕಾಲ ಆಗಮಿಸುತ್ತಲೂ ಗಂಭೀರ ಕರ್ಕಶ ಸ್ವರದಲ್ಲಿ ಪ್ರಾರ್ಥಿಸತೊಡಗಿದ:

"ಪರಮೇಶ್ವರಾ, ನನ್ನ ತಂದೇ, ನೀನೇಕೆ ನನ್ನ ಕೈಬಿಟ್ಟೆ? ನಾನೆಂಥ ಗಂಡಾಂತರದಲ್ಲಿರುವೆನೆಂಬುದು ನಿನಗೆ ಕಾಣಿಸದೇ? ಓ ನನ್ನ ರಕ್ಷಕನೇ, ನನ್ನ ಕೈ ಬಿಡಬೇಡ. ನನಗೆ ಸಹಾಯ ಮಾಡು. ನನ್ನನ್ನು ಆಶೀರ್ವದಿಸು. ನನ್ನ ಮೊರೆಯನ್ನಾಲಿಸು. ನನ್ನ ಏಕಮಾತ್ರ ಆಧಾರವೇ ನೀನಲ್ಲವೆ? ಹೀಗೇಕೆ ನನ್ನನ್ನು ದೂರಗೊಳಿಸುತ್ತಿರುವೆ? ನಾನಾವ ಅಪರಾಧ ಮಾಡಿದೇನೆ? ನಿನ್ನ ಮನಸ್ಸಿಗೆ ಬಂದ ಹಾಗೆ ನನ್ನನ್ನು ದಂಡಿಸು. ನನ್ನ ಕೈ ಮಾತ್ರ ಬಿಡಬೇಡ ತಂದೇ. ನಾನು ನಿನ್ನ ಕರುಣೆಯ ಕಂದನಲ್ಲವೇ? ಕಂದನ ಮೇಲೆ ತಂದೆ ಹೀಗೆ ಮುನಿಯುವುದುಂಟೇ? ನಾನು ನಿನ್ನನ್ನು ಸರಿಯಾಗಿ ತಿಳಿದುಕೊಂಡಿರ ಲಿಕ್ಕಿಲ್ಲ. ಆದರೂ ನಿನ್ನನ್ನು ನಂಬಿದೇನೆ, ಗಾಢವಾಗಿ ನಂಬಿದೇನೆ. ನೀನು ದೇವರುಗಳ ದೇವರು, ಜ್ಯೋತಿಗಳ ಜ್ಯೋತಿ, ಪರಮಾತ್ಮಗಳ ಪರಮಾತ್ಮ. ಎಷ್ಟೋ ಅವತಾರಗಳನ್ನು ತಳೆದು ಬಂದು ನೀನೂ ಕೂಡಾ ಮನುಷ್ಯರಂತೆಯೆ ಕಷ್ಟಗಳನ್ನನುಭವಿಸಿದ್ದೀಯೆ. ದಾರಿದ್ರ್ಯ ದೈನ್ಯಗಳನ್ನೂ ಕಂಡಿದ್ದೀಯೆ. ಮಾಯೆ ನಿನ್ನನ್ನು ತನ್ನ ಜಾಲದಲ್ಲಿ ಬಂಧಿಸಲು ಯತ್ನಿಸಿದ್ದಳು. ಮಾನಸಿಕ ಯಾತನೆಗಳ ಪಡಿನೆಳಲು ನಿನ್ನ ಕಣ್ಣುಗಳಲ್ಲೂ ಕಾಣಿಸಿತ್ತು. ತಂದೇ, ನಿನ್ನ ಆ ಮಾನವತೆಯೇ ನನಗೆ ಹೆಚ್ಚು ಪ್ರಿಯವಾಗಿದೆ."

ಸಿದ್ಧನಾಥ ಆರ್ತ ಧ್ವನಿಯಲ್ಲಿ ಪ್ರಾರ್ಥನೆ ಮಾಡಿ ಮುಗಿಸುತ್ತಲೂ ಅಟ್ಟ ಹಾಸದ ಧ್ವನಿಯೊಂದು ಸಮಾಧಿಯನ್ನೂ ದೇಗುಲವನ್ನೂ ಆದರ ಗೋಡೆ ಗಳನ್ನೂ ಅಲುಗಾಡಿಸುವಂತೆ ಮೊರೆಯತೊಡಗಿತು. ಉಪಹಾಸದ ಸ್ವರದಲ್ಲಿ ಆ ಧ್ವನಿಯೆಂದಿತು:

"ಈ ಪ್ರಾರ್ಥನೆಯಂತೂ ವಿಧರ್ಮೀಯರದಾಗಿದೆ. ಸಿದ್ಧನಾಥನೂ ಕುಲ ಗೆಟ್ಟು ಹೋದನೇ! ಹ ಹ ಹ ಹ್ಹಾ ಹ್ಹಾ!"

ಸಿದ್ಧನಾಥನಿಗೆ ವಜ್ರಾಘಾತವಾದಂತಾಯಿತು. ಆತ ಮೂರ್ಛಿತನಾಗಿ ಬಿದ್ದುಕೊಂಡ.

# ೧೦

ತಾನು ಮತ್ತೆ ಎಚ್ಚರಗೊಂಡುದು ಯಾವಾಗ ಎಂಬುದೇನೂ ಅವನಿಗೆ ಗೊತ್ತಾಗಲಿಲ್ಲ.

ಆತ ಕಣ್ತೆರೆದು ನೋಡಿದಾಗ ತನ್ನ ಸುತ್ತಲೂ ಹತ್ತು ಹನ್ನೆರಡು ಜನ ಬೈರಾಗಿಗಳು ಕುಳಿತಿದ್ದುದು ಕಾಣಿಸಿತು. ಕೆಲವರು ಅವನ ಮುಖದ ಮೇಲೆ ನೀರು ಸಿಂಪಡಿಸುತ್ತಿದ್ದರು. ಇನ್ನು ಕೆಲವರು ಗಾಳಿ ಬೀಸುತ್ತಿದ್ದರು. ಮತ್ತೆ ಕೆಲ ವರು ಅವನ ಕಾಲುಗಳನ್ನುಜ್ಜುತ್ತಿದ್ದರು.

ಅವರು ಯಾರೆಂಬುದು ಸಿದ್ಧನಾಥನಿಗೆ ತಿಳಿಯಲಿಲ್ಲ. ತಾನಿನ್ನೂ ಕನಸು ಕಾಣುತ್ತಿರುವೆನೇನೋ ಎಂದು ಆತ ಕಣ್ಣುಗಳನ್ನುಜ್ಜಿಕೊಂಡ. ಇಲ್ಲ. ಅದು ಕನಸೇನೂ ಆಗಿರಲಿಲ್ಲ. ದೇಗುಲದ ನೆಲದ ಮೇಲೆ ಆತ ಬಿದ್ದು ಕೊಂಡಿದ್ದ. ಬೈರಾಗಿಗಳು ಅವನನ್ನು ಎಚ್ಚರಗೊಳಿಸುವ ಪ್ರಯತ್ನಗಳಲ್ಲಿ ತೊಡಗಿದ್ದರು.

ಇದರರ್ಥವೇನು ಹಾಗಾದರೆ ? ತನಗೆ ಅರಿವು ತಪ್ಪಿಹೋಗಿತ್ತೇ ? ಏಕೆ ? ಯಾವಾಗ ?

"ತಾವು ಯಾರು ?" ಎಂದು ಆತ ಪ್ರಶ್ನಿಸಿದ.

ಬೈರಾಗಿಗಳಲ್ಲೊಬ್ಬ ಹೇಳಿದ:

"ಜೈ ಶಿವಶಂಕರ್ ! ನಾವು ಶೈವಪಂಥೀಯ ಸಂನ್ಯಾಸಿಗಳು."

ಅವರೂ ಕೂಡಾ ತನ್ನ ಧರ್ಮಬಾಂಧವರೇ ಎಂಬುದು ಗೊತ್ತಾಗು ತ್ತಲೂ ಸಿದ್ಧನಾಥ ಸಂತಸದಿಂದೆದ್ದು ಕುಳಿತು,

"ಯಾವಾಗ ದಯಮಾಡಿಸಿದಿರಿ ?" ಎಂದು ಕೇಳಿದ.

"ಒಂದರ್ಧ ಗಂಟೆಯಾಗಿರಬಹುದು, ಅಷ್ಟೆ."

"ಆಗಿನಿಂದಲೂ ನನ್ನನ್ನೆಚ್ಚರಗೊಳಿಸಲು ಯತ್ನಿಸುತ್ತಿದ್ದಿರಾ ?"

"ಹೌದು. ನಿಮ್ಮನ್ನು ಈ ಸ್ಥಿತಿಯಲ್ಲಿ ಹೀಗೇ ಬಿಟ್ಟುಹೋಗುವುದಕ್ಕಾಗುತ್ತದೆಯೇ ? ಈ ದೇಗುಲದೆದುರಿಗೆ ನಾವು ಹಾದುಹೋಗುತ್ತಿದ್ದಾಗ ಒಳಗೆ

ವಿಚಿತ್ರವಾದ ಸದ್ದಾಗುತ್ತಿದ್ದುದನ್ನು ಕೇಳಿದೆವು. ಇಂಥ ನಿರ್ಜನ ಪ್ರದೇಶದಲ್ಲಿ ಸದ್ದು ಎಲ್ಲಿಂದ ಬರುವುದೋ ನೋಡೋಣವೆಂದು ಒಳಗೆ ಬಂದರೆ ನೀವು ನೆಲದ ಮೇಲೆ ನಿಶ್ಚೇತನರಾಗಿ ಬಿದ್ದುಕೊಂಡಿದ್ದುದು ಕಾಣಿಸಿತು. ಭೂತ ಪ್ರೇತಗಳೇ ನಿಮ್ಮನ್ನು ಹೊಡೆದು ಉರುಳಿಸಿರಬೇಕೆಂದು ನಮಗನ್ನಿಸಿತು. ನಿಮ್ಮನ್ನು ಹಾಗೇ ಬಿಟ್ಟುಹೋದರೆ ಅವು ನಿಮ್ಮ ಪ್ರಾಣವನ್ನು ಉಳಿಸಲಿಕ್ಕಿಲ್ಲ ವೆಂದು ತೋರಿತು. ಅಂತೆಯೇ ನಿಮ್ಮನ್ನೆಚ್ಚರಿಸಲು ತಡೆದೆವು. ನಾವು ಬರುತ್ತಲೂ ಪ್ರೇತಗಳೆಲ್ಲಾ ಓಡಿಹೋಗಿರಲು ಸಾಕು."

ಕ್ಷೀಣ ಸ್ವರದಲ್ಲಿ ಸಿದ್ಧನಾಥ ಕೇಳಿದ:

"ಬಂಧುಗಳೇ, ನೀವೆಲ್ಲಿಗೆ ಹೊರಟಿದ್ದೀರಿ ? ಎಲ್ಲಿಂದ ಬರುತ್ತಿದ್ದೀರಿ ?"

"ನಾವು ಕಪ್ಪತ ಪರ್ವತದಿಂದ ಬರುತ್ತಿದ್ದೇವೆ. ಶ್ರೀಶೈಲಕ್ಕೆ ಹೊರಟಿದ್ದೇವೆ."

"ಶ್ರೀಶೈಲಕ್ಕೆ ?" ಸಿದ್ಧನಾಥ ಪುಲಕಿತನಾಗಿ ಕೇಳಿದ.

"ಹೌದು. ಶ್ರೀಶೈಲ ಗಿರಿಗೆ ಪ್ರಯಾಣ ಮಾಡುತ್ತಿದ್ದೇವೆ—ನಮ್ಮ ಧರ್ಮದ ಆದಿಗುರು ಪೂಜ್ಯಪಾದ ಗುರುವರ್ಯರ ದರ್ಶನ ಪಡೆಯುವುದಕ್ಕಾಗಿ."

"ಅವರು ಯಾರಿಗೂ ದರ್ಶನ ಕೊಡುವುದಿಲ್ಲವಲ್ಲ ?"

"ನಿಜ. ಸಾಮಾನ್ಯವಾಗಿ ಅವರು ತಮ್ಮ ಗುಹೆಯಿಂದ ಹೊರಬರುವುದಿಲ್ಲ, ಯಾರನ್ನೂ ನೋಡುವುದಿಲ್ಲ ಎಂಬುದನ್ನು ನಾವು ಬಲ್ಲೆವು. ಆದರೆ, ಇತ್ತೀಚಿನ ವಾರ್ತೆ ನಿಮಗೆ ಗೊತ್ತಿದ್ದಂತೆ ಕಾಣುವುದಿಲ್ಲ."

ಸಿದ್ಧನಾಥ ಉತ್ಸುಕತೆಯಿಂದ ಕೇಳಿದ:

"ಹೊಸ ವಾರ್ತೆಯೆಂದಿರಾ ? ಏನದು ? ಪೂಜ್ಯಪಾದ ಗುರುಮಹಾರಾಜರು ಕ್ಷೇಮವಾಗಿರುವರಷ್ಟೆ ?"

"ಕ್ಷೇಮವಾಗಿಯೇನೋ ಇದಾರೆ. ಆದರೆ ಇನ್ನು ಬಹಳ ದಿನ ನಮ್ಮೊಡನೆ ಅವರು ಇರುವ ಹಾಗೆ ಕಾಣುವುದಿಲ್ಲ."

ಸಿದ್ಧನಾಥನ ಎದೆ ವೇಗವಾಗಿ ಮಿಡಿಯತೊಡಗಿತು. ಆತ ಕಾತರನಾಗಿ ಕೇಳಿದ:

"ಏನು ಹೇಳಿ, ಸ್ಪಷ್ಟವಾಗಿ ಹೇಳಿ."

ಬೈರಾಗಿಯೊಬ್ಬ ಹೇಳಿದ:

"ಅವರ ಬಗ್ಗೆ ಇಷ್ಟು ಕಾತರರಾಗಬೇಕಾದರೆ ನೀವು ಕೂಡಾ ನಮ್ಮ ಪಂಥಕ್ಕೆ ಸೇರಿದವರೇ ಆಗಿರಬೇಕು. ಹೌದೇನು ?"

"ಹೌದು, ಹೌದು. ಏನಾಗಿದೆ ಅವರಿಗೆ? ಬೇಗ ಹೇಳಿ."

"ನಾವು ಕೇಳಿದುದಿಷ್ಟು. ಅವರಿಗೆ ಬಹಳ ವಯಸ್ಸಾಗಿದೆಯಷ್ಟೆ. ತಮ್ಮ ಮೃತ್ಯುವಿನ ಸಮಯ ಸನ್ನಿಹಿತವಾಗಿದೆಯೆಂದು ಅವರು ದಿವ್ಯ ದೃಷ್ಟಿಯಿಂದ ಅರಿತುಕೊಂಡಿರುವರಂತೆ. ಅಂತೆಯೇ, ಮೃತ್ಯುವಿನ ಮೊದಲು ತಮ್ಮ ಶಿಷ್ಯರಿಗೆಲ್ಲ ಕಡೆಯ ಬಾರಿಗೆ ದರ್ಶನವಿತ್ತು ಆಶೀರ್ವದಿಸಿ ಎಲ್ಲರನ್ನೂ ಬೀಳ್ಕೊಂಡು ಹೋಗುವ ಉದ್ದೇಶದಿಂದ ಅವರು ತಮ್ಮ ಗುಹೆಯನ್ನು ಬಿಟ್ಟು ಆಶ್ರಮಕ್ಕೆ ಬಂದಿರುವರಂತೆ. ಅವರ ದರ್ಶನಲಾಭ ಪಡೆಯಲೆಂದೇ ನಾವು ಹಣ್ಣುಹಂಪಲು ತೆಗೆದುಕೊಂಡು ಶ್ರೀಶೈಲ ಗಿರಿಗೆ ಧಾವಿಸುತ್ತಿದ್ದೇವೆ."

"ದೈವೀ ಪ್ರೇರಣೆಯಿಂದಲೇ ನೀವು ಇಲ್ಲಿ ನಿಂತುಕೊಂಡು ನನ್ನನ್ನೆಚ್ಚರಗೊಳಿಸಿದಂತೆ ಕಾಣುತ್ತದೆ. ನೀವು ಭೆಟ್ಟಿಯಾಗದಿದ್ದರೆ ಇಂಥ ಮಹತ್ವದ ವಾರ್ತೆ ನನಗೆ ತಿಳಿಯುತ್ತಿರಲೇ ಇಲ್ಲ. ಗುರುಮಹಾರಾಜರನ್ನು ಕಡೆಯ ಬಾರಿಗೆ ಸಂದರ್ಶಿಸುವ ಭಾಗ್ಯವೂ ನನಗೆ ದೊರಕುತ್ತಿರಲಿಲ್ಲ. ನಿಮ್ಮಿಂದ ಬಹಳ ಉಪಕಾರವಾಯಿತು. ಆ ಋಣವನ್ನು ತೀರಿಸುವುದಾದರೂ ಹೇಗೆ ?"

"ಅದಿರಲಿ. ನೀವೂ ನಮ್ಮ ಧರ್ಮಬಾಂಧವರೇ ಆಗಿರುವುದರಿಂದ ಋಣದ ಮಾತೇ ಇಲ್ಲಿ ಬರುವುದಿಲ್ಲ. ಆದರೆ, ಇಂಥ ಮಹತ್ವದ ವಾರ್ತೆ ನಿಮಗೆ ಹೇಗೆ ಗೊತ್ತಾಗಲಿಲ್ಲವೋ ಅಂತ ನಮಗೆ ಆಶ್ಚರ್ಯವಾಗುತ್ತದೆ. ಈ ದೇಗುಲದಲ್ಲಿ ಎಷ್ಟು ದಿನಗಳಿಂದ ಮಲಗಿದ್ದಿರಿ ನೀವು?"

"ಅನಂತ ಕಾಲದಿಂದ !"

"ನಿಜವಾಗಿಯೂ ."

"ಯಾರಿಗೆ ಗೊತ್ತು ! ನಿಜ ಹೇಳುವುದಾದರೆ, ನನಗೆ ಇದಾವುದೂ ತಿಳಿಯದು. ನಾನಿಲ್ಲಿಗೆ ಯಾವಾಗ ಬಂದೆ, ಏಕೆ ಬಂದೆ, ಎಂದು ಮಲಗಿದೆ, ಏನು ಮಾಡಿದೆ, ಯಾವುದೂ ತಿಳಿಯದು."

"ಎಲ್ಲಾ ವಿಚಿತ್ರವೇ ಆಗಿದೆಯಲ್ಲ! ಭೂತಪ್ರೇತಗಳು ನಿಮ್ಮ ತಲೆ ಕೆಡಿಸಿರಲಿಕ್ಕಿಲ್ಲವಷ್ಟೆ ?"

"ಹಾಗೂ ಆಗುವ ಸಂಭವವುಂಟು."

"ಅದು ಮಾತ್ರ ಬಹಳ ದುಃಖದ ವಿಚಾರ. ತನ್ನ ಪರಮ ಭಕ್ತನೊಬ್ಬ ನನ್ನ ಗೌರೀಶಂಕರನಾದರೂ ಇಂಥ ಸ್ಥಿತಿಯಲ್ಲಿ ಹೇಗೆ ಬಿಟ್ಟುಗೊಟ್ಟ? ನಿಮ್ಮ ಬಗ್ಗೆ ಆ ದಯಾನಿಧಿಗೆ ಕರುಣೆ ಬರಲಿಲ್ಲವೆ?"

"ಅದನ್ನು ಆ ಭಗವಂತನೇ ಬಲ್ಲ."

"ದೇವದೂತರಾದರೂ ಬಂದು ನಿಮ್ಮನ್ನು ಎಚ್ಚರಗೊಳಿಸಿ, ಪೂಜ್ಯಪಾದ ಗುರುಮಹಾರಾಜರು ಆಶ್ರಮಕ್ಕೆ ಬಂದ ಸಂಗತಿಯನ್ನು ತಿಳಿಸಬಹುದಾಗಿದ್ದಿತಲ್ಲ?"

"ಅಂಥ ಕೃಪೆಗೆ ನಾನು ಯೋಗ್ಯನಾಗಿರಲಿಕ್ಕಿಲ್ಲ. ಯಾರು ಬಲ್ಲರು! ನಾನು ಪೂರ್ತಿಯಾಗಿ ಪತಿತನಾಗಿರುವೆನೊ ಏನೊ. ಈ ಸಮಾಧಿಯಲ್ಲಿ ಕೇವಲ ಭೂತ ಪಿಶಾಚಿಗಳು ವಾಸವಾಗಿವೆ. ಇಂಥ ಸ್ಥಳದಲ್ಲಿ ನೆಲಸಿದುದರಿಂದ ನನ್ನ ಪಾವಿತ್ರ್ಯವೂ ನಶಿಸಿಹೋಗಿರಲು ಸಾಕು. ಅಂತೆಯೇ ಭಗವಂತ ನನ್ನನ್ನು ಮರೆತುಬಿಟ್ಟಿರಬಹುದು. ನನ್ನ ಮೇಲೆ ಪುನಃ ಆತ ಕೃಪೆಮಾಡುವಂತೆ ಪ್ರಾರ್ಥನೆಯನ್ನಾದರೂ ಮಾಡಿರಿ."

ಬೈರಾಗಿಗಳು ವಿಸ್ಮಿತರಾಗಿ ಕೇಳಿದರು:

"ನಿಮ್ಮ ಹಾಗೇ ನಿಮ್ಮ ಮಾತೂ ಅದ್ಭುತವಾಗಿವೆ. ನೀವು ಯಾರು? ನಿಮ್ಮ ಹೆಸರೇನು? ನಿಮ್ಮ ಸ್ಥಳವಾವುದು?"

ಹೇಳಲೋ ಬೇಡವೋ ಎಂದು ಅನುಮಾನಿಸುತ್ತಲೇ ಸಿದ್ಧನಾಥ ಹೇಳಿದ:

"ನನ್ನ ಹೆಸರು ದೆಸೆಗಳನ್ನು ತಿಳಿಸಲು ಬಹಳ ನಾಚಿಕೆಯಾಗುತ್ತಿದೆ. ಎಂಥ ವ್ಯಕ್ತಿ ಏನಾಗಿ ಹೋಯಿತು ಎಂದು ನೀವು ಅಚ್ಚರಿಪಟ್ಟುಕೊಳ್ಳದಿರಲಾರಿರಿ. ನನ್ನ ಮಾತನ್ನು ನಂಬುವುದಕ್ಕೂ ನೀವು ಹಿಂದೆ ಮುಂದೆ ನೋಡಬಹುದೋ ಏನೊ."

"ನಿಮ್ಮ ಬಗ್ಗೆ ನಮಗೆ ಅಪನಂಬಿಗೆಯೇನೂ ಇಲ್ಲ."

"ಕೇಳಿರಿ ಹಾಗಾದರೆ: ಪೂಜ್ಯಪಾದ ಗುರುಮಹಾರಾಜರ ಪಟ್ಟಶಿಷ್ಯ ನಾನು. ಶ್ರೀಶೈಲಗಿರಿಯ ಮುಖ್ಯ ಶೈವಾಶ್ರಮದ ಪ್ರಮುಖ ನಾನು. ನನ್ನನ್ನು ಸಿದ್ಧನಾಥ ಎಂದು ಕರೆಯುತ್ತಾರೆ."

ಅವನ ಸಮೀಪದಲ್ಲಿಯೇ ಕುಳಿತಿದ್ದ ಬೈರಾಗಿಗಳು ಬೆಚ್ಚಿ, ದೂರ ಸರಿದರು.

"ನೀವೇ ಸಿದ್ಧನಾಥ ತಪಸ್ವಿಗಳೇ ! ಸ್ತಂಭವನ್ನೇರಿ ಕುಳಿತಿದ್ದವರು ?"

"ನಾನೇ ಆ ನಿರ್ಭಾಗ್ಯ."

"ನೀವು ನಿರ್ಭಾಗ್ಯರೆಂದು ಯಾರಾದರೂ ಹೇಳಿಯಾರೇ ? ನೀವು ಪರಮಪೂಜ್ಯರು. ಮಹಾ ತಪಸ್ವಿಗಳು. ಶೈವಧರ್ಮದ ಕೀರ್ತಿಯನ್ನು ಭರತಖಂಡದಲ್ಲೆಲ್ಲಾ ಹಬ್ಬಿಸಿ ನಮ್ಮ ಧರ್ಮಧ್ವಜವನ್ನು ಮೆರೆಯಿಸಿದ ಪುಣ್ಯಾತ್ಮರು," ಎಂದು ಹೇಳುತ್ತಾ ಬೈರಾಗಿಗಳು ಅವನೆದುರು ಸಾಷ್ಟಾಂಗ ಹಾಕಿದರು.

"ನನ್ನಂಥ ಅಲ್ಪನಿಗೆ ನಮಸ್ಕಾರ ಮಾಡಬೇಡಿ. ಏಳಿ, ಎದ್ದೇಳಿ," ಎಂದ ಸಿದ್ಧನಾಥ.

ಬೈರಾಗಿಗಳು ದಿಗಿಲುಗೊಂಡು ಎದ್ದು ಕುಳಿತರು.

"ಸಿದ್ಧನಾಥ ಮಹರ್ಷಿಗಳು ಅಲ್ಪರೆನ್ನುವ ಮಾತನ್ನೂ ನಾವು ಕೇಳಲಾರೆವು. ಪೂಜ್ಯಪಾದ ಗುರುಮಹಾರಾಜರ ತರುವಾಯ ನೀವೇ ಅಲ್ಲವೇ ನಮ್ಮ ಪಂಥದ ಮುಖ್ಯ ಗುರುಗಳಾಗುವವರು ? ಕಲ್ಯಾಣದ ಪತಿತ ವೇಶ್ಯೆ ಮುಕ್ತಾದೇವಿಯನ್ನು ಪಾಪಜೀವನದಿಂದ ಬಿಡಿಸಿ ಸಂನ್ಯಾಸದೀಕ್ಷೆ ಕೊಟ್ಟ ಪುಣ್ಯಾತ್ಮರು ನೀವು. ಸ್ತಂಭ ಶಿಖರವನ್ನೇರಿ ಒಂದು ವರ್ಷದ ವರೆಗೂ ಅಲ್ಲಿಯೇ ಕುಳಿತು ನೂರಾರು ಪವಾಡಗಳನ್ನು ಮೆರೆದವರು ನೀವು. ದೇವದೂತರೊಡನೆ ಆಟವಾಡಿದವರು ನೀವು. ಸ್ತಂಭದ ಕೆಳಗಿದ್ದ ಜನರು ನೀವು ಸ್ವರ್ಗದತ್ತ ಹಾರಿಹೊರಟಿದ್ದುದನ್ನು ನೋಡಿದರು. ದೇವದೂತರ ರೆಕ್ಕೆಗಳು ಮೇಘಮಾಲೆಗಳಂತೆ ನಿಮ್ಮ ಸುತ್ತಲೂ ಚಾಚಿಕೊಂಡಿದ್ದುವು. ಬಲಗೈಯನ್ನೆತ್ತಿ ನೀವು ಜನರನ್ನು ಆಶೀರ್ವದಿಸುತ್ತಿದ್ದಿರಿ. ನೀವು ಕೈಲಾಸಕ್ಕೆ ಹೊರಟುಹೋಗುತ್ತಲೂ, ಸ್ತಂಭದ ಮೇಲೆ ನೀವಿಲ್ಲದಿದ್ದುದನ್ನು ಕಂಡು ಅಲ್ಲಿ ನೆರೆದವರೆಲ್ಲರೂ ಚೀತ್ಕಾರಮಾಡಿದರು. ಅವರ ಆರ್ತನಾದದಿಂದ ಸುತ್ತಲಿನ ಸೀಮೆಯೆಲ್ಲಾ ಕಂಪಿಸಿತು. ಅಲ್ಲಿಯೇ ಇದ್ದ ನಿಮ್ಮ ಪರಮಪ್ರಿಯ ಶಿಷ್ಯನೊಬ್ಬ ನಡೆದುದನ್ನು ಅರಿತುಕೊಂಡು ನೀವು ಕೈಲಾಸಕ್ಕೆ ಹೋದ ಸಂಗತಿಯನ್ನು ವಿವರಿಸಿ ಹೇಳಿದ. ಜನರಿಗೆಲ್ಲಾ ಸಮಾಧಾನವಾಯಿತು. ಒಬ್ಬ ಮೂರ್ಖ ಶಿಷ್ಯ ಮಾತ್ರ ಈ ವಿಚಾರದಲ್ಲಿ ಸಂಶಯ ವ್ಯಕ್ತಗೊಳಿಸಿದ. ನಿಮ್ಮನ್ನು ಪಿಶಾಚಿಗಳು ಹೊತ್ತುಕೊಂಡು ಹೋಗುತ್ತಿದ್ದುದನ್ನು

ಆತ ಕನಸಿನಲ್ಲಿ ಕಂಡಿದ್ದನಂತೆ. ಅವನ ಈ ಮಾತು ಕೇಳಿ ರೇಗಿದ ಜನರು ಅವನನ್ನು ಕಲ್ಲುಗಳಿಂದ ಹೊಡೆದರು. ಅವನ ಸುದೈವ. ಅಂತೂ ಬದುಕಿ ಕೊಂಡ."

"ಅವನು ಕನಸಿನಲ್ಲಿ ಕಂಡದ್ದೇ ನಿಜ. ನನ್ನನ್ನು ಪಿಶಾಚಿಗಳು ಹೊತ್ತು ಕೊಂಡು ಬಂದದ್ದೂ ನಿಜ." ಎಂದ ಸಿದ್ಧನಾಥ.

"ಹಾಗಾದರೆ ನೀವು ಕೈಲಾಸಕ್ಕೆ ಹೋಗಿ ಬರಲಿಲ್ಲವೆ?"

"ಇಲ್ಲ. ಅದರ ಬದಲು ಈ ನರಕದಲ್ಲಿ ಕೊಳೆಯುತ್ತ ಬಿದ್ದಿದೇನೆ."

"ಇದು ನಿಜವಾಗಿಯೂ ಆಶ್ಚರ್ಯದ ವಿಷಯ."

"ಇಂಥ ಆಶ್ಚರ್ಯಗಳೆಷ್ಟೋ ನಡೆದಿವೆ ನಮ್ಮ ಬಾಳಿನಲ್ಲಿ. ನಾನು ದೇವದೂತರ ಜೊತೆಗೆ ಆಟವನ್ನೂ ಆಡಲಿಲ್ಲ. ನನ್ನ ಮೇಲೆ ದೇವರ ಕೃಪೆಯೂ ಆಗಲಿಲ್ಲ. ಆದರ ಬದಲು ಆತ ಹಲವಾರು ಪ್ರಲೋಭನೆಗಳನ್ನೊಡ್ಡಿ ನನ್ನನ್ನು ಅತ್ಯಂತ ಕಠಿನವಾದ ಪರೀಕ್ಷೆಗಳಿಗೆ ಗುರಿ ಮಾಡಿದ. ದೇವದೂತರು ನನ್ನನ್ನು ಅವನ ಪಾದಗಳ ಹತ್ತಿರ ಒಯ್ಯಲಿಲ್ಲ. ಅದರ ಬದಲು ಛಾಯೆಗಳ ಗೋಡೆ ಯೊಂದು ನನ್ನ ಕಣ್ಣೆದುರು ತಲೆದೋರಿ ನನ್ನನ್ನು ಎಳೆದುಕೊಂಡು ಮುಂದೆ ಮುಂದೆ ನಡೆಯಿತು. ಆ ಸಮಯದಲ್ಲಿ ನಾನು ಕನಸಿನಲ್ಲೇ ನಡೆದಿದ್ದ ಹಾಗಿತ್ತು. ಭಗವಂತನ ಸಾನ್ನಿಧ್ಯವಿಲ್ಲದಿರುವುದೆಲ್ಲಾ ಕನಸೇ ಸರಿ. ನಾನು ಕಲ್ಯಾಣಕ್ಕೆ ಹೋಗಿದ್ದಾಗ ಕೆಲವೇ ತಾಸುಗಳಲ್ಲಿ ಎಷ್ಟೋ ಭಾಷಣಗಳನ್ನು ಕೇಳಬೇಕಾಗಿ ಬಂದಿತ್ತು. ಭ್ರಾಂತಿಯ ಸೈನಿಕರು ಅಸಂಖ್ಯಾತರಾಗಿರುವರೆಂಬ ತಿಳಿವಳಿಕೆ ನನಗಾಯಿತು. ಆ ಭ್ರಾಂತಿಗಳೇ ಅಂದಿನಿಂದಲೂ ನನ್ನನ್ನು ಬೆನ್ನತ್ತಿ ಬರು ತ್ತಿವೆ. ನನ್ನ ಸುತ್ತಲೂ ಅವುಗಳ ಖಡ್ಗಗಳೇ ಕಾಣಿಸುತ್ತಿವೆ. ಅವುಗಳನ್ನು ದೂಡಿ ಸರಿಯಾದ ದಾರಿ ಹಿಡಿಯಲು ಅಸಮರ್ಥನಾಗಿದ್ದೇನೆ."

"ಪ್ರಲೋಭನಗಳ ಮಾತು ದೊಡ್ಡದಲ್ಲ. ಬೈರಾಗಿಗಳೂ ಮಹಾತ್ಮರೂ ಪ್ರಲೋಭನಗಳಿಗೆ ಗುರಿಯಾಗುವುದು ಸಹಜವೆಂದು ನಾವು ಕೇಳಿಬಲ್ಲೆವು. ದೇವದೂತರು ನಿಮ್ಮನ್ನು ಕೈಲಾಸಕ್ಕೊಯ್ಯಿರಲಿಕ್ಕಿಲ್ಲ. ಅವರ ಬದಲು ಆ ಛಾಯೆಗಳೇ ಆ ಕೆಲಸ ಮಾಡಿರಲು ಸಾಕು. ಅಲ್ಲಿ ನೆರೆದಿದ್ದ ಶಿಷ್ಯರೂ, ಭಕ್ತರೂ, ಇನ್ನಿತರರೂ ತಾವು ಕೈಲಾಸಾರೋಹಣ ಮಾಡಿದ್ದು ನಿಜವೆಂದು

ಹೇಳುತ್ತಾರೆ."

"ಅದು ಅವರ ಭ್ರಾಂತಿಯಷ್ಟೆ. ನಾನು ಸ್ವರ್ಗಾರೋಹಣ ಮಾಡಲಿಲ್ಲ. ಛಾಯೆಗಳ ಕೈಗೆ ಸಿಕ್ಕು ಇಲ್ಲಿಗೆ ಬಂದುಬಿಟ್ಟೆ."

"ಏನೇ ಆದರೂ ನಮ್ಮ ದೃಷ್ಟಿಯಲ್ಲಿ ನೀವು ಪೂಜ್ಯರೇ ಆಗಿದ್ದೀರಿ. ನಾವಿನ್ನು ಹೊರಡುತ್ತೇವೆ. ಗುರುಮಹಾರಾಜರು ಶ್ರೀಶೈಲಗಿರಿಯ ಆಶ್ರಮದಲ್ಲಿ ಬಹಳ ದಿನ ನಿಲ್ಲುವುದಿಲ್ಲವಂತೆ. ಅವರು ಪುನಃ ಗುಹೆಗೆ ಹೋಗುವುದರೊಳಗಾಗಿ ನಾವು ಅವರ ದರ್ಶನ ಪಡೆಯಬೇಕಲ್ಲ?"

"ನಾನೂ ಅವರ ದರ್ಶನ ಪಡೆಯಬೇಕು. ಏಳಿರಿ ಹೋಗೋಣ. ನಾನೂ ನಿಮ್ಮ ಸಂಗಡಲೇ ಬರುತ್ತೇನೆ. ನನಗೂ ಒಂದು ಹಣ್ಣು ಕೊಡಿ." ಎಂದ ಸಿದ್ಧನಾಥ.

ಬೈರಾಗಿಗಳ ಮುಂದಾಳು ಹೇಳಿದ:

"ಬಹಳ ಸಂತೋಷ. ಬನ್ನಿ. ತಮ್ಮಂಥ ಮಹಾತ್ಮರ ಜೊತೆ ಸಿಗುವುದೇ ಒಂದು ಭಾಗ್ಯದ ವಿಷಯ. ನಾನು ಮತ್ತು ನೀವು ಇಬ್ಬರೂ ಮುಂದೆ ಮುಂದೆ ನಡೆಯೋಣ. ಇವರೆಲ್ಲರೂ ಭಜನೆ ಮಾಡುತ್ತಾ ನಮ್ಮನ್ನು ಹಿಂಬಾಲಿಸುವರು."

ದೇಗುಲವನ್ನು ತ್ಯಜಿಸಿ ಅವರು ಶ್ರೀಶೈಲದ ಮಾರ್ಗವಾಗಿ ಹೊರಟರು.

ದಾರಿ ತುಳಿಯುತ್ತಿದ್ದ ಹಾಗೆ ಸಿದ್ಧನಾಥ ಹೇಳತೊಡಗಿದ:

"ದೇವರು ಒಬ್ಬನೇ ಇದಾನೆ. ಅವನೇ ಸತ್ಯ. ಆ ಸತ್ಯವೂ ಒಂದೇ ಇದೆ. ಲೋಕಗಳು ಅನೇಕವಾಗಿವೆ. ಅವೆಲ್ಲಾ ಭ್ರಾಂತಿಗಳಾಗಿವೆ. ಎಲ್ಲಾ ವಸ್ತುಗಳ ಬಗೆಗೂ ನಮಗೆ ವೈರಾಗ್ಯ ಹುಟ್ಟಬೇಕು—ವಸ್ತುಗಳು ಎಷ್ಟು ನಿರ್ದುಷ್ಟವಾಗಿದ್ದರೂ ಸರಿಯೆ. ಅವು ಕೆಟ್ಟವುಗಳೆಂಬುದಕ್ಕೆ, ಅವುಗಳಿಗೆ ಸುಂದರ ರೂಪವನ್ನೀಯುವ ಅನೇಕತೆಗಳೇ ಪ್ರಮಾಣಗಳಾಗಿವೆ. ಅಂತೆಯೇ ಶಾಂತವಾದ ಸರೋವರದಲ್ಲಿ ತೇಲಾಡುವ ಕಮಲದಳಗಳನ್ನು ನೋಡುವಾಗಲೂ ನಾವು ದುಃಖಿತರಾಗುತ್ತೇವೆ. ಇಂದ್ರಿಯಗಳೊಡನೆ ಸಂಬಂಧಪಟ್ಟ ಎಲ್ಲಾ ವಸ್ತುಗಳೂ ತಿರಸ್ಕರಣೀಯವಾದುವು. ಉಸುಕಿನದೊಂದು ಕ್ಷುಲ್ಲಕ ಕಣವೂ ವಿಪತ್ತನ್ನುಂಟು ಮಾಡಬಲ್ಲುದು. ಪ್ರತಿಯೊಂದು ವಸ್ತುವೂ ನಮಗೆ ಪ್ರಲೋಭನವನ್ನುಂಟು ಮಾಡುತ್ತದೆ. ವಾಯುವಿನಲ್ಲಿ ಹಾರಾಡುವ, ಭೂಮಿಯ

ಮೇಲೆ ಓಡಾಡುವ, ನೀರಿನ ಮೇಲೆ ತೇಲಾಡುವ ಬಗೆಬಗೆಯ ಪ್ರಲೋಭನಗಳ ಮಿಶ್ರಿತ ರೂಪವೆಂದರೇನೇ ಹೆಣ್ಣು. ಯಾವಾತನ ಆತ್ಮ ಶುದ್ಧವಾಗಿರುವುದೋ ಅವನೇ ಸುಖಿ. ಮೂರ್ಕನಾಗಿರುವವನೇ ಪ್ರಸನ್ನಚಿತ್ತ. ಕುರುಡನೂ ಕಿವುಡನೂ ಆಗಿದ್ದು ಈ ಲೋಕದ ಬಗ್ಗೆ ಏನನ್ನೂ ಅರಿಯದೆ ಕೇವಲ ಭಗವಂತನನ್ನು ಅರಿಯಲೆತ್ನಿಸುವವನೇ ಪರಮ ಸುಖಿ."

ಸಿದ್ಧನಾಥನ ಈ ಮಾತುಗಳನ್ನು ಕುರಿತು ವಿಚಾರ ಮಾಡುತ್ತ ಮುಖ್ಯ ಬೈರಾಗಿ ಹೇಳಿದ:

"ಪೂಜ್ಯ ಗುರುಮಹಾರಾಜ್, ನಿಮ್ಮ ಹೃದಯವನ್ನೇ ತೆರೆದು ಅದರಲ್ಲಿನ ವಿಚಾರಗಳನ್ನೆಲ್ಲಾ ವ್ಯಕ್ತಗೊಳಿಸಿದಿರಿ. ನಾನೂ ಕೂಡಾ ನನ್ನ ಪಾಪಗಳನ್ನು ನಿಮ್ಮೆದುರು ತೋಡಿಕೊಳ್ಳುವುದು ಅಗತ್ಯ. ನಮ್ಮ ಧರ್ಮಪಂಥದ ನಿಯಮಗಳಿಗನುಸಾರವಾಗಿ ನಾವು ಪರಸ್ಪರರೆದುರು ಪಾಪಗಳನ್ನೊಪ್ಪಿಕೊಳ್ಳಬೇಕಷ್ಟೆ?"

"ಅಗತ್ಯವಾಗಿ."

"ಹಾಗಾದರೆ ಕೇಳಿ. ಸಂನ್ಯಾಸ ಸ್ವೀಕರಿಸುವ ಮುನ್ನ ನಾನು ಈ ಸಂಸಾರದಲ್ಲಿ ಅತ್ಯಂತ ಹೇಯವಾದ ರೀತಿಯಲ್ಲಿ ಜೀವಿಸಿದೆ. ವೇಶ್ಯೆಯರಿಗಾಗಿ ಪ್ರಸಿದ್ಧವಾಗಿರುವ ಹೂಬಳ್ಳಿ ನಗರದಲ್ಲಿದ್ದುಕೊಂಡು ಬಗೆಬಗೆಯ ಭೋಗವಿಲಾಸಗಳಲ್ಲಿ ಮುಳುಗಿದ್ದೆ. ಪ್ರತಿ ರಾತ್ರೆ ಯುವಕರೂ ಕಾಮುಕರೂ ಆದ ಪುರುಷರೊಡನೆಯೂ ವೀಣೆ ಬಾರಿಸುವ ಸ್ತ್ರೀಯರೊಡನೆಯೂ ಭೋಜನ-ಪಾನ ಮಾಡುತ್ತಿದ್ದೆ. ಎಲ್ಲರಿಗಿಂತ ಆಕರ್ಷಿತಳಾದ ಸ್ತ್ರೀಯನ್ನು ಮನೆಗೆ ಕರೆದೊಯ್ದು ಅವಳೊಡನೆ ರತಿಸುಖ ಸಂಭೋಗದಲ್ಲಿ ತಲ್ಲೀನನಾಗುತ್ತಿದ್ದೆ. ನನ್ನ ವಿಷಯಾಸಕ್ತಿಯ ತೀವ್ರತೆಯನ್ನು ನಿಮ್ಮಂಥ ಮಹಾತ್ಮರು ಊಹಿಸಿಕೊಳ್ಳುವುದಕ್ಕೂ ಸಾಧ್ಯವಾಗದು. ಅಂಥ ಭಯಂಕರ ಕಾಮುಕತೆ ನನ್ನದು. ವಿವಾಹಿತರಾದ ಪ್ರೌಢೆಯರೂ ನನ್ನ ಹಿಡಿತದಿಂದ ಪಾರಾಗುತ್ತಿರಲಿಲ್ಲ. ಅವಿವಾಹಿತ ಯುವತಿಯರೂ ನನ್ನಿಂದ ತಪ್ಪಿಸಿಕೊಳ್ಳುವಂತಿರಲಿಲ್ಲ. ವೇಶ್ಯೆಯರಂತೂ ಸರಿಯೆ. ವಿರಾಗಿಣಿಯರಾದ ಸಂನ್ಯಾಸಿನಿಯರನ್ನೂ ನಾನು ಬಿಡಲಿಲ್ಲ. ನಾಲ್ಕು ಕಡೆಗಳಲ್ಲೂ ವ್ಯಭಿಚಾರವನ್ನೂ ಅಪವಿತ್ರತೆಯನ್ನೂ ಹರಡಿತು ನನ್ನ ಕಾಮುಕತೆ. ಮದಿರೆಯ ಮೂಲಕ ನಾನು ನನ್ನ ಇಂದ್ರಿಯಗಳನ್ನು ಉತ್ತೇಜಿತಗೊಳಿಸುತ್ತಿದ್ದೆ. ಹೂಬಳ್ಳಿ ನಗರದ ಮೊದಲನೆಯ ದರ್ಜೆಯ ಕುಡುಕರಲ್ಲಿ ನಾನೇ ಮೊದಲಿಗನಾಗಿದ್ದೆ.

ಇಂಥ ಪತಿತನಾಗಿದ್ದಾಗಲೂ ದೇವರಲ್ಲಿ ನನಗೆ ಶ್ರದ್ಧೆಯಿತ್ತು. ನಾನೂ ಆಸ್ತಿಕ ನಾಗಿದ್ದೆ. ನನ್ನ ಮನೆಮಾರು ಸಂಪತ್ತು ಆಸ್ತಿಪಾಸ್ತಿ ಎಲ್ಲವನ್ನೂ ವ್ಯಭಿಚಾರ ದಲ್ಲಿ ನಷ್ಟಗೊಳಿಸಿದ ತರುವಾಯ ದಾರಿದ್ರ್ಯದ ಪೂರ್ವಪೀಡೆಯ ಅನುಭವ ನನಗಾಗತೊಡಗಿತು. ಇದೇ ಸಮಯದಲ್ಲಿ, ನನ್ನ ಗೆಳೆಯರಲ್ಲೆಲ್ಲ ಆರೋಗ್ಯ ವಂತನೂ ಆನಂದಿತನೂ ಆದವನೊಬ್ಬ ಭಯಂಕರ ರೋಗವೊಂದರ ಜಾಲಕ್ಕೆ ಸಿಲುಕಿ ಒದ್ದಾಡುವುದನ್ನು ನೋಡಿದೆ. ಅವನ ಕಾಲುಗಳು ಶಿಥಿಲವಾಗಿದ್ದುವು. ಕೈಗಳಲ್ಲಿನ ಸಾಮರ್ಥ್ಯವೆಲ್ಲಾ ಮಾಯವಾಗಿತ್ತು. ಕಣ್ಣುಗಳಲ್ಲಿನ ಜ್ಯೋತಿಯೂ ಹೊರಟುಹೋಗಿ ಅಂಧತ್ವ ಪ್ರಾಪ್ತವಾಗಿತ್ತು. ಆರ್ತಧ್ವನಿಯ ಹೊರತು ಇನ್ನೇನೂ ಹೊರಡುತ್ತಿರಲಿಲ್ಲ ಅವನ ಕಂಠದಿಂದ. ದೇಹದಂತೆಯೇ ಅವನ ಮೆದುಳೂ ನಿದ್ದೆಹೋಗಿತ್ತು. ಆತ ಪಶುತುಲ್ಯ ಜೀವನ ನಡೆಸಿದ್ದಕ್ಕೆ ಶಿಕ್ಷೆಯೆಂದು ಅವನನ್ನು ಪಶುವಿನ ಹಾಗೇ ಮಾಡಿಬಿಟ್ಟಿದ್ದ ಭಗವಂತ. ಹಣದ ಅಭಾವದಿಂದಾಗಿ ನನ್ನಲ್ಲಿ ಆ ವೇಳೆಗಾಗಲೆ ಒಳ್ಳೆಯ ಬುದ್ಧಿ ಜಾಗೃತವಾಗಿತ್ತು. ಗೆಳೆಯನ ಈ ಉದಾಹರಣೆಯಿಂದ ಮನಸಿನ ಮೇಲೆ ಇನ್ನೂ ಪರಿಣಾಮವಾ ಯಿತು. ಸಂಸಾರದಲ್ಲಿ ಏನೂ ಅರ್ಥವಿಲ್ಲವೆಂದು ನನಗೆ ಮನವರಿಕೆಯಾ ಯಿತು. ಆಗಲೇ ನಾನು ಸಂಸಾರ ತ್ಯಾಗ ಮಾಡಿ ಸಂನ್ಯಾಸ ಸ್ವೀಕರಿಸಿ ನಿರ್ಜನ ಪ್ರದೇಶಕ್ಕೆ ಬಂದುಬಿಟ್ಟೆ. ಇಪ್ಪತ್ತು ವರ್ಷಗಳ ಕಾಲ ನಾನು ಶಾಂತಿ ಸುಖವನ್ನನುಭವಿಸಿದೇನೆ. ಈ ಮಧ್ಯೆ ಯಾವ ವಿಘ್ನವೂ ಬಂದೊದಗಲಿಲ್ಲ. ನನ್ನ ಸಹ–ಸಂನ್ಯಾಸಿಗಳ ಜೊತೆಯಲ್ಲಿ ಅತ್ಯಂತ ಸುಖದಿಂದ ಕಾಲ ಕಳೆದಿ ದೇನೆ. ಪುರಾತನರ ಕೃತಿಗಳ ಪ್ರತಿ ತೆಗೆಯುವ ಲೇಖನ ಕಾರ್ಯದಲ್ಲೂ ನಾನು ಸಂತೋಷ ಪಡೆದಿದೇನೆ. ಈ ಕಾರ್ಯದಲ್ಲಿ ಅಂಥ ಸ್ವಾರಸ್ಯವೇನೂ ಇಲ್ಲ. ಆದರೂ, ವಿಚಾರಗಳಿಗಿಂತ ಕರ್ಮಕ್ಕೇ ನಾನು ಹೆಚ್ಚು ಮಹತ್ವ ಕೊಡುತ್ತೇನೆ. ನನ್ನ ದಿವಸಗಳು ಆನಂದದಿಂದ ಕಳೆಯುತ್ತವೆ. ರಾತ್ರಿಗಳು ಸ್ವಪ್ನರಹಿತವಾಗಿ ಸುಖದಾಯಕವಾಗಿರುತ್ತವೆ. ನನ್ನ ಮೇಲೆ ಭಗವಂತನ ಕೃಪೆಯಿದೆಯೆಂದೇ ನಾನು ನಂಬಿದ್ದೇನೆ. ಏಕೆಂದರೆ ಭಯಂಕರ ಪಾಪಕರ್ಮ ಗಳಲ್ಲಿ ನಿರತನಾಗಿದ್ದಾಗಲೂ ನಾನು ಆಸೆ ತ್ಯಜಿಸಲಿಲ್ಲ, ನಂಬುಗೆ ಕಳೆದು ಕೊಳ್ಳಲಿಲ್ಲ."

ಬೈರಾಗಿ ಹೇಳಿ ಮುಗಿಸುತ್ತಲೂ ಸಿದ್ಧನಾಥ ಆಕಾಶದ ಕಡೆ ದೃಷ್ಟಿ

ತಿರುಗಿಸಿ ಹೇಳಿದ:

“ಹೇ ಭಗವಂತಾ! ಇಷ್ಟೊಂದು ಪಾಪ, ವ್ಯಭಿಚಾರ, ಅಪವಿತ್ರತೆಗಳಿಂದ ತುಂಬಿರುವ ವ್ಯಕ್ತಿಯನ್ನು ನೀನು ಕೃಪಾದೃಷ್ಟಿಯಿಂದ ನೋಡುತ್ತೀಯೆ. ಸದಾ ಕಾಲವೂ ನಿನ್ನ ಅಪ್ಪಣೆಗಳಂತೆ ನಡೆದು ಬಂದಿರುವ ನನ್ನಿಂದ ಮಾತ್ರ ದೂರ ಓಡುತ್ತೀಯೆ. ಪರಮಾತ್ಮಾ, ನಿನ್ನ ನ್ಯಾಯ ಎಷ್ಟು ವಿಚಿತ್ರ! ನಿನ್ನ ಕೃತಿ ಎಷ್ಟು ವಿಲಕ್ಷಣ!”

ಮುಖ್ಯ ಬೈರಾಗಿ ಕೈಯೆತ್ತಿ ಹೇಳಿದ:

“ಅಲ್ಲಿ ನೋಡಿದಿರಾ ತಂದೇ! ಕ್ಷಿತಿಜದ ಅಂಚಿನಗುಂಟ ಚುಕ್ಕೆಗಳು ಕಾಣುತ್ತಿಲ್ಲವೇ? ಅವರೂ ನಮ್ಮ ಬಂಧುಗಳೇ. ನಮ್ಮ ಹಾಗೇ, ಗುರು ಮಹಾರಾಜರನ್ನು ಸಂದರ್ಶಿಸಲು ಹೊರಟಿದ್ದಾರೆ.”

# ೧೧

ಹಗಲಿರುಳು ಹಾದಿ ತುಳಿದು ಅವರು ಗಿರಿಯ ಬಳಿ ಬಂದಾಗ ಅಲ್ಲಿ ಅದ್ಭುತ ದೃಶ್ಯವೊಂದು ಕಾಣಿಸಿತು.

ಗಿರಿಯ ಮೇಲೆ ಎಲ್ಲ ಕಡೆಗೂ ಕೇವಲ ಸಂನ್ಯಾಸಿಗಳೇ ದೃಷ್ಟಿಗೆ ಬೀಳುತ್ತಿದ್ದರು. ಪರ್ವತದಲ್ಲಿನ ಗಿಡ ಮರ, ಪಶು ಪಕ್ಷಿಗಳಿಗಿಂತ ಸಂನ್ಯಾಸಿಗಳ ಸಂಖ್ಯೆಯೇ ಅಧಿಕವಾಗಿದ್ದಂತೆ ತೋರುತ್ತಿತ್ತು. ಆಶ್ರಮದ ಕುಟೀರಗಳೆಲ್ಲವೂ ಅತಿಥಿಗಳಿಂದ ಕಿಕ್ಕಿರಿದು ತುಂಬಿದ್ದುವು. ಗಿಡ ಮರಗಳ ಅಡಿಯಲ್ಲೂ ಝರಿಗಳ ತೀರದಲ್ಲೂ ಹತ್ತಿರದಲ್ಲಿದ್ದ ಗುಹೆಗಳಲ್ಲೂ ಬೈರಾಗಿಗಳು ಬಿಡಾರ ಹೂಡಿದ್ದರು. ಇನ್ನೂ ಸಾವಿರಾರು ಜನರು ಆಕಾಶವನ್ನೇ ಆಸರೆಯಾಗಿಟ್ಟುಕೊಂಡು ಬಯಲು ಸ್ಥಳದಲ್ಲಿಯೇ ಇಳಿದುಕೊಂಡಿದ್ದರು. ದಕ್ಷಿಣ ಭಾರತ, ಉತ್ತರ ಭಾರತ, ಪೂರ್ವ ಭಾರತ, ಪಶ್ಚಿಮ ಭಾರತಗಳ, ಬೇರೆ ಬೇರೆ ಮುಖಾಕೃತಿಗಳ ಬೇರೆ ಬೇರೆ ಭಾಷೆಯನ್ನಾಡುವ ಸಂನ್ಯಾಸಿಗಳೆಲ್ಲರೂ ಶೈವಪಂಥೀಯ ಮಹಾಗುರುವಿಗೆ ಕೊನೆಯ ಗೌರವವನ್ನರ್ಪಿಸುವ ಏಕಮಾತ್ರ ಉದ್ದೇಶದಿಂದ ಅಲ್ಲಿಯವರೆಗೆ ಧಾವಿಸಿ ಬಂದಿದ್ದರು. ಕೆಲವು ಸಾಧುಗಳ ಬಣ್ಣ ಕತ್ತಲೆಯಂತೆ ಕಪ್ಪಾಗಿದ್ದರೆ ಬೇರೆ ಕೆಲವರದು ಗುಲಾಬಿಯಂತೆ ಗೌರವಾಗಿತ್ತು. ಕಂದು ಬಣ್ಣದವರಿದ್ದರು, ಗೋದಿಗೆಂಪು ಬಣ್ಣದವರಿದ್ದರು, ಹಳದಿಗಪ್ಪು ಬಣ್ಣದವರೂ ಕೆಲವರಿದ್ದರು. ಕೆಲವರು ಗಡ್ಡಮೀಸೆ ಬೆಳೆಸಿದ್ದರು, ಕೆಲವರು ಒಂದು ಕೂದಲನ್ನೂ ಬಿಡದೆ ತೆಗೆದು ಹಾಕಿದ್ದರು. ಕೆಲವರು ಕೌಪೀನಧಾರಿಗಳಾಗಿದ್ದರೆ ಇನ್ನು ಕೆಲವರು ಸಂಪೂರ್ಣ ನಗ್ನರಾಗಿದ್ದರು. ಅಂತೂ, ರಾಷ್ಟ್ರದ ಶೈವ ಸಾಧುಗಳೆಲ್ಲರೂ ಆಲ್ಲಿ ನೆರೆದಂತೆ ತೋರುತ್ತಿತ್ತು.

ಆ ಗದ್ದಲದಲ್ಲಿ ಹಾದಿ ತೆಗೆಯುತ್ತ ಸಿದ್ಧನಾಥ ತನ್ನ ಆಶ್ರಮಕ್ಕೆ ಬಂದು ಶಿಷ್ಯರನ್ನು ಕೂಗಿದ. ಆದಿನಾಥ ಮತ್ತು ಬಿಂದುನಾಥ ಇಬ್ಬರೂ ಧಾವಿಸಿ ಬಂದು ಸಿದ್ಧನಾಥನ ಅಡಿಗಳಿಗೆರಗಿ ಹರ್ಷದಿಂದ ಉದ್ಗಾರ ತೆಗೆದರು:

"ಮಹಾತ್ಮಾ ಸಿದ್ಧನಾಥ ಬಂದರು....ಸಿದ್ಧನಾಥ ಬಂದರು...."

ಕ್ಷಣಮಾತ್ರದಲ್ಲಿಯೇ ಆ ವಾರ್ತೆ ಸಂನ್ಯಾಸಿಗಳ ಸಮೂಹದಲ್ಲೆಲ್ಲ ಹರಡಿತು.

"ನಮ್ಮ ಪಂಥದ ಹೆಮ್ಮೆಯ ಸಂನ್ಯಾಸಿ ಸಿದ್ಧನಾಥ ಬಂದರು....ನರಕವನ್ನು ಗೆದ್ದ ವೀರ ಸಂನ್ಯಾಸಿ ಬಂದರು....ಪೂಜ್ಯಪಾದ ಮಹಾಗುರುವಿನ ಪ್ರಿಯ ಶಿಷ್ಯ ಬಂದರು...."

ಸಿದ್ಧನಾಥನನ್ನು ನೋಡಲೆಂದು ಸಂನ್ಯಾಸಿಗಳು ಅವನತ್ತ ನುಗ್ಗುತ್ತಿದ್ದಂತೆಯೇ ದೂರದಿಂದ ಮತ್ತೊಂದು ಧ್ವನಿ ಕೇಳಬಂದಿತು.

"ಬಂದರು....ಬಂದರು....ಮಹಾ ಗುರುಗಳು ಬಂದರು....ಪೂಜ್ಯಪಾದ ತಂದೆ ಬಂದರು....ಗೌರೀಶಂಕರನ ಪ್ರಿಯ ಕಂದ ಬಂದರು...."

ಆದರೊಡನೆಯೆ, ಎಲ್ಲೆಡೆಗೂ ಶಾಂತತೆಯುಂಟಾಯಿತು. ಸಂನ್ಯಾಸಿಗಳೆಲ್ಲರೂ ನತಮಸ್ತಕರಾಗಿ ಮಹಾಗುರುವಿನ ಆಗಮನವನ್ನೆ ಎದುರು ನೋಡುತ್ತ ನಿಂತರು.

ಬೆಟ್ಟದ ಶಿಖರದಲ್ಲಿದ್ದ ತನ್ನ ಗುಹೆಯಿಂದ ಹೊರಬಿದ್ದು, ಶಿಷ್ಯರಿಬ್ಬರ ಭುಜಗಳ ಮೇಲೆ ಕೈಹಾಕಿಕೊಂಡು ಪೂಜ್ಯಪಾದ ಮಹಾಗುರು ಇಳಿದು ಬರುತ್ತಿದ್ದ.

ಆತ ಸಿದಾನವಾಗಿ ಒಂದೊಂದೇ ಹೆಜ್ಜೆಯಿಡುತ್ತ ಬರುತ್ತಿದ್ದ. ಶರೀರ ಕುಗ್ಗಿ ಹೋಗಿದ್ದಿತಾದರೂ ಅದರಲ್ಲೂ ಅಸಾಧಾರಣ ಶಕ್ತಿಯಿದ್ದುದು ದೂರದಿಂದ ನೋಡುವವರಿಗೂ ಗೊತ್ತಾಗುತ್ತಿತ್ತು. ಆತನ ಬಿಳಿಯ ಗಡ್ಡ ಎದೆಯ ವರೆಗೂ ಇಳಿಬಿದ್ದಿತ್ತು. ತೇಜಃಪೂರ್ಣ ಮಸ್ತಕದ ಮೇಲೆ ಪ್ರಕಾಶದ ಕಿರಣಗಳು ಆಟವಾಡುತ್ತಿದ್ದುವು. ಮುಖದ ಸುತ್ತಲೂ ಪ್ರಭಾವ ಮಂಡಲ ಹರಡಿತ್ತು. ಕಣ್ಣುಗಳು ಗರುಡನೇತ್ರಗಳಂತಿದ್ದುವು. ಮುಖದ ಮೇಲೆ ಹಸುಳೆನಗೆ ನಲಿದಾಡುತ್ತಿತ್ತು.

ಬೆಟ್ಟವಿಳಿದು ಆಶ್ರಮದ ಬಳಿ ಬಂದು ಆತ ತನ್ನ ಶಿಷ್ಯರನ್ನಾಶೀರ್ವದಿಸಲು ಕೈಯೆತ್ತಿದ. ಆ ಕೈ ಸಿಥಿಲವಾಗಿದ್ದಿತಾದರೂ ಇನ್ನೂ ಧೃಢವಾಗಿತ್ತು.

"ಜೈ ಗೌರೀಶಂಕರ್....ಜೈ ಶಿವಶಂಕರ್!" ಎಂದು ಘೋಷಿಸಿದ ಮಹಾಗುರು.

"ಜೈ ಗೌರೀಶಂಕರ್....ಜೈ ಶಿವಶಂಕರ್!" ಎಂದು ಶಿಷ್ಯಗಣವೆಲ್ಲವೂ ಏಕಕಂಠದಿಂದ ಮರುಘೋಷಣೆಗೈದಿತು.

ಪೂಜ್ಯಪಾದ ಉದ್ಗಾರ ತೆಗೆದ:

"ಹೇ ಭಗವಂತಾ, ನಿನ್ನ ಸೃಷ್ಟಿ ಎಷ್ಟು ಆಕರ್ಷಕವಾದದ್ದು! ನಿನ್ನ ಸ್ವರ್ಗ ಎಷ್ಟು ಸುಖಮಯವಾದದ್ದು!"

ಸಾಧುಸಮೂಹ ಮೇಘಗರ್ಜನೆಯಂತೆ ಘೋಷಿಸಿತು:

"ಭಗವಂತನನ್ನು ಓಲೈಸುವ ವ್ಯಕ್ತಿಗಳೇ ಧನ್ಯರು!"

ಸಾಧುಗಳ ಪಂಕ್ತಿಗಳ ನಡುವೆ ಹಾದು ಪೂಜ್ಯಪಾದ ಮಹಾಗುರು ಒಂದು ಆಮ್ರವೃಕ್ಷದ ಕೆಳಗೆ ಬಂದು ನಿಂತ. ಸ್ವರ್ಗ ನರಕಗಳೆರಡನ್ನೂ ಕಂಡು ಕೊಂಡ ಈ ಸಾಧು, ಬೆಟ್ಟದ ಶಿಖರದ ಮೇಲೆ ಕುಳಿತುಕೊಂಡು ಶೈವಧರ್ಮೀಯರ ಮೇಲೆ ಅಧಿಕಾರ ನಡೆಸಿಕೊಂಡು ಬಂದ ಈ ಬೈರಾಗಿ, ಭಯಂಕರ ಗಂಡಾಂತರ ದಿನಗಳಲ್ಲೂ ದೃಢತೆಯಿಂದಿದ್ದ ಈ ಸಂನ್ಯಾಸಿ, ನಾಸ್ತಿಕರನ್ನು ಮಣ್ಣುಮುಕ್ಕಿಸುವಂಥ ಪ್ರಖರ ವಾಕ್ಶಕ್ತಿ ಪಡೆದಿದ್ದ ಈ ತಪಸ್ವಿ ಕೊನೆಯಬಾರಿಗೆ ತನ್ನ ಧರ್ಮಶಿಷ್ಯರೆಲ್ಲರನ್ನೂ ಪ್ರೇಮದಿಂದ ಕಂಡು, ಮಾತನಾಡಿಸಿ, ಹರಸಿ ಬೀಳ್ಕೊಳ್ಳುತ್ತಿದ್ದ. ಅಂದೇ ಅವನ ಮೃತ್ಯುವಿನ ಶುಭಸಮಯ ನಿಶ್ಚಿತವಾಗಿತ್ತು. ಕರುಣಾಶಾಲಿಯಾದ ಭಗವಂತ ಆತನನ್ನು ಅದೇ ದಿನ ತನ್ನ ಚರಣಗಳ ಬಳಿ ಕರೆದೊಯ್ಯುವವನಿದ್ದ.

ದೂರದೂರದಿಂದ ಆಗಮಿಸಿದ್ದ ಸಾಧುಗಳನ್ನು ಕುರಿತು ಆತ ಹೇಳಿದ:

"ನಿಮ್ಮ ಅಧೀನದಲ್ಲಿ ಅಸಂಖ್ಯಾತ ಗಣಂಗಳಿದ್ದಾರೆ, ಯುದ್ಧಕಲೆಯಲ್ಲೂ ನೀವು ನಿಷ್ಣಾತರಾಗಿದ್ದೀರಿ. ಸ್ವರ್ಗದಲ್ಲಿ ನಿಮಗೆಲ್ಲರಿಗೂ ಸ್ವರ್ಣವಸ್ತ್ರಗಳು ಲಭಿಸುವವು, ಗೌರೀಶಂಕರನ ಆಸ್ಥಾನದಲ್ಲಿ ಅತ್ಯುಚ್ಚ ಸ್ಥಾನಗಳು ಸಿಕ್ಕುವವು."

ವೃದ್ಧ ಆದಿನಾಥನನ್ನು ಕಂಡು, ಅವನ ಬಳಿ ಬಂದು, ಅವನ ಮಸ್ತಕದ ಮೇಲೆ ವರದ ಹಸ್ತವಿರಿಸಿ ಮಹಾಗುರು ಹೇಳಿದ:

"ಈತ ನನ್ನ ಪರಮಪ್ರಿಯ ಪುತ್ರ. ಇವನ ಉದ್ಯಾನದಲ್ಲಿ ಬೆಳೆಯುವ ಪುಷ್ಪಗಳಂತೆಯೇ ಇವನ ಆತ್ಮವೂ ಸುಗಂಧಿತವಾಗಿದೆ."

ಸಿದ್ಧನಾಥನನ್ನು ಕರೆದುಕೊಂಡು ಬಂದ ಬೈರಾಗಿಗಳ ಮುಖಂಡನನ್ನು ಕುರಿತು ಮಹಾಗುರು ಹೇಳಿದ:

"ಈಶ್ವರನ ಶಕ್ತಿಯನ್ನು ನೀನೆಂದೂ ತಿರಸ್ಕರಿಸಿರಲಿಲ್ಲ. ಅಂತೆಯೇ ಪರಮಾತ್ಮನ ದಯೆ ನಿನ್ನ ಮೇಲಿದೆ. ನಿನ್ನ ಪಾಪಗಳ ಪಂಕದಲ್ಲಿಯೆ ನಿನ್ನ ಕೀರ್ತಿ ಕಮಲ ಅರಳಿದೆ."

ಅದೇ ಪ್ರಕಾರ ಆತ ಎಲ್ಲರೊಡನೆ ಅರ್ಥಪೂರ್ಣ ಮಾತುಗಳನ್ನಾಡಿದ.

ವೃದ್ಧರನ್ನು ಕುರಿತು ಆತನೆಂದ:

"ಭಗವಂತನ ಸಿಂಹಾಸನದ ಸುತ್ತಲೂ ವೃದ್ಧ ತಪಸ್ವಿಗಳು ಶ್ವೇತವಸ್ತ್ರ ಧಾರಿಗಳಾಗಿ ಮಂಡಿಸಿರುತ್ತಾರೆ. ನೀವೇ ಪರಮ ಸುಖಿಗಳು!"

ಯುವಕರನ್ನು ಕುರಿತು ಆತನೆಂದ:

"ಯಾವಾಗಲೂ ಪ್ರಸನ್ನತೆಯಿಂದಿರಿ. ಸಂಸಾರದಲ್ಲಿ ಸುಖಪಡೆಯುವವರ ಪಾಲಿಗೇ ಉದಾಸೀನತೆಯನ್ನೆಲ್ಲ ಬಿಟ್ಟುಬಿಡಿ."

ಈ ರೀತಿಯಾಗಿ ಉಪದೇಶಿಸುತ್ತ ಆತ ಹತ್ತಿರ ಹತ್ತಿರ ಬಂದ ಹಾಗೆ ಸಿದ್ಧನಾಥನ ಎದೆ ಬಡಿದುಕೊಳ್ಳತೊಡಗಿತು. ಭೀತಿಯಿಂದಲೂ ಆಶಂಕೆಯಿಂದಲೂ ಕಂಪಿಸುತ್ತ ಆತ ಮೊಳಕಾಲುಗಳನ್ನೂರಿ ಕುಳಿತು ಗುರುವಿನ ಪಾದಗಳಿಗೆ ಹಣೆ ಹಚ್ಚಿದ.

"ಎದ್ದೇಳು ಪ್ರಿಯಶಿಷ್ಯಾ, ನನ್ನ ಪರಮಪ್ರಿಯ ಸಿದ್ಧನಾಥ, ಎದ್ದೇಳು." ಎಂದ ಮಹಾಗುರು.

ಸಿದ್ಧನಾಥ ಮೇಲಕ್ಕೇಳಲಿಲ್ಲ. ವೇದನೆಯಿಂದ ವಿಕೃತವಾದ ಸ್ವರದಲ್ಲಿ ಕೂಗಿಕೊಂಡ:

"ತಂದೇ! ತಂದೇ! ನನ್ನನ್ನುಳಿಸು. ನಾನು ಸಾಯುತ್ತಿದೇನೆ. ಮುಳುಗುತ್ತಿದೇನೆ. ಪಾತಾಳದಾಳಕ್ಕಿಳಿಯುತ್ತಿದೇನೆ."

"ಯಾಕಯ್ಯಾ? ಆದದ್ದಾದರೂ ಏನು?"

"ಆಗಬಾರದ್ದೇನೂ ಉಳಿಯಲಿಲ್ಲ ತಂದೇ! ನಾನು ಭಯಂಕರ ಸಂಕಟದಲ್ಲಿ ಸಿಲುಕಿಕೊಂಡಿದೇನೆ."

"ಸಮಾಧಾನ, ಸಮಾಧಾನ. ಏನಾಯಿತು ಹೇಳು."

ಹೃದಯವನ್ನೇ ಹೊರಗೆಳೆಯುವಂಥ ಧ್ವನಿಯಲ್ಲಿ ಸಿದ್ಧನಾಥ ಹೇಳಿದ:

"ಕಲ್ಯಾಣ ನಗರದ ಪತಿತ ಸ್ತ್ರೀ ಮುಕ್ತಾದೇವಿಯನ್ನುದ್ಧರಿಸಬೇಕೆಂದು ಭಗವಂತ ಆಜ್ಞೆ ವಿಧಿಸಿದ ಮೇರೆಗೆ ನಾನು ಅಲ್ಲಿಗೆ ಹೋಗಿ ಅವಳನ್ನು ಕರೆದು

ಕೊಂಡು ಬಂದು ಸಂನ್ಯಾಸಿನಿಯರ ಆಶ್ರಮಕ್ಕೆ ಸೇರಿಸಿದೆ. ಅವಳ ಆತ್ಮವನ್ನು ಪರಮಾತ್ಮನಿಗರ್ಪಿಸಿದೆ. ಅನಂತರ ಒಂದು ವರ್ಷದ ಕಾಲ ಒಂದು ಸ್ತಂಭದ ಮೇಲೆ ಕುಳಿತು ಸಮಾಧಿ ಸ್ಥಿತಿಯಲ್ಲಿದ್ದೆ. ಪ್ರಾರ್ಥನೆ ಮಾಡಿ ಮಾಡಿ ನಾನೇ ಪ್ರಾರ್ಥನೆಯಂತಾದೆ. ಆದರೂ ಪರಮಾತ್ಮ ನನ್ನ ಮೇಲೆ ಮುನಿದುಕೊಂಡೇ ಇದಾನೆ. ತಂದೇ, ನನ್ನನ್ನು ಆಶೀರ್ವದಿಸು. ನಾನು ಪುನಃ ನಿರ್ಮಲನಾಗುವಂತೆ, ಹಿಮಾಚಲದಂತೆ ಉಜ್ವಲನಾಗುವಂತೆ ಹರಸು."

ಉತ್ತರವಾಗಿ ಪೂಜ್ಯಪಾದ ಏನನ್ನೂ ಆಡಲಿಲ್ಲ. ತನ್ನ ಶಿಷ್ಯಗಣದ ಮೇಲೆ ಸ್ನಿಗ್ಧದೃಷ್ಟಿ ಬೀರುತ್ತಾ ಆತ ಮುಂದೆ ಸಾಗಿದ; ಆಶ್ರಮದ ಮುಗ್ಧ ಸಂನ್ಯಾಸಿ ಶಿಶುವನ್ನು ಕಂಡು ಅವನನ್ನು ಪ್ರೀತಿಯಿಂದ ಕರೆದ.

ಯಜಮಾನನ ಬಳಿ ಬರುವ ಸಾಕುಪ್ರಾಣಿಯಂತೆ ಶಿಶು ಮಹಾಗುರುವಿನ ಬಳಿ ಬಂದು ನಿಂತ.

"ಎಲಾ! ಈ ಹುಚ್ಚನೊಡನೆ ಏನು ಮಾತಾಡುವರೋ ಗುರುಗಳು!" ಎಂದು ಅನೇಕರು ಅಚ್ಚರಿಪಟ್ಟುಕೊಂಡರು.

ಪೂಜ್ಯಪಾದ ಮಹಾಗುರು ಹೇಳಿದ:

"ಸರಳ ಹೃದಯದ, ಮುಗ್ಧ ಸ್ವಭಾವದ ಈ ಶಿಶುವನ್ನೇ ಭಗವಂತ ನಿಮ್ಮೆಲ್ಲರಿಗಿಂತ ಹೆಚ್ಚಾಗಿ ಪ್ರೀತಿಸುತ್ತಾನೆ. ಹೌದೋ ಅಲ್ಲವೋ ಶಿಶು?"

"ಹೌದು ಗುರುವೇ!" ಎಂದ ಶಿಶು.

"ಪ್ರಿಯ ಪುತ್ರಾ, ಮೇಲೆ ನೋಡಿ ಆಕಾಶದಲ್ಲಿ ಏನು ಕಾಣುತ್ತದೆ ಹೇಳುವಿಯಾ?" ಎಂದು ಮಹಾಗುರು ಕೇಳಿದ.

ಮುಗ್ಧ ಶಿಶು ಕಣ್ಣುಗಳನ್ನು ಮೇಲೆತ್ತಿದ. ಅವನ ಮುಖದ ಮೇಲೆ ದಿವ್ಯ ಪ್ರಕಾಶ ಬೆಳಗತೊಡಗಿತು.

"ಆಕಾಶದಲ್ಲೊಂದು ಮಂಚ ಕಾಣುತ್ತಿದೆ. ಅದರ ಮೇಲೆ ನೀಲ ವರ್ಣದ ಪರದೆಗಳಿವೆ. ಬಂಗಾರದ ಗೊಂಡೆಗಳಿವೆ. ಬೇರಾರೂ ಅದನ್ನೇರದಂತೆ ನೋಡಿಕೊಳ್ಳುವುದಕ್ಕಾಗಿ ಮೂವರು ಅಪ್ಸರೆಯರು ಕಾವಲು ಮಾಡುತ್ತಿದಾರೆ." ಎಂದ ಶಿಶು.

ಆ ಮಂಚವೂ ಆ ಶಯ್ಯೆಯೂ ತನ್ನ ಪ್ರಶಂಸೆಯ ಪ್ರತೀಕಗಳೆಂದು

ಭಾವಿಸಿಕೊಂಡು ಸಿದ್ಧನಾಥ ಪರಮಾತ್ಮನಿಗೆ ಧನ್ಯವಾದಗಳನ್ನು ಸಮರ್ಪಿಸ ತೊಡಗಿದ.

ಮಹಾಗುರು ಕೈಯೆತ್ತಿ, ಸುಮ್ಮನಿರುವಂತೆ ಸಿದ್ಧನಾಥನಿಗೆ ಸೂಚಿಸಿ, ಶಿಶುವಿನ ಮಾತುಗಳ ಕಡೆ ಗಮನವೀಯುಲು ತಿಳಿಸಿದ.

ಉಲ್ಲಾಸಪೂರಿತ ಸ್ವರದಲ್ಲಿ ಶಿಶು ಮುಂದುವರಿಸಿದ್ದ:

"ಆ ಮೂವರು ಕುಮಾರಿಯರೂ ನನ್ನ ಸಂಗಡ ಮಾತಾಡುತ್ತಿದಾರೆ. ಅವರು ಹೇಳುತ್ತಿರುವುದೇನು ಗೊತ್ತೇ ? ಪೃಥ್ವಿಯಿಂದ ಯಾರೋ ಒಬ್ಬರು ಸಂತರು ಅಲ್ಲಿಗೆ ಹೋಗುವವರಿರುವರಂತೆ. ಅವರಾರು ಎಂದು ಕೇಳಿದರೆ ಕಲ್ಯಾಣದ ಮುಕ್ತಾದೇವಿ ಎಂದು ಹೇಳುತ್ತಾರೆ. ಅವರ ಅಂತ್ಯಕಾಲ ಸಮೀಪಿಸಿದೆಯಂತೆ. ಆಕೆಗಾಗಿಯೆ ಅವರು ಆ ಶಯ್ಯೆಯನ್ನು ಸಜ್ಜುಗೊಳಿಸಿರುವರಂತೆ. ಭಯ, ವಿಶ್ವಾಸ, ಪ್ರೇಮ ಎಂಬ ಆಕೆಯ ಮೂರು ಗುಣಗಳ ಪ್ರತೀಕವಾಗಿ ಅವರು ಅಲ್ಲಿ ಕಾಣಿಸಿಕೊಂಡಿರುವರಂತೆ."

"ಮತ್ತೇನು ಕಾಣುತ್ತದೆ ಪ್ರಿಯ ಪುತ್ರಾ ?" ಎಂದ ಪೂಜ್ಯಪಾದ.

ಶಿಶು ಅತ್ತಿತ್ತ ದೃಷ್ಟಿ ತಿರುಗಿಸುತ್ತ ಸುಮ್ಮನೆ ನಿಂತುಕೊಂಡಿದ್ದ. ಇದ್ದಕ್ಕಿದ್ದಂತೆಯೇ ಅವನ ದೃಷ್ಟಿ ಸಿದ್ಧನಾಥನ ಮೇಲೆ ಬಿತ್ತು. ಒಂದು ಬಗೆಯ ಭೀತಿಯಿಂದ ಅವನ ಮೊಗ ಬಿಳಿಚಿಕೊಂಡಿತು. ಅವನ ನೇತ್ರಗಳಿಂದ ಅಸಹಜವಾದ ರೀತಿಯಲ್ಲಿ ಜ್ವಾಲೆಗಳು ಹೊರಬೀಳತೊಡಗಿದುವು.

ಮತ್ತೆ ಶಿಶು ಮಾತನಾಡಿದ:

"ಮೂರು ಭೂತಗಳು ನನಗೆ ಕಾಣಿಸುತ್ತಿವೆ. ಈ ವ್ಯಕ್ತಿಯನ್ನು ಹಿಡಿಯಲೆಂದು ತುಂಬಾ ಉತ್ಸಾಹದಿಂದ ಸಿದ್ಧತೆ ನಡೆಸುತ್ತಿವೆ. ಅವುಗಳಲ್ಲೊಂದು ಭೂತ ಸ್ತಂಭಾಕೃತಿಯದಾಗಿದೆ, ಇನ್ನೊಂದು ಹೆಣ್ಣಿನ ಹಾಗಿದೆ, ಮತ್ತೊಂದು ಮಾಟಗಾರನ ಹಾಗಿದೆ. ಒಂದರ ಹಣೆಯ ಮೇಲೆ, ಇನ್ನೊಂದರ ಹೊಟ್ಟೆಯ ಮೇಲೆ, ಮತ್ತೊಂದರ ಎದೆಯ ಮೇಲೆ ಅವರ ಹೆಸರುಗಳು ಜ್ವಾಲಾಮಯ ಅಕ್ಷರಗಳಲ್ಲಿ ಕೆತ್ತಲ್ಪಟ್ಟಿವೆ. ಅಹಂಕಾರ, ವಿಲಾಸ, ಸಂಶಯ ಇವೇ ಆ ಹೆಸರುಗಳು....

"ಮತ್ತೇನೂ ಕಾಣಿಸುತ್ತಿಲ್ಲವೇ ಶಿಶು ?"

"ಇಲ್ಲ ಗುರುವೆ" ಎಂದು ಹೇಳಿ ಶಿಶು ಮತ್ತೆ ತನ್ನ ಪೂರ್ವದ ಸ್ಥಿತಿಯನ್ನೆ

ಹೊಂದಿ ಸಾಧಾರಣ ವ್ಯಕ್ತಿಯಂತೆ ಕಾಣಿಸಿಕೊಂಡ. ಅವನ ಮುಖ ಮ್ಲಾನ ವಾಯಿತು. ಕಣ್ಣುಗಳು ತೇಜೋಹೀನವಾದುವು.

ಸಂನ್ಯಾಸಿಗಳೆಲ್ಲರೂ ಚಿಂತಾತುರರಾಗಿ ಮಹಾಗುರುವನ್ನೇ ನೆಟ್ಟ ನೋಟ ದಿಂದ ನೋಡುತ್ತ ನಿಂತರು.

"ಪರಮಾತ್ಮ ತನ್ನ ಧಾರ್ಮಿಕ ನಿರ್ಣಯ ಸಾರಿ ಹೇಳಿದ. ಆತನ ಆಜ್ಞೆ ಯನ್ನು ಶಿರಸ್ಸಿನಲ್ಲಿ ಧರಿಸಿ ನಾವೆಲ್ಲರೂ ಸುಮ್ಮನಿರಬೇಕು." ಎಂದಿಷ್ಟೆ ಹೇಳಿದ ಮಹಾಗುರು.

ಮತ್ತೊಂದು ಬಾರಿ ಶಿಷ್ಯರನ್ನೆಲ್ಲ ಹರಸಿ ಆತ ತನ್ನ ಗುಹೆಗೆ ಹಿಂದಿರುಗಿ ನಡೆದ. ಅಷ್ಟರಲ್ಲಿ ಸೂರ್ಯನೂ ಕ್ಷಿತಿಜದ ಅಂಚನ್ನು ಮುಟ್ಟಿ ತನ್ನ ಪ್ರಕಾಶ ದಿಂದ ಅದನ್ನು ಬೆಳಗಿಸಿದ. ಅವನ ಛಾಯೆ ನೀಲ ಆಕಾಶದೊಡನೆ ಬೆರೆತು ವಿಶಾಲವಾದ ದರಿಯ ಹಾಗೆ ಹರಡಿಕೊಂಡಿತು.

ಪೂಜ್ಯಪಾದ ಮಹಾಗುರುವಿನ ಛಾಯೆಯೂ ಅವನ ಶಿಷ್ಯಕೋಟಿಯ ನ್ನಾವರಿಸಿತು.

೧೨

ಶಿಲಾಪ್ರತಿಮೆಯಂತೆ ಸಿದ್ಧನಾಥ ನಿಂತಿದ್ದ.

ಸುತ್ತಲೂ ನೆರೆದಿದ್ದ ಸಂನ್ಯಾಸಿಗಳು ಏನೇನನ್ನೋ ಮಾತನಾಡುತ್ತಿದ್ದರು. ಸಿದ್ಧನಾಥನಿಗೆ ಯಾವುದೂ ಕೇಳಿಸುತ್ತಿರಲಿಲ್ಲ, ಯಾವುದೂ ಕಾಣಿಸುತ್ತಿರಲಿಲ್ಲ.

"ಮುಕ್ತಾದೇವಿ ಸಾಯುವುದರಲ್ಲಿದಾಳೆ....ಅವಳ ಅಂತ್ಯಕಾಲ ಸಮೀಪಿಸಿದೆ...." ಎಂಬ ನುಡಿಗಳಷ್ಟೇ ಅವನ ಕಿವಿಗಳಲ್ಲಿ ದುಮುದುಮಿಸುತ್ತಿದ್ದುವು.

ಮುಕ್ತಾದೇವಿಯ ಸಾವು! ಅವಳಿಗೂ ಸಾವು ಬರಬಹುದೆಂಬ ಯೋಚನೆಯೆ ಅದುವರೆಗೆ ಅವನಿಗೆ ಹೊಳೆದಿರಲಿಲ್ಲ.

ಸಾವಿನ ಬಗೆಗೆ ಅವನಿಗೆಂದೂ ಅಂಜಿಕೆಯುಂಟಾಗಿರಲಿಲ್ಲ. ಹತ್ತು ಹದಿನೈದು ವರ್ಷಗಳ ಕಾಲ ಮೃತ್ಯುವಿನ ವಿಚಾರವೂ ಅವನ ಬಳಿ ಸುಳಿದಿರಲಿಲ್ಲ. ಈಗ, ಒಮ್ಮಿಂದೊಮ್ಮೆಲೆ ಅದು ಪ್ರತ್ಯಕ್ಷವಾಗಿತ್ತು, ತನ್ನ ಕರಾಳ ರೂಪವನ್ನು ತೆರೆದು ತೋರಿಸಿ ವಿಕಟಾಟ್ಟಹಾಸ ಮಾಡುತ್ತಿತ್ತು.

ಮೃತ್ಯು ಮುಕ್ತಾದೇವಿಯ ನೇತ್ರಗಳನ್ನು ಕೊನೆಯ ಬಾರಿಗೆ ಮುಚ್ಚಿಬಿಡುವುದು! ಆ ವಿಚಾರವೇ ಸಿದ್ಧನಾಥನನ್ನು ಸ್ತಂಭಿತನನ್ನಾಗಿಸಿತು.

"ಮುಕ್ತಾ ಸತ್ತುಹೋಗುವಳು!"

ಈ ಶಬ್ದಗಳಲ್ಲಿ ಅದೆಂಥ ಭಯಂಕರವಾದ ಭಾವ ತುಂಬಿಕೊಂಡಿದೆ! ಮುಕ್ತಾ ಸಾಯುವಳೇ? ಹಾಗಾದರೆ ಸೂರ್ಯನ ಪ್ರಕಾಶದ, ಪುಷ್ಪಗಳ ಸುಗಂಧದ, ಝರಿಗಳ ಇಂಚರದ, ಸಮಸ್ತ ಸೃಷ್ಟಿಯ ಸೌಂದರ್ಯದ ಪ್ರಯೋಜನವೇನು? ಸಂಸಾರದಿಂದ ಲಾಭವೇನು?

ಹಾಗೆ ಹೇಳಿಕೊಳ್ಳುತ್ತಾ ಆತ ಹಠಾತ್ತನೆ ಎದ್ದುನಿಂತ.

"ಅವಳು ಸಾಯುವುದೇ ನಿಜವಿದ್ದರೆ ನಾನು ಬದುಕಿಯಾದರೂ ಪ್ರಯೋಜನವೇನು? ಅವಳನ್ನೊಮ್ಮೆ ನೋಡಿಯಾದರೂ ನೋಡುತ್ತೇನೆ." ಎಂದುಕೊಳ್ಳುತ್ತಾ ಆತ ಅಲ್ಲಿಂದ ಹೊರಟು ಹೈಮವತೀದೇವಿಯ ಆಶ್ರಮದತ್ತ

ಓಡುತ್ತ ನಡೆದ. ಅವನ ವರ್ತನೆಯನ್ನು ಅರ್ಥಮಾಡಿಕೊಳ್ಳಲಾರದೆ, ಇತರ ಸಂನ್ಯಾಸಿಗಳೆಲ್ಲರೂ ದಿಗಿಲುಗೊಂಡು ನಿಂತರು.

ಆತ ಬೆಟ್ಟವಿಳಿದು ಓಡಿದ. ದೇಹದ ಪರವೆಯಿಲ್ಲದೆ ಓಡಿದ. ಕಲ್ಲಿಗೆ ಕಾಲು ತಾಕಿದುದರಿಂದ ರಕ್ತ ಸುರಿಯತೊಡಗಿತು. ಮುಳ್ಳುಕಂಟಿಗಳಿಗೆ ಸಿಕ್ಕು ಚರ್ಮ ಹರಿಯತೊಡಗಿತು. ಅದಾವುದರ ಕಡೆಗೂ ಅವನ ಗಮನವಿರಲಿಲ್ಲ.

ಬೆಟ್ಟ ಇಳಿದು ಬೆಟ್ಟ ಏರಿ ಮತ್ತೆ ಇಳಿದು ಮತ್ತೆ ಏರಿ ಆತ ಪರ್ವತದ ಹಿಂಭಾಗಕ್ಕೆ ಬಂದು ತಲಪುವಷ್ಟರಲ್ಲಿ ಕತ್ತಲಾಗಿಹೋಗಿತ್ತು. ಗಾಢಾಂಧ ಕಾರದಲ್ಲಿ ಹಾದಿ ಕಾಣಿಸದಂತಾದರೂ ಆತ ಕನಸಿನಲ್ಲಿ ನಡೆಯುವವರಂತೆ ನಡೆ ಯುತ್ತಲೇ ಇದ್ದ. ದುಃಖವೂ ಕ್ರೋಧವೂ ತುಂಬಿದ ಧ್ವನಿಯಲ್ಲಿ ಮತ್ತೆ ಮತ್ತೆ ಹೇಳಿಕೊಂಡ.

"ಎಂಥ ಮೂರ್ಖ ನಾನು ! ಎಂಥ ಮೂರ್ಖ ! ಕೈಗೆ ಬಂದಿದ್ದ ಸುಖ ವನ್ನು ನಾನಾಗಿಯೆ ಕಳೆದುಕೊಂಡೆನಲ್ಲಾ ! ಆಗಲೇ ನಾನೇಕೆ ಮುಕ್ತಾದೇವಿ ಯನ್ನು ನನ್ನವಳನ್ನಾಗಿ ಮಾಡಿಕೊಳ್ಳಲಿಲ್ಲ ? ನಾನೆಂಥ ಮೂರ್ಖ ! ಲೋಕ ದಲ್ಲಿ ಆವಳಿಗಿಂತ ಹೆಚ್ಚಿನದು ಇನ್ನೇನಿದೆ ? ಇದೆಯೆಂದು ತಿಳಿಯುವುದೇ ದೊಡ್ಡ ಮುಟ್ಠಾಳತನ ! ನಾನೊಬ್ಬ ಹುಚ್ಚ. ಭಗವಂತನ ಧ್ಯಾನ ಮಾಡಿದೆ, ನನ್ನ ಆತ್ಮದ ಉನ್ನತಿಗಾಗಿ ಕಷ್ಟಪಟ್ಟೆ, ಅನಂತ ಜೀವನದ ಕುರಿತು ಚಿಂತಿಸಿದೆ. ಮುಕ್ತಾದೇವಿಯ ಒಂದು ಚುಂಬನದ ಎದುರು ಈ ಎಲ್ಲ ವಸ್ತುಗಳ ಬೆಲೆಯಾ ದರೂ ಎಷ್ಟರದು ? ಈ ಸುಂದರಿಯ ಆಲಿಂಗನದಲ್ಲಿ ಅನಂತಾನಂತ ಸುಖ ವಿದೆಯೆಂಬುದು ನನಗೆ ಮೊದಲೇ ಯಾಕೆ ತಿಳಿಯಲಿಲ್ಲ ? ಇವಳಿಲ್ಲದ ಜೀವನ ನೀರಸ, ನಿಸ್ಸಾರ ಎಂದು ಮೊದಲೇ ಯಾಕೆ ಗೊತ್ತಾಗಲಿಲ್ಲ ? ಮುಕ್ತಾ ಇಲ್ಲದ ಬಾಳೆಂದರೇನು ? ಅದೊಂದು ದುಸ್ವಪ್ನ, ಅಷ್ಟೆ. ಮೂರ್ಖಾ ! ಅವಳ ಸಹವಾಸ ಸುಖ ಸಿಕ್ಕುವುದರಲ್ಲಿದ್ದಾಗಲೂ ನೀನು ಪರಲೋಕದ ಸುಖಗಳನ್ನು ಕುರಿತೇ ವಿಚಾರ ಮಾಡುತ್ತಿದ್ದೆ. ಹೇಡಿ ! ಅವಳನ್ನು ನೋಡಿದ ತರುವಾ ಯವೂ ನೀನು ಪರಮಾತ್ಮನಿಗೆ ಹೆದರಿದೆ ! ಭಗವಂತ....ಸ್ವರ್ಗ....ಇವುಗ ಳೆಲ್ಲಾ ಎಷ್ಟು ಬೆಲೆಯವು ? ಅವಳು ನಿನಗೆ ಕೊಡಬಹುದಾಗಿದ್ದ ಸುಖದಲ್ಲಿನ ದೊಂದು ಕ್ಷುಲ್ಲಕ ಅಂಶವನ್ನಾದರೂ ಇವು ನಿನಗೆ ಕೊಡಬಲ್ಲವೆ ? ಥೂ.... ನಿನ್ನ ಬುದ್ಧಿಗೆ ಬೆಂಕಿ ಹಾಕಲಿ ! ಮುಕ್ತಾದೇವಿಯ ಅಧರಗಳನ್ನು ಮರೆತು

ನೀನು ಬೇರೆಡೆಗೆ ಸ್ವರ್ಗೀಯ ಸುಖ ಹುಡುಕಿದೆ. ನಿನ್ನ ಕಣ್ಣುಗಳ ಮೇಲೆ ಎಂಥ ಪರದೆ ಕವಿದಿತ್ತು? ಆಗ ನಿನ್ನನ್ನು ಅಂಧನನ್ನಾಗಿಸಿದ ವ್ಯಕ್ತಿಗೆ ಧಿಕ್ಕಾರ ವಿರಲಿ. ಆವಳ ಪ್ರೇಮದ ಸವಿಯನ್ನು ಒಂದು ಗಳಿಗೆಯ ಮಟ್ಟಿಗಾದರೂ ನೀನು ಸವಿದಿದ್ದರೆ ನಿನ್ನ ಜನ್ಮ ಸಾರ್ಥಕವಾಗುತಿತ್ತು. ಕೈಗೆ ಬಂದಿದ್ದ ಸುಖದ ಬಟ್ಟಲನ್ನು ನೀನಾಗಿಯೇ ಬಿಸುಟುಬಿಟ್ಟೆ. ತನ್ನ ಸುಗಂಧಿತ ಸುಂದರ ಹಸ ಗಳನ್ನಾಕೆ ನಿನ್ನ ಮುಂದೆ ನೀಡಿದ್ದಳು; ಅವುಗಳನ್ನು ನೀನು ಹಿಡಿಯಲಿಲ್ಲ, ಅವಳ ನಗ್ನ ಎದೆಯ ಮಾಟಗಾರಿಕೆಯಲ್ಲಿ ಮೈಮರೆಯಲಿಲ್ಲ. ಅವಳಿಂದ ದೂರ ವಿರಲು ಬೋಧಿಸುತ್ತಿದ್ದ ಆ ಅಸೂಯಾಪರ ಧ್ವನಿಯನ್ನೇ ನೀನು ನೆಚ್ಚಿಕೊಂಡೆ. ಎಲಾ ಮೂರ್ಖ! ಎಂಥ ಪ್ರಮಾದವಾಯಿತು....ಎಂಥ ಪಶ್ಚಾತ್ತಾಪಪಡ ಬೇಕಾಯಿತೀಗ. ಎಂಥ ಘೋರ ನಿರಾಸೆಯನ್ನನುಭವಿಸಬೇಕಾಯಿತು! ಮುಕ್ತಾದೇವಿಯ ಸಂಗಸುಖ ಹೊಂದಿದ ಬಳಿಕ ನೀನು ನರಕಕ್ಕೆ ಹೋಗಿದ್ದರೂ ಚಿಂತೆಯಿರಲಿಲ್ಲ. ಯಮದೂತರು ನಿನ್ನ ಶರೀರವನ್ನು ಬೆಂಕಿಗೆ ಹಿಡಿದು ಸುಟ್ಟರೂ ಸರಿಯೆ, ನಿನ್ನ ನರಗಳಲ್ಲಿನ ರಕ್ತವನ್ನೆಲ್ಲ ಒಣಗಿಸಿದರೂ ಸರಿಯೆ, ನಿನ್ನ ಮೂಳೆಗಳನ್ನೆಲ್ಲ ಚೂರು ಚೂರು ಮಾಡಿದರೂ ಸರಿಯೆ, ಮುಕ್ತಾ ದೇವಿಯ ಸಹವಾಸದ ಮಧುರಸ್ಮೃತಿಯನ್ನು ಮಾತ್ರ ಅವರು ನಿನ್ನಿಂದ ಸೆಳೆದು ಕೊಳ್ಳಲು ಸಮರ್ಥರಾಗುತ್ತಿರಲಿಲ್ಲ. ಶತಮಾನಗಳ ವರೆಗೂ ನಿನ್ನನ್ನು ಉಲ್ಲ ಸಿತಗೊಳಿಸುತ್ತಿತ್ತು ಆ ಸ್ಮೃತಿ. ಅಂಥ ಸುಯೋಗವನ್ನು ಕೈಯಾರೆ ಕಳೆದು ಕೊಂಡೆ... ಮುಕ್ತಾ ಸಾಯುತ್ತಾಳೆ! ಹೇ ಹಾಸ್ಯಾಸ್ಪದ ಭಗವಂತಾ, ನಿನ್ನ ನರಕದ ಬಗ್ಗೆ ನನಗೆಷ್ಟು ನಗೆ ಬರುತ್ತಿದೆಯೆಂಬುದು ನಿನಗೆ ತಿಳಿದಿಲ್ಲ. ಅವಳು ಸಾಯುತ್ತಿದ್ದಾಳೆ........ಇನ್ನು ಆಕೆ ನನ್ನವಳಾಗಲಾರಳು........ಎಂದೂ ಆಗ ಲಾರಳು........"

ಆತ ಏಳುತ್ತ ಬೀಳುತ್ತ ನಡೆಯುತ್ತಿದ್ದ. ಹಣೆಯಿಂದ ಬೆವರು ಸುರಿ ಯುತ್ತಿತ್ತು. ಮೂಗಿನಿಂದ ಭಯಂಕರ ವೇಗದಲ್ಲಿ ಉಸಿರು ಹೊರಡುತ್ತಿತ್ತು. ಹುಚ್ಚು ಹಿಡಿದವರ ಹಾಗೆ, ಭೂತಬಾಧೆಗೊಳಗಾದವರ ಹಾಗೆ ಆತ ನಡೆಯು ತ್ತಿದ್ದ.

"ಅವಳು ನನ್ನವಳಾಗಲಾರಳು....ಆಗಲಾರಳು...."

ಸಕಲ ಪ್ರಪಂಚವನ್ನೆಲ್ಲ ಮುಕ್ತಾ ಪ್ರೇಮಧಾರೆಯಲ್ಲಿ ಸ್ನಾನ ಮಾಡಿಸಿದ

ಳಾದರೂ ತನಗೆ ಮಾತ್ರ ಆ ಭಾಗ್ಯ ಲಭಿಸಲಿಲ್ಲ. ಅವಳ ಅಧರಾಮೃತ ಸವಿದು ಎಲ್ಲರೂ ತೃಪ್ತರಾದರೂ ತನಗೆ ಮಾತ್ರ ಆ ಸುಸಂಧಿ ಲಭಿಸಲಿಲ್ಲ. ತನ್ನ ದಾಹ ಹಾಗೆಯೇ ಉಳಿದುಕೊಂಡಿತು. ಸಿದ್ಧನಾಥ ಉದ್ವಿಗ್ನನಾಗಿ ಕೂಗಿಕೊಂಡ; ಉಗುರುಗಳಿಂದ ಎದೆಯನ್ನು ಪರಚಿಕೊಂಡ. ಕೈಯ ಮಾಂಸವನ್ನೇ ಕಿತ್ತು ನುಂಗಿದ.

"ಅವಳ ಪ್ರೀತಿಯನ್ನು ಹೊಂದಿದವರನ್ನೆಲ್ಲಾ ಕೊಂದುಹಾಕಿಬಿಡುವಂತಾ ದರೆಷ್ಟು ಚೆನ್ನಾದೀತು!" ಎಂದು ಆತ ಯೋಚಿಸಿದ.

ಕೊಲೆಪಾತಕದ ಈ ವಿಚಾರ ಅವನನ್ನು ಇನ್ನೂ ಉತ್ತೇಜಿತಗೊಳಿಸಿತು. ಮಾಧವರಸನ ರಸಿಕ ಮುಖ ಅವನ ಕಣ್ಣೆದುರು ಕಾಣಿಸಿಕೊಂಡಿತು. ಅವನನ್ನು ತಾನು ನಿದಾನವಾಗಿ ಕೊಲ್ಲುತ್ತಿದ್ದಂತೆ ಭಾಸವಾಯಿತು. ಅನಂತರ, ಅವನ ಉದ್ರೇಕ ಹಠಾತ್ತನೆ ಶಾಂತವಾಯಿತು. ಆತ ಬಿಕ್ಕಿ ಬಿಕ್ಕಿ ಅಳಲಾರಂಭಿಸಿದ. ಆತ ದೀನನಾದ, ಹೀನನಾದ. ಅಜ್ಞಾತ ಕೋಮಲತೆಯೊಂದು ಎತ್ತಣಿಂ ದಲೋ ಬಂದು ಅವನ ಹೃದಯವನ್ನು ಕರಗಿಸಿತು. ತನ್ನ ಬಾಲ್ಯದ ಗೆಳೆಯ ಮಾಧವರಸನ ಕೊರಳಿನಲ್ಲಿ ಕೈಹಾಕಿ ಬರಸೆಳೆದು ತಬ್ಬಿಕೊಂಡು ಅವನನ್ನು ಕುರಿತು, "ಮಾಧವರಸ, ಮುಕ್ತಾದೇವಿಯನ್ನು ನೀನು ಪ್ರೀತಿಸಿದವನೆಂದು ನಾನೂ ನಿನ್ನನ್ನು ಪ್ರೀತಿಸುತ್ತೇನೆ. ಅವಳ ವಿಷಯವಾಗಿ ನನ್ನೊಡನೆ ಮಾತಾಡು. ಅವಳು ನಿನ್ನೊಡನೆ ಏನೇನು ಮಾತಾಡುತ್ತಿದ್ದಳೆಂಬುದನ್ನೆಲ್ಲಾ ಹೇಳು." ಎಂಬುದಾಗಿ ಕೇಳಿಕೊಳ್ಳಬೇಕೆಂದು ಅವನಿಗನ್ನಿಸಿತು.

ಅತ್ತ, ಇದನ್ನೆಲ್ಲವನ್ನೂ ಮರೆಯಿಸುವಂತೆ ಆ ಶಬ್ದಬಾಣಗಳು ಅವನ ಹೃದಯವನ್ನು ಇರಿಯುತ್ತಲೇ ಇದ್ದುವು: "ಮುಕ್ತಾ ಸಾಯುತ್ತಿದ್ದಾಳೆ........ ಸಾಯುತ್ತಿದ್ದಾಳೆ."

"ಹೇ ಜ್ಯೋತಿಯೆ, ಇರುಳಿನ ರಜತ ಛಾಯೆಗಳೇ, ಹೇ ತಾರೆಗಳೇ, ಹೇ ಆಕಾಶವೇ! ವೃಕ್ಷಗಳೇ, ಗಿರಿಶಿಖರಗಳೇ, ವನ್ಯಪಶುಗಳೇ, ಹಕ್ಕಿಗಳೇ, ಮಾನವ ಹೃದಯವೆ, ನಿಮಗಿನ್ನೂ ಗೊತ್ತಾಗಲಿಲ್ಲವೆ? ಮುಕ್ತಾ ಸಾಯುತ್ತಿ ದ್ದಾಳೆ! ಪ್ರಕಾಶವೆ, ವಾಯುವೆ, ಸುಗಂಧವೆ, ನಿಮ್ಮ ನಿಮ್ಮ ಕೆಲಸ ನಿಲ್ಲಿಸಿರಿ. ಸಂಸಾರದ ರೂಪವೆ, ವಿಚಾರಗಳೇ, ಅತ್ತ ತೊಲಗಿರಿ. ಮುಕ್ತಾ ಸಾಯುತ್ತಿ ದ್ದಾಳೆ. ಸಮಸ್ತ ಸಂಸಾರದ ಸೌಂದರ್ಯವಾಗಿದ್ದಳಾಕೆ. ಅವಳ ಹತ್ತಿರ

ಬಂದವರೆಲ್ಲರೂ ಅವಳ ಶೋಭೆಯ ಛಾಯೆಯಲ್ಲಿ ವಿಕಸಿತರಾಗುತ್ತಿದ್ದರು. ಅಂದು ಕಲ್ಯಾಣ ಪಟ್ಟಣದಲ್ಲಿ ನಡೆದ ಭೋಜನ ಕೂಟದ ಕಾಲಕ್ಕೆ ಅವಳ ಸನಿಯದಲ್ಲಿ ಕುಳಿತಿದ್ದ ಆ ವೃದ್ಧರೆಷ್ಟು ಸುಖಿಗಳಾಗಿದ್ದರು! ಅವರ ಮಾತು ಕತೆಯೆಷ್ಟು ಮಧುರವಾಗಿತ್ತು! ಅವರ ಅಧರಗಳ ಮೇಲೆ ಮುಗುಳ್ನಗೆ ಲಾಸ್ಯ ವಾಡುತ್ತಿತ್ತು. ಅವರ ವಿಚಾರಗಳು ಸುಖಾನುಭೂತಿಯಿಂದ ಆನಂದಿತವಾಗಿ ದ್ದುವು ಮುಕ್ತಾದೇವಿಯ ಛಾಯೆ ಅವರ ಮೇಲೆ ಪಸರಿಸಿದ್ದಿತೆಂದೇ ಅವರು ಮಾತಾಡುವುದೆಲ್ಲಾ ಪ್ರೇಮಯುಕ್ತವೂ ಸುಂದರವೂ ಸತ್ಯವೂ ಆಗಿತ್ತು. ಅವರ ಆ ಮಾತುಗಳಲ್ಲಿ ಮಧುರವಾದ ನಾಸ್ತಿಕತೆಯ ಶೋಭೆ ಎದ್ದು ಕಾಣುತ್ತಿತ್ತು. ಸಹಜವಾದ ರೀತಿಯಲ್ಲಿಯೇ ಅವರು ಮಾನವನ ಹಿರಿಮೆಯನ್ನು ಎತ್ತಿ ತೋರು ತ್ತಿದ್ದರು. ಅದೆಲ್ಲಾ ಈಗ ಒಂದು ಸ್ವಪ್ನದಂತಾಯಿತು. ಮುಕ್ತಾ ಸಾಯುತ್ತಿ ದ್ದಾಳೆ........ಅವಳ ಮೃತ್ಯುವಿನ ವಾರ್ತೆ ಕಿವಿಗೆ ಬಿದ್ದಾಗಿನಿಂದ ನಾನು ಮೆಲ್ಲ ಮೆಲ್ಲನೆ ಮೃತನಾಗುತ್ತಿದೇನೆ, ಮೃತ್ಯುವಿನ ಸವಿಯೇನೆಂಬುದನ್ನು ಅರಿತು ಕೊಳ್ಳತೊಡಗಿದೇನೆ. ಆದರೆ, ಎಲಾ ಶುಷ್ಕ ಪ್ರಾಣಿಯೆ, ನೀನು ಇಷ್ಟು ಸುಖ ವಾಗಿ ಸಾಯಬಲ್ಲೆಯಾ? ಎಲಾ ವಿಕೃತ ವ್ಯಕ್ತಿಯೆ, ಜೀವನದ ಸವಿಯನ್ನೇ ಅನುಭವಿಸದ ನೀನು ಸಾವಿನ ರುಚಿಯನ್ನೆಂತು ಅರಿತುಕೊಳ್ಳಬಲ್ಲೆ! ಭಗವಂತ ನಿರುವುದೇ ನಿಜವಿದ್ದರೆ ಅವನೀಗ ನನಗೆ ಶಿಕ್ಷೆ ವಿಧಿಸಲಿ. ಕಠೋರ ಶಿಕ್ಷೆ ವಿಧಿಸಲಿ.. ದೇಹಾಂತ ಶಿಕ್ಷೆ ವಿಧಿಸಲಿ. ನನಗೀಗ ಬೇಕಿರುವುದೆಂದರೆ ಅದೊಂದೇ. ಮೃತ್ಯು....ಮೃತ್ಯು....ಮೃತ್ಯು.... ಹೇ ಪರಮಾತ್ಮಾ! ನಾನು ನಿನ್ನನ್ನು ತಿರಸ್ಕರಿಸುತ್ತೇನೆ. ಆದರೂ ನನ್ನದೊಂದು ಮಾತನ್ನು ಕೇಳು. ನನ್ನನ್ನು ದಂಡಿಸು. ಅಗತ್ಯವಾಗಿ ದಂಡಿಸು. ಯಾಕೆ, ಮನಸ್ಸಿಲ್ಲವೋ ನಿನಗೆ? ಊಹೂಂ. ನಾನು ನಿನ್ನನ್ನು ಹೀಗೇ ಬಿಡುವುದಿಲ್ಲ. ನನಗೆ ನೀನು ಶಿಕ್ಷೆ ವಿಧಿ ಸುವುದು ಅನಿವಾರ್ಯವಾಗಲೆಂಬ ಉದ್ದೇಶದಿಂದ ನಿನ್ನ ಮೋರೆಯ ಮೇಲೆ ನಾನು ಉಗುಳುತ್ತೇನೆ. ಶಿಕ್ಷೆ ವಿಧಿಸು. ನನ್ನನ್ನು ಅನಂತ ನರಕದಲ್ಲಿ ಬಿಸುಟು. ಅವುಗಳಲ್ಲಿ ಕೊಳೆತು ಕೊಳೆತು ನನ್ನ ಕ್ರೋಧವೆಲ್ಲಾ ಇಲ್ಲವಾಗಲಿ."

ಹಾಗೆ ಹೇಳಿಕೊಳ್ಳುತ್ತ ಆತ ಬೆಳಗಿನ ಜಾವದಲ್ಲಿ ಸಂನ್ಯಾಸಿನಿಯರ ಆಶ್ರ ಮಕ್ಕೆ ಬಂದು ಸೇರಿದ.

ಆ ವೇಳೆಗಾಗಲೆ ಎದ್ದು ಸ್ನಾನಕ್ಕೆಂದು ಝರಿಯ ಕಡೆ ಹೊರಟಿದ್ದ ಹೈಮ

ವಶೀದೇವಿ ಆತನನ್ನು ಕಂಡು ಹೇಳಿದಳು:

"ತಂದೇ, ಈ ಬೆಳಗಿನ ಮುಹೂರ್ತದಲ್ಲೇ ತಮ್ಮನ್ನು ಕಂಡು ಧನ್ಯಳಾದೆ. ತಾವು ಆಗಮಿಸಬಹುದೆಂದು ನನಗೂ ಅನ್ನಿಸಿತ್ತು ಆಗಲೆ. ಬನ್ನಿ. ಸುಸ್ವಾಗತ ನಿಮಗೆ. ಈ ಶಾಂತಿಕುಟೀರಕ್ಕೆ ಆರ್ಪಿಸಿದ್ದ ಆ ಸಾಧು ಸ್ತ್ರೀಯ ಆತ್ಮಕ್ಕೆ ಆಶೀರ್ವಾದ ಮಾಡಲೆಂದೇ ತಾವು ಇಲ್ಲಿಯ ತನಕ ಧಾವಿಸಿ ಬಂದಿರಲು ಸಾಕು."

"ಅವಳೀಗ ಹೇಗಿದ್ದಾಳೆ?" ಸಿದ್ಧನಾಥ ಕಾತರನಾಗಿ ಕೇಳಿದ.

"ಯಾವ ಉದ್ದೇಶಕ್ಕಾಗಿ ತಾವು ಅವಳನ್ನಿಲ್ಲಿ ತಂದು ಇರಿಸಿದರೋ ಅದು ನೆರವೇರಿತು. ಕೊನೆಗೂ ಅವಳ ಮೇಲೆ ಪರಮಾತ್ಮನ ಕೃಪೆಯಾಯಿತು. ಅವಳನ್ನು ಆತ ಪ್ರೀತಿಯಿಂದ ತನ್ನ ಹತ್ತಿರ ಬರಮಾಡಿಕೊಳ್ಳುತ್ತಿದಾನೆ. ದೇವದೂತರು ಈ ಸಮಾಚಾರವನ್ನು ಲೋಕದ ಮೂಲೆ ಮೂಲೆಗಳಿಗೂ ಹರಡುತ್ತಿದಾರೆ. ಮುಕ್ತಾಳ ಮುಕ್ತಿ ಇನ್ನೇನು ಸಮೀಪದಲ್ಲೇ ಇದೆ. ಅವಳ ಕಾರ್ಯ ಸಮಾಪ್ತವಾಗಿದೆ. ತಾವು ಅವಳನ್ನಿಲ್ಲಿ ಬಿಟ್ಟುಹೋದ ತರುವಾಯ ಆಕೆ ನಮ್ಮ ಮಧ್ಯೆ ಹೇಗೆ ಜೀವಿಸಿದ್ದಳೆಂಬುದನ್ನು ಹೇಳುತ್ತೇನೆ. ಕೇಳಿ. ನೀವು ಅವಳನ್ನು ಕುಟೀರದಲ್ಲಿ ಸೇರಿಸಿ ಬಾಗಿಲಿಗೆ ಮುದ್ರೆಯನ್ನೊತ್ತಿ ಹೋದ ಬಳಿಕ ಆಹಾರ ಪದಾರ್ಥಗಳ ಜೊತೆಯಲ್ಲಿ ಒಂದು ಕೊಳಲನ್ನೂ ನಾನು ಕಳಿಸಿದ್ದೆ. ಅವಳು ಉದಾಸೀನಳಾಗದಿರಲೆಂಬ ಉದ್ದೇಶದಿಂದಲೇ ನಾನು ಆ ಕೊಳಲು ಕೊಟ್ಟಿದ್ದೆ. ಹಾಗೆ ಮಾಡಿದ್ದೂ ಒಳ್ಳೆಯದೇ ಆಯಿತು. ಪ್ರತಿದಿನವೂ ಅವಳು ಆ ಕೊಳಲಿನ ಮೂಲಕ ಪರಮಾತ್ಮನ ಗುಣಗಾನ ಮಾಡುತ್ತಿದ್ದಳು. ಆ ಕೊಳಲಿನ ದನಿಯಿಂದ ಆಕರ್ಷಿತರಾದ ಕುಮಾರಿಯರು, ಸ್ವರ್ಗಕುಂಜದಲ್ಲಿನ ಕೋಗಿಲೆಯ ಸ್ವರವೇ ತಮಗೆ ಕೇಳಿಸುತ್ತಿದೆಯೆಂದು ಭಾವಿಸುತ್ತಿದ್ದರು. ಈ ರೀತಿ ಮುಕ್ತಾ ತಪಸ್ಸು ನಡಸುತ್ತಿದ್ದಳು. ಅರವತ್ತು ದಿನಗಳ ತರುವಾಯ, ತಾವು ಮುಚ್ಚಿದ ಬಾಗಿಲು ತನ್ನಷ್ಟಕ್ಕೆ ತಾನೇ ತೆರೆಯಿತು. ತಾವು ಹಾಕಿದ ಬೀಗಮುದ್ರೆ, ಯಾರ ಸ್ಪರ್ಶವೂ ಇಲ್ಲದೇನೇ ತನ್ನಷ್ಟಕ್ಕೆ ತಾನೇ ಒಡೆಯಿತು. ತಾವು ವಿಧಿಸಿದ ಪರೀಕ್ಷೆ ಕೊನೆಗಂಡಿತೆಂದೂ ಮುಕ್ತಾದೇವಿಯ ಪಾಪಗಳನ್ನು ಭಗವಂತ ಕ್ಷಮಿಸಿದನೆಂದೂ ಈ ಸಂಕೇತ ಸಾರಿ ಹೇಳಿತು. ಅಂದಿನಿಂದ ಅವಳೂ ಕೂಡಾ ನನ್ನ ಇತರ ಪುತ್ರಿಯರ ಹಾಗೆಯೇ ಜೀವನ ಸಾಗಿಸತೊಡಗಿದಳು. ಅವರು ಮಾಡುವ ಕೆಲಸಗಳನ್ನೇ ಮಾಡತೊಡಗಿದಳು. ತನ್ನ ಕಾರ್ಯಕ್ಷಮತೆ

ಯಿಂದಲೂ ವಿನಯಶೀಲತೆಯಿಂದಲೂ ಅವಳು ಎಲ್ಲರಿಗೂ ಮಾದರಿಯೆನಿಸಿಕೊಂಡಳು. ಅವರೆಲ್ಲರ ನಡುವೆ ಅವಳು ಲಜ್ಜೆಯ ಮೂರ್ತಿಯಂತೆಯೆ ಕಾಣಿಸುತ್ತಿದ್ದಳು. ಆಗಾಗ ಆಕೆ ಉದಾಸೀನಳಾಗುತ್ತಿದ್ದುದೂ ಇತ್ತು. ಆದರೂ ಉದಾಸೀನತೆಯ ಮೋಡಗಳು ಬಲುಬೇಗ ಚದರಿ ಹೋಗುತ್ತಿದ್ದುವು. ಅವಳು ಪ್ರೇಮ ವಿಶ್ವಾಸಗಳಿಂದ ಭಗವಂತನೊಡನೆ ಸಮ್ಮಿಲಿತಳಾಗುತ್ತಲೂ ಅವಳ ಸೌಂದರ್ಯವನ್ನೂ ಪ್ರತಿಭೆಯನ್ನೂ ಆಶ್ರಮವಾಸಿನಿಯರ ಆಧ್ಯಾತ್ಮಿಕ ಉನ್ನತಿಗಾಗಿ ಉಪಯೋಗಿಸಿಕೊಳ್ಳಬಹುದೆಂದು ನನಗನ್ನಿಸಿತು. ಧರ್ಮಗ್ರಂಥಗಳಲ್ಲಿ ಚಿತ್ರಿಸಲ್ಪಟ್ಟ ಸಂತ ಸ್ತ್ರೀಯರ ಚರಿತ್ರೆಗಳನ್ನು ಸಂನ್ಯಾಸಿನಿಯರೆದುರು ಅಭಿನಯಿಸಿ ತೋರಿಸಬೇಕೆಂದು ನಾನು ಸೂಚಿಸಿದೆ. ಅವಳು ಅತ್ಯಂತ ಸಂತಸದಿಂದ ಆ ಕಾರ್ಯವನ್ನು ನೆರವೇರಿಸಿದಳು. ಈ ಬಗೆಯ ಅಭಿನಯಗಳೆಂದರೆ ತಮಗೆ ಹೇಗೆ ಹೇಗೋ ಅನ್ನಿಸಬಹುದು. ಆದರೆ ಆಗ ತಾವೇ ಇಲ್ಲಿ ಉಪಸ್ಥಿತರಾಗಿದ್ದರೆ ಅವಳ ಆಧ್ಯಾತ್ಮಿಕ ಅಭಿನಯವನ್ನು ಕಂಡು ಕಣ್ಣೀರು ಸುರಿಸಬಹುದಾಗಿತ್ತು. ನಾನು ಅನೇಕ ದಿನಗಳ ಕಾಲ ಈ ಸ್ತ್ರೀಯರ ಮೇಲೆ ಅಧಿಕಾರ ನಡೆಸಿದ್ದೇನೆ. ಅವರ ಸ್ವಭಾವಗಳ ವಿರುದ್ಧ ವರ್ತಿಸಬಾರದೆಂಬುದು ನನ್ನದೊಂದು ನಿಯಮ. ಎಲ್ಲಾ ಬೀಜಗಳೂ ಒಂದೇ ಬಗೆಯ ಹೂವುಗಳನ್ನು ನಿರ್ಮಿಸುವುದಿಲ್ಲ. ಅದರಂತೆಯೆ, ಎಲ್ಲಾ ಆತ್ಮಗಳನ್ನೂ ಒಂದೇ ರೀತಿಯಿಂದ ಪವಿತ್ರಗೊಳಿಸಲಾಗುವುದಿಲ್ಲ. ಮುಕ್ತಾ ಇನ್ನೂ ಸುಂದರಿಯಾಗಿದ್ದಾಗಲೇ ಭಗವಂತನಿಗೆ ಆತ್ಮಸಮರ್ಪಣ ಮಾಡಿದಳೆಂಬುದನ್ನು ನಾವು ಮರೆಯಬಾರದು. ಅದೊಂದು ಅಸಾಧಾರಣ ವಿಷಯವೇನೂ ಅಲ್ಲವಾದರೂ ಅತ್ಯಂತ ಕಷ್ಟಕರವಾದುದಂತೂ ಆಗಿತ್ತು. ಮೂರುತಿಂಗಳುಗಳ ಜ್ವರದಿಂದ ನರಳಿ ಸಾಯುತ್ತಿರುವ ಈ ಗಳಿಗೆಯಲ್ಲೂ ಆ ಸ್ವಾಭಾವಿಕ ಸೌಂದರ್ಯ ಅವಳನ್ನು ತ್ಯಜಿಸಿಲ್ಲ. ಕಾಹಿಲೆಯಿಂದ ಸಂಕಟಪಡುತ್ತಿದ್ದಾಗಲೂ ಸ್ವರ್ಗದತ್ತಲೇ ದೃಷ್ಟಿಯಿರಿಸಿದ್ದಳು. ನನ್ನ ಕುಮಾರಿಯರು ಪ್ರಾರ್ಥನೆಗಾಗಿ ಸೇರುವ ಬಯಲಲ್ಲಿ, ಪ್ರಾಚೀನ ಕಾಲದ ಅಶ್ವತ್ಥ ವೃಕ್ಷದ ನೆರಳಲ್ಲಿ ನಾನು ಆಕೆಯನ್ನು ಮಲಗಿಸುತ್ತಿದ್ದೆ. ಈಗಲೂ ಮುಕ್ತಾ ಅಲ್ಲಿಯೇ ಮಲಗಿದಾಳೆ. ನೀವು ಆಕೆಯನ್ನು ಅಲ್ಲಿಯೇ ನೋಡಬಹುದು. ಬನ್ನಿ. ಬೇಗ ಬನ್ನಿ. ಭಗವಂತ ಅವಳನ್ನು ಕರೆದೊಯ್ಯುತ್ತಿದಾನೆ."

ಹೈಮವತೀದೇವಿಯ ಜೊತೆಗೆ ಪ್ರಾತಃಕಾಲದ ಪ್ರಕಾಶದಿಂದ ಬೆಳಗು

ತ್ತಿದ್ದ ಅಂಗಳಕ್ಕೆ ಬಂದ ಸಿದ್ಧನಾಥ. ಬಯಲಿನದೊಂದು ಭಾಗದಲ್ಲಿ ಪಾರಿವಾಳಗಳು ಅತ್ತಿತ್ತ ಅಡಿಯಿಡುತ್ತಿದ್ದುವು. ಅಶ್ವತ್ಥ ವೃಕ್ಷದ ಅಡಿಯಲ್ಲಿ ಹಾಸಿದ್ದ ಶಯ್ಯೆಯ ಮೇಲೆ, ಕೈಯಮೇಲೆ ಕೈ ಹಾಕಿ, ಕಳೆಗುಂದಿದ ಮೊಗದ ಮುಕ್ತಾ ಪವಡಿಸಿದ್ದಳು. ಆವಳ ಹತ್ತಿರ ಕುಳಿತು ಸಂನ್ಯಾಸಿನಿಯರು ಪ್ರಾರ್ಥಿಸುತ್ತಿದ್ದರು:

"ಭಗವಂತಾ, ನಿನ್ನ ಸ್ನೇಹದ ವರದಹಸ್ತ ಇವಳ ಶಿರದ ಮೇಲಾಡಲಿ. ನಿನ್ನ ಕರುಣೆಯಿಂದ ಇವಳ ಪಾಪಗಳೆಲ್ಲ ದೂರವಾಗಲಿ."

ಸಿದ್ಧನಾಥ ಕೂಗಿದ: "ಮುಕ್ತಾ!"

ಮುಕ್ತಾ ಕಣ್ತೆರೆದು ತನ್ನ ಕಳಾಹೀನ ದೃಷ್ಟಿಯನ್ನು ಅತ್ತ ತಿರುಗಿಸಿದಳು.

"ನೀವು ಸ್ವಲ್ಪ ದೂರ ಕೂತುಕೊಳ್ಳಿರಿ." ಎಂದು ಹೈಮವತೀದೇವಿ, ಪ್ರಾರ್ಥನೆ ಮಾಡುತ್ತಿದ್ದ ಸಂನ್ಯಾಸಿನಿಯರನ್ನು ಕುರಿತು ಹೇಳಿದಳು.

ಸಿದ್ಧನಾಥ ಪುನಃ ಕೂಗಿ ಕರೆದ: "ಮುಕ್ತಾ! ಮುಕ್ತಾದೇವೀ!"

ತಲೆಯನ್ನು ಅತ್ತ ತಿರುಗಿಸಿದಳು ಮುಕ್ತಾ. ಅವಳ ರಕ್ತಶೂನ್ಯ ಅಧರಗಳಿಂದ ಕಿರುದನಿಯೊಂದು ಹೊರಬಂದಿತು:

"ಯಾರವರು? ತಂದೇ, ನೀನೇ ಅಲ್ಲವೆ? ಅಂದು ಗುಡ್ಡದ ದಾರಿಯಲ್ಲಿ ನಾವಿಬ್ಬರೂ ನಡೆದು ಬರುತ್ತಿದ್ದುದರ ನೆನಪು ನಿನಗಿದೆಯಷ್ಟೆ?"

"ನೆನಪಿದೆ ಮುಕ್ತಾ, ಎಲ್ಲವೂ ನೆನಪಿದೆ."

"ನನ್ನ ಮೇಲೆ ನಿನ್ನದು ಬಹಳ ಉಪಕಾರವಾಯಿತು ತಂದೇ! ನರಕದಲ್ಲಿ ಬಿದ್ದುಕೊಂಡಿದ್ದ ನನ್ನನ್ನು ನೀನು ಸ್ವರ್ಗಕ್ಕೆ ಕರೆದು ತಂದೆ. ಪಾಪಪಂಕದಲ್ಲಿ ಕೊಳೆಯುತ್ತಿದ್ದ ನನ್ನನ್ನು ನೀನು ಪುಣ್ಯಗೃಹಕ್ಕೆ ಕರೆದು ತಂದೆ...."

ಅಷ್ಟು ಹೇಳಿ ಅವಳು ಮಾತು ನಿಲ್ಲಿಸಿದಳು. ಅವಳ ಕತ್ತು ಅತ್ತ ಹೊರಳಿಕೊಂಡಿತು.

ಅವಳ ಮೇಲೆ ಮೃತ್ಯುವಿನ ಛಾಯೆ ಕವಿಯತೊಡಗಿತ್ತು. ಹಣೆಯಮೇಲೆ ವೇದನೆಯ ಬೆವರು ಹನಿಯುತ್ತಿತ್ತು. ಭೀಕರವಾದ ನೀರವತೆಯನ್ನು ಭಂಗಗೊಳಿಸುತ್ತ ನರಿಯೊಂದು ಕೂಗಿಕೊಂಡಿತು. ಸಂನ್ಯಾಸಿನಿಯರು ಪ್ರಾರ್ಥನೆ ಮಾಡತೊಡಗಿದರು:

"ಜಯ ಶಂಕರ! ಜಯ ಶಂಕರ! ಜಯ ಗೌರೀಶಂಕರ!"

ನಮ್ಮ ಕಲಂಕಗಳನ್ನು ತೊಳೆದು ಬಿಡು. ನಮ್ಮ ಪಾಪಗಳನ್ನು ನಷ್ಟ

ಗೊಳಿಸು.

"ಜಯ ಶಂಕರ ! ಜಯ ಶಂಕರ ! ಜಯ ಗೌರೀಶಂಕರ !"

ಆ ಪ್ರಾರ್ಥನಾ ಸ್ವರದೊಂದಿಗೆ ಸಿದ್ಧನಾಥನ ಬಿಕ್ಕಳಿಕೆಯ ಸ್ವರವೂ ಸೇರಿ ಕೊಂಡಿತು. ಹಠಾತ್ತಾಗಿ ಮುಕ್ತಾ ಹಾಸಿಗೆಯ ಮೇಲೆದ್ದು ಕುಳಿತಳು. ಅವಳ ನೀಲ ನೇತ್ರಗಳು ವಿಸ್ಫುರಿತವಾದುವು. ದೂರದ ಬೆಟ್ಟಗಳತ್ತ ಬಾಹುಗಳನ್ನು ಚಾಚುತ್ತ ಅವಳೆಂದಳು:

"ಅನಂತ ಪ್ರಭಾತದ ಗುಲಾಬಿ ಉಷಾ ಉದಯಿಸುತ್ತಿದ್ದಾಳೆ. ನಮ ಸ್ಕಾರ ತಾಯಿ, ನಿನಗೆ ನಮಸ್ಕಾರ."

ಅವಳ ಕಣ್ಣು ಮಿಂಚಿದುವು. ಕಿವಿಗಳ ಮೇಲೆ ಬಣ್ಣವೇರಿತು. ಅವಳು ಎಂದಿಗಿಂತಲೂ ಹೆಚ್ಚು ಕೋಮಲೆಯೂ ಸುಂದರಿಯೂ ಆಗಿ ಕಾಣಿಸಿದಳು.

ಅವಳನ್ನೇ ದಿಟ್ಟಿಸುತ್ತಿದ್ದ ಸಿದ್ಧನಾಥ ಥಟ್ಟನೆ ಮುಂದೆ ಬಂದು ಅವಳನ್ನು ತನ್ನ ಬಾಹುಗಳಲ್ಲಿ ಬಿಗಿದುಕೊಂಡ. ತಾನೇ ಗುರುತಿಸಲಾರದಂಥ ಸ್ವರದಲ್ಲಿ ಆತ ಹೇಳಿದ:

"ಸಾಯಬೇಡ ಮುಕ್ತಾ, ಸಾಯಬೇಡ ನಾನಿನ್ನೂ ಬದುಕಿರುವಾಗ ನೀನು ಸಾಯುವುದೆಂದರೇನು ? ನಾನು ನಿನ್ನನ್ನು ಪ್ರೀತಿಸುತ್ತೇನೆ. ನನ್ನ ಪ್ರಾಣಕ್ಕಿಂತ ಹೆಚ್ಚಾಗಿ ಪ್ರೀತಿಸುತ್ತೇನೆ. ನಾನು ಮೂರ್ಖ; ನಿನ್ನನ್ನು ಮೋಸ ಗೊಳಿಸಿದೆ. ಭಗವಂತನಿರುವುದೂ ಸುಳ್ಳು, ಸ್ವರ್ಗವಿರುವುದೂ ಸುಳ್ಳು. ಇಹ ಜೀವನವೇ ಸತ್ಯ, ಸಾಂಸಾರಿಕ ಪ್ರೇಮವೇ ಸತ್ಯ. ನಿನ್ನನ್ನು ನಾನು ಪ್ರೀತಿ ಸುತ್ತೇನೆ. ಮುಕ್ತಾ, ನೀನು ಸತ್ತುಹೋದರೆ ನನ್ನ ಗತಿಯೇನು ? ಸಾಯುವ ದಕ್ಕಾಗಿ ಹುಟ್ಟಿಬಂದವಳಲ್ಲ ನೀನು. ಏಳು, ನನ್ನೊಡನೆ ಬಾ. ಈ ಬಾಹು ಗಳಲ್ಲಿ ನಿನ್ನನ್ನು ಹಿಡಿದೆತ್ತಿಕೊಂಡು ದೂರ ಯಾವುದೊಂದು ಪ್ರದೇಶಕ್ಕೆ ಕರೆ ದೊಯ್ಯುತ್ತೇನೆ. ಬಾ. ನಾವಿಬ್ಬರೂ ಪ್ರೇಮಕೇಳಿಯಲ್ಲಿ ನಿರತರಾಗೋಣ. ಪ್ರಿಯೆ, ನನ್ನ ಮಾತು ಕೇಳು. ನನ್ನೊಡನೆ ಬದುಕುವೆನೆಂದು ಹೇಳು. ಏಳು. ಈಗ ಏಳು."

ಅವನ ಮಾತು ಮುಕ್ತಾಗೆ ಅರ್ಥವಾಗಲಿಲ್ಲ. ಅವಳ ಕಣ್ಣುಗಳು ಅನಂತದಲ್ಲಿ ವಿಹರಿಸುತ್ತಿದ್ದುವು. ಮೆಲ್ಲಗಿನ ದನಿಯಲ್ಲಿ ಅವಳು ಹೇಳಿದಳು:

"ಸ್ವರ್ಗದ ಬಾಗಿಲು ತೆರೆಯುತ್ತಿದೆ. ದೇವದೂತರು, ಗಣಂಗಳು,

ಪ್ರಮಥರು ಕಾಣಿಸುತ್ತಿದಾರೆ. ಸಾಧು ಕಾಪಾಲಿಯ ಮುಖವೂ ಕಾಣುತ್ತಿದೆ. ಕೈಗಳಲ್ಲಿ ಹೂವಿನ ಹಾರ ಹಿಡಿದು ಆತ ನಗುನಗುತ್ತಾ ನನ್ನನ್ನು ಕರೆಯುತ್ತಿದಾನೆ. ದೇವದೂತರಿಬ್ಬರು ನನ್ನನ್ನು ಕರೆದೊಯ್ಯಲು ಬರುತ್ತಿದಾರೆ. ಬಂದರು ....ಬಂದೇ ಬಿಟ್ಟರು.... ಅಹಾ! ಅವರೆಷ್ಟು ಸುಂದರರಾಗಿದಾರೆ! ಈಗ ಸಾಕ್ಷಾತ್ ಭಗವಂತನ ಮುಖಕಮಲವೇ ಕಾಣಿಸುತ್ತಿದೆ."

ಅವಳು ಹರ್ಷದಿಂದ ಉಸಿರೆಳೆದುಕೊಂಡಳು. ಅನಂತರ ಅವಳ ತಲೆ ಅತ್ತ ತಿರುಗಿ ನಿಶ್ಚಲವಾಗಿ ಬಿದ್ದುಕೊಂಡಿತು.

........ಮುಕ್ತಾ ಸತ್ತುಹೋದಳು....

ವಿಷಯವಾಸನೆಯಿಂದ ಹುಚ್ಚನಾಗಿದ್ದ ಸಿದ್ಧನಾಥ ಅವಳ ದೇಹವನ್ನು ಗಟ್ಟಿಯಾಗಿ ಅಪ್ಪಿ ಕೂಗಿಕೊಂಡ: "ಮುಕ್ತಾ! ಮುಕ್ತಾ! ನನ್ನ ಮುಕ್ತಾ! ನನ್ನ ಪ್ರೇಮದ ಪುತ್ಥಳೀ!"

ಹೈಮವತೀದೇವಿ ದೂರ ಸರಿದು ಕೂಗಿಕೊಂಡಳು: "ಅವಳನ್ನು ಬಿಟ್ಟು ಬಿಡು ನೀಚಾ! ಬಿಟ್ಟುಬಿಡು!"

ಮತ್ತೆ ಹತ್ತಿರ ಬಂದು ಮುಕ್ತಾದೇವಿಯ ಕಣ್ಣುಗಳನ್ನಾಕೆ ಮುಚ್ಚಿದಳು. ಸಿದ್ಧನಾಥ ಥರ ಥರ ನಡುಗುತ್ತಾ ಹಿಂದೆ ಸರಿದ. ಅವನ ಕಣ್ಣುಗಳು ಜ್ವಾಲಾಮಯವಾಗಿದ್ದುವು, ಕಾಲಿನ ಕೆಳಗಿನ ಭೂಮಿಯೇ ಇಬ್ಭಾಗವಾಗುತ್ತಿದ್ದಂತೆ ಅವನಿಗೆ ಭಾಸವಾಗುತ್ತಿತ್ತು.

ಸಂನ್ಯಾಸಿನಿಯರು ಭಜನೆಗಾರಂಭಿಸಿದ್ದರು:

"ಜಯ ಶಂಕರ! ಜಯ ಶಂಕರ! ಜಯ ಗೌರೀಶಂಕರ!"

ಇದ್ದಕ್ಕಿದ್ದ ಹಾಗೆಯೆ ಅವರ ಭಜನೆ ಕಂಠದಲ್ಲಿಯೆ ತಡೆದು ನಿಂತಿತು. ಸಿದ್ಧನಾಥನ ಮುಖವನ್ನು ಕಂಡು ಭೀತಿಯಿಂದ ಕಿರಿಚಿಕೊಳ್ಳುತ್ತ ಅವರು ಅಲ್ಲಿಂದೆದ್ದು ಓಡಿದರು.

"ಭೂತ! ಭೂತ! ಭೂತ!" ಎಂದಳು ಹೈಮವತೀದೇವಿ.

ಅಂಥ ಬೀಭತ್ಸ ಮುಖಮುದ್ರೆಯನ್ನು ಆಕೆ ಹಿಂದೆಂದೂ ನೋಡಿರಲಿಲ್ಲ.

---

# ಈ ಲೇಖಕರ ಇತರ ಕೃತಿಗಳು

---

**ಕಾದಂಬರಿಗಳು :—**

ಸ್ವಾತಂತ್ರ್ಯದೆಡೆಗೆ
ಮಾಡಿ ಮಡಿದವರು
ಜ್ವಾಲಾಮುಖಿಯ ಮೇಲೆ
ಮೋಹದ ಬಲೆಯಲ್ಲಿ
ಬೀದಿಯಲ್ಲಿ ಬಿದ್ದವಳು
ಜರತಾರಿ ಜಗದ್ಗುರು
ಮಣ್ಣು ಮತ್ತು ಹೆಣ್ಣು
ಖಾನಾವಳಿಯ ನೀಲಾ
ನೀನೆನ್ನ ಮುಟ್ಟಬೇಡ
ಜನಿವಾರ ಮತ್ತು ಶಿವದಾರ
ಬಲೆಯ ಬೀಸಿದರು
ನಾನು ಪೋಲೀಸನಾಗಿದ್ದೆ
ಬಂಗಾರದ ಜಿಂಕೆಯ ಹಿಂದೆ
ಗೋವಾದೇವಿ
ಪಾತರಗಿತ್ತಿ
ಬೆಳಗಿನ ಗಾಳಿ

**ಕಥಾಸಂಗ್ರಹಗಳು :—**

ಕಾರವಾನ್
ಗುಲಾಬಿ ಹೂ
ಆಗಸ್ಟ್ ಒಂಭತ್ತು
ಸೆರೆಯಿಂದ ಹೊರಗೆ
ಜೋಳದ ಬೆಳೆಯ ನಡುವೆ

**ನಾಟಕ :—**

ಪಟ್ಟಣದ ಹುಡುಗಿ